ಮುಂಬಯಿ ವಿದ್ಯಾಖಾತೆಯ ಪಠ್ಯಪುಸ್ತಕವೆಂದು ಮಂಜೂರಾಗಿದೆ

# ಐತಿಹಾಸಿಕ ಕಥೆಗಳು

೪ನೆಯ ಇಯತ್ತೆಗೆ




ಲೇಖಕರು:

ಜಿ. ವ್ಹಿ. ಅಂಗಡಿ, ಬಿ. ಎ. (ಆನರ್ಸ)
ಅಧ್ಯಾಪಕರು, ಆರ್. ಎಲ್. ಎಸ್. ಹೈಸ್ಕೂಲ, ಧಾರವಾಡ

ಬಿ. ಎಮ್. ಯರಗಟ್ಟಿ, ಎಸ್. ಟಿ. ಸಿ.
ಶಿಕ್ಷಕರು, ಗೋಕಾಕ



ಪ್ರಕಾಶಕರು:

ಕನ್ನಡ ಸಾಹಿತ್ಯ ಪ್ರಕಾಶನ
ಧಾರವಾಡ

೧೯೫೭

ಬೆಲೆ: ರೂ. ೧—೧೨—೦

# ಮೊದಲುನುಡಿ

ಕನ್ನಡ ನಾಲ್ಕನೆಯ ವಿದ್ಯಾರ್ಥಿಗಳಿಗಾಗಿ ಇತಿಹಾಸದ ಅಭ್ಯಾಸಕ್ಕೆಂದು ಅನು-ಗೊಳಿಸಿದ ಪುಸ್ತಕವಿದು. ಮೊದಲು ಈ ವಿದ್ಯಾರ್ಥಿಗಳು ಇತಿಹಾಸಾಭ್ಯಾಸಕ್ಕಾಗಿ ತಮ್ಮ ತಮ್ಮ ಭಾಷಾಪ್ರದೇಶದ ಇತಿಹಾಸಭಾಗಗಳನ್ನು ಓದಬೇಕಾಗುತ್ತಿತ್ತು. ಈಗ ಮುಂಬಯಿ ಸರಕಾರದ ವಿದ್ಯಾಖಾತೆಯವರು ಪ್ರಕಟಿಸಿದ ಹೊಸ ಅಭ್ಯಾಸಪತ್ರಿಕೆಯಲ್ಲಿ, ಐವತ್ತುಜನ ಮಹಾಪುರುಷರ ಮತ್ತು ಮಹಾಮಹಿಳೆಯರ ಹೆಸರುಗಳನ್ನು ಕೊಟ್ಟು, ಅವರ ಜೀವನ ಕಥೆಗಳ ಸಂಕಲನವನ್ನೇ ನಾಲ್ಕನೆಯ ಇಯತ್ತೆಗೆ ಪಠ್ಯಪುಸ್ತಕವೆಂದು ನಿಯಮಿಸುವುದಾಗಿ ಹೇಳಲಾಗಿದೆ. ಹೊಸ ಅಭ್ಯಾಸಪತ್ರಿಕೆಯ ಗೊತ್ತು-ಗುರಿಗಳನ್ನು ಲಕ್ಷ್ಯದಲ್ಲಿ ಇರಿಸಿಕೊಂಡೇ ನಾವು ಈ ಜೀವನಕಥಾ ಸಂಕಲನವನ್ನು ಬರೆದು ಸಿದ್ಧಗೊಳಿಸಿದ್ದೇವೆ.

ಇದರಲ್ಲಿ ಬಂದಿರುವ ಜೀವನಕಥಾ ವ್ಯಕ್ತಿಗಳೆಲ್ಲ ಬಹಳ ದೊಡ್ಡವರು. ಅವರು ಮಾಡಿದ ಕಾರ್ಯಗಳೂ ಘನವಾದುವು. ಸುಮಾರು ೯-೧೦ ವರ್ಷದ ವಯಸ್ಸಿನವರಾದ ನಾಲ್ಕನೆಯ ಇಯತ್ತೆಯ ವಿದ್ಯಾರ್ಥಿಗಳಿಗೆ ಚೆನ್ನಾಗಿ ತಿಳಿಯುವಂತೆ, ಆ ಆ ವ್ಯಕ್ತಿಗಳ ಜೀವನಕಥೆಗಳನ್ನು ಸುಲಭಭಾಷೆಯಲ್ಲಿ ಬರೆಯುವುದು ಕಠಿಣವಾದ ಕೆಲಸವೇ ಸರಿ. ಆದರೂ ನಾವು ಹಲವು ಬಗೆಯಿಂದ ವಿಚಾರವನ್ನೂ ಪ್ರಯತ್ನವನ್ನೂ ಮಾಡಿ, ವಿಷಯಸೌಲಭ್ಯವನ್ನೂ ಭಾಷಾಸೌಲಭ್ಯವನ್ನೂ ಇಲ್ಲಿ ಒದಗಿಸಿಕೊಟ್ಟಿದ್ದೇವೆ.

ಮಹಾವ್ಯಕ್ತಿಗಳ ಜೀವನದ ಸಂಪೂರ್ಣವಿವರಣೆಗಳನ್ನು ಕೊಡಲಿಕ್ಕೆ ಈ ಚಿಕ್ಕ ಜೀವನಕಥೆಗಳಲ್ಲಿ ಹೇಗೆ ಸಾಧ್ಯವಾಗಬೇಕು? ಆದುದರಿಂದಲೆ ಚಿಕ್ಕಮಕ್ಕಳ ಮನಸ್ಸಿನ ಮೇಲೆ ಆ ವ್ಯಕ್ತಿಯ ಹಿರಿಮೆಯು ಮೂಡುವುದಕ್ಕೆ ಎಷ್ಟೆಷ್ಟು ವಿವರಣೆಗಳು ಬೇಕೊ, ಅಷ್ಟನ್ನು ಮಾತ್ರ ಇವುಗಳಲ್ಲಿ ಬಳಸಿಕೊಂಡಿದ್ದೇವೆ. "ಈ ವಿವರಣೆಗಿಂತ ಇನ್ನೊಂದು ವಿವರಣೆ ಬಂದಿದ್ದರೆ ಚೆನ್ನಾಗಿತ್ತು" ಎಂದೂ ಕೆಲವರು ಹೇಳಬಹುದಾಗಿದೆ. ಹಾಗೆ ಹೇಳುವ-ವರಿಗೆಲ್ಲ ಸ್ಥಳಸಂಕೋಚದ ಕಾರಣವನ್ನೇ ಮುಂದೊಡ್ಡಿ ಕ್ಷಮೆಯನ್ನು ಕೇಳಿಕೊಳ್ಳಬೇಕಾ ಗುತ್ತದೆ. ಏಕೆಂದರೆ, ಅದನ್ನು ಹಾಕಿದ್ದರೆ ಇದನ್ನು ಬಿಡಬೇಕಾಗುತ್ತಿತ್ತು.

ಇದರಲ್ಲಿ ಬರುವ ಮಹಾವ್ಯಕ್ತಿಗಳನ್ನು, ವಿದ್ಯಾರ್ಥಿಗಳಿಗೆ ಮಾನವರೆಂದೇ ಪರಿಚಯ ಮಾಡಿಕೊಡಲಾಗಿದೆ, ಹೊರತು ಅತಿಮಾನವರೆಂದು ಅಲ್ಲ. ಧಾರ್ಮಿಕ ಮಹಾಪುರುಷರ ಮತ್ತು ಭಕ್ತರ ಚರಿತ್ರೆಗಳಲ್ಲಿ, ಪರಂಪರೆಯಿಂದ ನಡೆದುಕೊಂಡು ಬಂದ ಪವಾಡದ ಕಥೆಗಳು ತುಂಬಿರುವುವು. ಅಂತಹ ಪವಾಡಗಳಿಗೆ ಈ ಸಂಕಲನದಲ್ಲಿ ಹೆಚ್ಚಾಗಿ ಎಡೆಗೊಟ್ಟಿಲ್ಲ. ಅನಿವಾರ್ಯವಾಗಿ ಹೇಳಲೇ ಬೇಕಾಗಿ ಬಂದ ಕೆಲವು ಪವಾಡದ ಕಥೆಗಳನ್ನು, ಹೆಚ್ಚಿನ ರಂಜಕತೆಯನ್ನು ಕಡಿಮೆಮಾಡಿ ಸ್ವಾಭಾವಿಕವೆನಿಸುವಂತೆ ಹೇಳಲಾಗಿದೆ. ನಾಲ್ಕನೆಯ ಇಯತ್ತೆಯವರಿಗೆ ತಿಳಿಯುವಂತೆ ಕಥೆಗಳ ಭಾಷೆಯನ್ನು ಸಾಧ್ಯವಿದ್ದಷ್ಟು ಸುಲಭವಾಗಿ-ಸಿದ್ದೇವೆ. ಆದರೂ ಹೊಸ-ಹೊಸ ಜೀವನಗಳನ್ನು ಪರಿಚಯ ಮಾಡಿಕೊಡಬೇಕಾಗಿ ಬರುವುದರಿಂದ, ಕೆಲವೊಂದು ಅಪರಿಚಿತ ಶಬ್ದಗಳೂ ಸಂದರ್ಭಗಳೂ ಬಂದೆಬರುವುವು.

ಶಿಕ್ಷಕರ ನೆರವನ್ನು ಸ್ವಲ್ಪ ತೆಗೆದುಕೊಂಡು ಓದಿದರೆ, ವಿದ್ಯಾರ್ಥಿಗಳಿಗೆ ಎಲ್ಲ ವಿಷಯವೂ ಸುಬೋಧವೆನಿಸುವುದರಲ್ಲಿ ಸಂದೇಹವಿಲ್ಲ.

ಪ್ರತಿಯೊಂದು ಜೀವನಕಥೆಯ ಕೆಳಗೆ ಅಭ್ಯಾಸನಗಳನ್ನು ಕೊಡಲಾಗಿದೆ. ಅವುಗಳಲ್ಲಿಯ ಪ್ರಶ್ನೆಗಳೆಲ್ಲ ವಿದ್ಯಾರ್ಥಿಗಳಲ್ಲಿ ಕುತೂಹಲವನ್ನು ಹುಟ್ಟಿಸುವಂತೆ ಇರುವುವು. ಅವರು ಆ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಹುಡುಕುತ್ತ ಹೋಗುವುದರಿಂದ, ಕಥಾಪಾಠದಲ್ಲಿಯ ಸಂಗತಿಗಳನ್ನು ಮತ್ತೆ ಮತ್ತೆ ಓದಿಕೊಳ್ಳಬೇಕಾಗುವುದು. ಇದರಿಂದ ವಿದ್ಯಾರ್ಥಿಗಳಿಗೆ ಕಥಾವ್ಯಕ್ತಿಗಳ ಪರಿಚಯವು ಚೆನ್ನಾಗಿ ಆಗುವುದು.

ಈ ಜೀವನಕಥೆಗಳನ್ನು ಸಿದ್ಧಗೊಳಿಸುವ ಕಾರ್ಯದಲ್ಲಿ ನಾವು ಅನೇಕ ಗ್ರಂಥಗಳಿಂದ ಸಹಾಯವನ್ನು ಪಡೆದಿದ್ದೇವೆ; ಹಲವು ಜನ ತಜ್ಞರಿಂದ ಸಲಹೆ-ಸಹಕಾರಗಳನ್ನು ಹೊಂದಿದ್ದೇವೆ. ಆ ಗ್ರಂಥಗಳ ಕರ್ತರಿಗೂ ತಜ್ಞಮಹನೀಯರಿಗೂ ನಮ್ಮ ಆದರದ ವಂದನೆಗಳು. ಈ ಪುಸ್ತಕವನ್ನು ಬರೆಯುವುದಕ್ಕೆ ಪ್ರಚೋದನೆ ಕೊಟ್ಟು, ಬೇಕಾದ ಸಲಕರಣೆಗಳನ್ನು ಒದಗಿಸಿ, ಬರೆದುದನ್ನು ಪ್ರಕಟಿಸುವ ಹೊಣೆಯನ್ನೂ ಹೊತ್ತುನಿಂತ ಕನ್ನಡ ಸಾಹಿತ್ಯ ಪ್ರಕಾಶನ ಇವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುವೆವು.

—ಲೇಖಕರು

# ಪ ರಿ ವಿ ಡಿ

# ಐತಿಹಾಸಿಕ ಕಥೆಗಳು

---

## ೧. ಝೊರೋಸ್ಟರ್ (ಝರತುಷ್ಟ್ರ)

ನಮ್ಮ ಭಾರತದ ವಾಯುವ್ಯ ದಿಕ್ಕಿನಲ್ಲಿ ಇರಾಣ ಎಂಬ ದೇಶವಿದೆ. ಅಲ್ಲಿಯ 'ರಯೆ' ಎಂಬ ನಗರದಲ್ಲಿ, ಒಂದು ರಾಜವಂಶದಲ್ಲಿ ಝೊರೋಸ್ಟರನು ಹುಟ್ಟಿದನು. ಇವನ ತಂದೆಯ ಹೆಸರು ಪೋರುಶಸ್ಪ ಎಂದು. ಅವನು ಬಹು ಪಂಡಿತನೂ ಸದಾಚಾರಿಯೂ ಆಗಿದ್ದನು. ತಾಯಿಯ ಹೆಸರು ದುಗ್ಧೋವಾ ಎಂದು. ಆಕೆ ಸುಶೀಲೆಯೂ ಪತಿವ್ರತೆಯೂ ಆಗಿದ್ದಳು. ಗಂಡ, ಹೆಂಡತಿ ಇಬ್ಬರೂ ದೇವರಲ್ಲಿ ಭಕ್ತಿಯುಳ್ಳವರಾಗಿದ್ದರು. ಅವರು ತಮ್ಮ ಮಗುವಿಗೆ ಸ್ಪಿತಮ್ ಎಂದು ಮುದ್ದಾದ ಹೆಸರಿಟ್ಟರು.

ಇರಾಣದೇಶದ ಅರಸನು ಅತ್ಯಾಚಾರಿಯಾಗಿದ್ದನು. ಸ್ಪಿತಮನು ಹುಟ್ಟಿದ ಕೆಲವು ದಿವಸಗಳಲ್ಲಿ ಅರಸನಿಗೆ ಅಪಶಕುನಗಳು ಕಂಡುವು. ಆಗ ಅವನು ಜ್ಯೋತಿಷಿಗಳನ್ನು ಕರೆಸಿ ಕೇಳಿದನು. ಅವರು "ಈಗ ಹುಟ್ಟಿ ಬಂದಿರುವ ಸ್ಪಿತಮನು ಮುಂದೆ ನಿಮ್ಮ ಅನ್ಯಾಯ-ಅತ್ಯಾಚಾರಗಳನ್ನು ಬಯಲಿಗೆ ತರುವನು; ಜನರಲ್ಲಿ ನಿಮ್ಮ ವಿಷಯದಲ್ಲಿ ಆದರ-ವಿಶ್ವಾಸಗಳು ಹುಟ್ಟದಂತೆ ಮಾಡುವನು. ಅವನ ಮುಂದೆ ನಿಮ್ಮ ಆಟವೇನೂ ನಡೆಯದು. ಅವನನ್ನೇ ಜನರು ಹಿಂಬಾಲಿಸುವರು. ಅವನು ಒಂದು ಹೊಸಧರ್ಮವನ್ನು ಸ್ಥಾಪಿಸುವನು" ಎಂದು ಹೇಳಿದರು. ಆಗ ಅರಸನಿಗೆ ಚಿಂತೆ ಹುಟ್ಟಿತು. ಚಿಕ್ಕವನಿರುವಾಗಲೇ ಈ ಸ್ಪಿತಮನನ್ನು ಹೇಗಾದರೂ ಮಾಡಿ ಕೊಲ್ಲಿಸಬೇಕೆಂದು ಹಂಚಿಕೆ ಹಾಕ ಹತ್ತಿದನು. ಅರಸನಂತೆಯೆ ಆಗಿನ ಕಾಲದ ಬೇರೆ ಧರ್ಮದ ಜನರೂ ಬಾಲಕ ಸ್ಪಿತಮನನ್ನು ಕೊಲ್ಲಿಸಬೇಕೆಂದು ನಾನಾ ಉಪಾಯಗಳನ್ನು ಮಾಡಿದರು. ಆದರೆ ಅವೆಲ್ಲ ಕೊನೆಗಾಣದೆ ಹೋದುವು.

ಸ್ಪಿತಮನು ದಿನದಿನಕ್ಕೆ ಬೆಳೆಯತೊಡಗಿದನು. ತಂದೆಯು ಅವನಿಗೆ ಮನೆಯಲ್ಲಿಯೆ ಓದು-ಬರೆಹಗಳನ್ನು ಕಲಿಸಿದನು; ಧರ್ಮ-ನೀತಿಗಳನ್ನು ತಿಳುಹಿದನು. ತನ್ನ ಸುತ್ತುಮುತ್ತಣ ಜನರ ರೀತಿ-ನಡತೆಗಳನ್ನು ಕಂಡು ಬಾಲಕ ಸ್ಪಿತಮನು ಮನಸ್ಸಿನಲ್ಲಿ ನೊಂದುಕೊಳ್ಳುತ್ತಿದ್ದನು. "ಈ ಜನರನ್ನು ಹೇಗೆ ತಿದ್ದಬೇಕು?" ಎಂದು ತನ್ನಲ್ಲಿ ತಾನೆ ಯೋಚನೆ ಮಾಡುತ್ತಿದ್ದನು. ದೊಡ್ಡವನಾದಂತೆ ಸ್ಪಿತಮನಿಗೆ ಸಂಸಾರದ ತೊಂದರೆಗಳು ಬೇಡವೆನಿಸಿದುವು. ಅವನ

ಮನಸ್ಸು ಏಕಾಂತವಾಸದ ಕಡೆಗೆ ಎಳಸಿತು. ಹದಿನೈದು ವರುಷದವ-ನಾಗುತ್ತಲೆ ಅವನು ಮನೆಬಿಟ್ಟು ಅಡವಿಗೆ ಹೋದನು.

ಸ್ವಾರ್ಥಭಾವವನ್ನು ಸಂಪೂರ್ಣವಾಗಿ ಬಿಟ್ಟಾಗಲೆ ತಪಸ್ಸಿನ ಫಲವು ಸಿಗುವುದೆಂದು ಝೊರೋಸ್ತ್ರನಿಗೆ ಮನವರಿಕೆಯಾಯಿತು. ಆದುದರಿಂದ ಅವನು ಸ್ವಂತದ ಸುಖ-ದುಃಖಗಳ ವಿಚಾರವನ್ನೆಲ್ಲ ಮರೆತು, ಪರರಿಗೆ ನೆರವಾ-ಗಲು ತೊಡಗಿದನು. ದೀನರು, ದುರ್ಬಲರು, ಮುದುಕರು ಇವರಿಗೆಲ್ಲ ಶಕ್ತಿಮೀರಿ



ಝೊರೋಸ್ತರ್

ಸಹಾಯಮಾಡುವನು. ರೋಗಿಗಳಿಗೆ ಔಷಧಗಳನ್ನು ಕೊಟ್ಟು ಉಪಚರಿಸು-ವನು. ಹಸಿದವರಿಗೆ ಅನ್ನವನ್ನು ನೀಡುವನು, ನೀರಡಿಸಿ ಬಂದವರಿಗೆ ನೀರನ್ನು ಕೊಡುವನು. ಹೊರೆಹೊತ್ತು ನಡೆಯುವವರ ಶ್ರಮವನ್ನು ಕಡಿಮೆಮಾಡಲು, ತಾನು ಅವರ ಹೊರೆಯನ್ನು ಹೊರುವನು. ಸಂಸಾರದಲ್ಲಿ ಒದಗುವ ಆಪತ್ತು-ವಿಪತ್ತುಗಳಿಂದ ನರಳುತಿರುವವರನ್ನು ಸಮಾಧಾನದ ಮಾತುಗಳಿಂದ ಸಂತಯಿಸುವನು.

ಜನಸೇವೆಯ ಕಾರ್ಯದೊಂದಿಗೆ ದೇವನನ್ನು ಕಾಣಬೇಕೆಂದು ಅವನ ತಪಸ್ಸಾಧನೆಯೂ ನಡೆದಿತ್ತು. ಆ ವೇಳೆಯಲ್ಲಿ ತಪಸ್ಸನ್ನು ಕೆಡಿಸಲು ಅನೇಕ ದುರ್ಗುಣಗಳು ಝೊರೋಸ್ಟರನ ಮನಸ್ಸನ್ನು ಪೀಡಿಸತೊಡಗಿದುವು. ಆದರೆ ಸ್ಥಿತಮನು "ಪ್ರಾಣಹೋದರೂ ಚಿಂತೆಯಿಲ್ಲ. ನಾನು ಈಶ್ವರನ ಆರಾಧನೆ-ಯನ್ನು ಎಂದೂ ಬಿಡಲಿಕ್ಕಿಲ್ಲ" ಎಂದು ದೃಢಪ್ರತಿಜ್ಞೆ ಮಾಡಿದನು. ತನ್ನ ಮನಸ್ಸಿಗೆ ಶಾಂತಿಸಿಗುವ ವರೆಗೆ ಅವನು ತಪಶ್ಚರ್ಯವನ್ನು ಮಾಡಿದನು. ಇದರಿಂದ ಅವನಲ್ಲಿ ತೇಜಸ್ಸು ಹುಟ್ಟಿತು. ಜನರು ಅವನ ಮುಖದ ಕಾಂತಿಗೆ ಮೆಚ್ಚಿ 'ಝೊರೋಸ್ಟರ್' ಎಂದರೆ 'ಚಿನ್ನದ ಹೊಳಪಿನ ತೇಜಸ್ವಿ' ಎಂದು ಕರೆಯ ಹತ್ತಿದರು.

ತಪಸ್ಸನ್ನು ಮುಗಿಸಿ ಝೊರೋಸ್ಟರನು ತಿರುಗಿ ಮನೆಗೆ ಬಂದನು. ಆಗ ಅವನಿಗೆ ಮೂವತ್ತು ವರುಷಗಳಾಗಿದ್ದುವು. ಅವನು ಜನರಿಗೆ ಒಳ್ಳೆಯ ಮಾರ್ಗ-ದಿಂದ ನಡೆಯುವಂತೆ ಬೋಧಿಸತೊಡಗಿದನು:

"ದೇವರು ಎಲ್ಲರಿಗಿಂತ ದೊಡ್ಡವನು. ಅವನೇ ನಮ್ಮನ್ನೆಲ್ಲ ಕಾಪಾಡು-ವವನು. ಮಾನವರೆಲ್ಲರೂ ದೇವರ ಭಕ್ತರಾಗಬೇಕು. ದಾನಧರ್ಮ, ಪರೋಪ-ಕಾರ, ಜನಸೇವೆ—ಇವೇ ದೇವರ ಪ್ರೀತಿಯ ಕೆಲಸಗಳು. ಇವುಗಳನ್ನು ಪ್ರತಿಯೊಬ್ಬ ಮಾನವನು ಮಾಡುತ್ತಿರಬೇಕು. ಇದೇ ನಿಜವಾದ ಧರ್ಮದ ದಾರಿ". ಝೊರೋಸ್ಟರನು ಜನರಿಗೆ ಬೋಧಿಸಿದ ಮುಖ್ಯ ಮಾತುಗಳಿವು.

ಮೊದಮೊದಲು ಝೊರೋಸ್ಟರನ ಉಪದೇಶವನ್ನು ಯಾರೂ ಕೇಳಲಿಲ್ಲ. ಆದರೂ ಆ ಧೀರಪುರುಷನು ತಾನು ಹಿಡಿದ ಕೆಲಸವನ್ನು ಬಿಡಲಿಲ್ಲ. ಕೊನೆಗೆ ಬಲ್ಖ್‌ಪ್ರಾಂತದ ಅರಸನಾದ ವಿಸ್ತಾಸ್ಪನು, ಅವನನ್ನು ಕರೆಸಿಕೊಂಡು ಅವನ ಶಿಷ್ಯನಾದನು. ಅಂದಿನಿಂದ ಝೊರೋಸ್ಟರನು ತನ್ನ ಹೊಸಧರ್ಮವನ್ನು ಹಬ್ಬಿಸಲು ಪ್ರಾರಂಭಿಸಿದನು. ಸುತ್ತುಮುತ್ತಲಿನ ಜನರೆಲ್ಲ ಆ ಹೊಸಧರ್ಮವನ್ನು ಸ್ವೀಕರಿಸಿ ಆತನ ಅನುಯಾಯಿಗಳಾದರು. ಹೀಗೆ ಜನರಲ್ಲಿ ಸೇವಾಬುದ್ಧಿ-ಪರೋಪಕಾರ-ಗಳು ನೆಲೆಗೊಳ್ಳುವಂತೆ ಹೊಸಧರ್ಮವನ್ನು ಬೋಧಿಸಿ ಝೊರೋಸ್ಟರನು ಮಹಾತ್ಮನೆಂದು ಹೊಗಳಿಸಿಕೊಂಡನು. ಝೊರೋಸ್ಟರನ ಉಪದೇಶಗಳನ್ನೆಲ್ಲ ಒಟ್ಟುಗೂಡಿಸಿ ಒಂದು ಗ್ರಂಥದಲ್ಲಿ ಬರೆದಿಟ್ಟಿದ್ದಾರೆ. ಅದರ ಹೆಸರು "ಅವೆಸ್ತಾ" ಎಂದಿದೆ. ಅದು ಪಾರಸೀ ಧರ್ಮದ ಪವಿತ್ರ ಗ್ರಂಥವಾಗಿದೆ.

ಮಹಾತ್ಮಾ ಝೊರೋಸ್ಟರನ ತರುವಾಯ ಅವನ ಧರ್ಮವು ಜಗತ್ತಿನ ಬೇರೆಬೇರೆ ಭಾಗಗಳಲ್ಲಿ ಹಬ್ಬಿತು. ಈಗ ನಮ್ಮ ಭಾರತದಲ್ಲಿ ಸುಮಾರು ಎರಡು ಲಕ್ಷದಷ್ಟು ಪಾರಸೀ ಧರ್ಮದ ಜನರಿದ್ದಾರೆ. ಅವರ ಪೂರ್ವಜರು ಇರಾಣದಿಂದ ಓಡಿಬಂದು ಭಾರತದಲ್ಲಿ ಆಶ್ರಯಪಡೆದರು. ಅವರು ದೊಡ್ಡ

ದೊಡ್ಡ ಪಟ್ಟಣಗಳಲ್ಲಿ ಇದ್ದುಕೊಂಡು ವ್ಯಾಪಾರ-ಉದ್ಯೋಗಗಳನ್ನು ಮಾಡು-ತ್ತಾರೆ. ಪಾರಸೀ ಜನರು ಝೂರೋಸ್ತರನ ಉಪದೇಶಗಳನ್ನು ಬಹು ಭಕ್ತಿ-ಯಿಂದ ಪಾಲಿಸುತ್ತಾರೆ. ಪರೋಪಕಾರವೇ ಅವರ ಧರ್ಮದ ಮುಖ್ಯ ಆಚಾರ-ವಾಗಿದೆ. ಮನುಷ್ಯನು ಬದುಕಿರುವಾಗ ಅವನು ಪರೋಪಕಾರಕ್ಕಾಗಿಯೆ ದುಡಿಯುತ್ತಿರಬೇಕು; ಇಷ್ಟೇ ಅಲ್ಲ, ಸತ್ತಮೇಲೆಯೂ ಆತನ ದೇಹವು ಪರೋಪಕಾರಕ್ಕೇ ಉಪಯೋಗವಾಗಬೇಕೆಂದು ಅವರ ಧರ್ಮದ ಕಟ್ಟಳೆ. ಅದಕ್ಕಾಗಿಯೆ ಪಾರಸೀ ಜನರು, ತಮ್ಮ ಹೆಣಗಳನ್ನು ಹೂಳುವುದಿಲ್ಲ, ದಹನ ಮಾಡುವುದೂ ಇಲ್ಲ. ಶ್ಮಶಾನದಲ್ಲಿರುವ ಎತ್ತರವಾದ ಒಂದು ಜಗುಲಿಯ ಮೇಲೆ ಬರಿಮೈಯಿಂದ ಹೆಣವನ್ನು ಇಟ್ಟುಬಿಡುತ್ತಾರೆ. ಅದನ್ನು ಹದ್ದು ಕಾಗೆ ಗಳು ಹರಿದು ತಿಂದುಬಿಡುವುವು. ಇದರಿಂದ ದೇಹದ ಸದುಪಯೋಗವಾ ದಂತಾಗುವುದು—ಎಂದು ಅವರ ನಂಬುಗೆ.

ಇಂದಿಗೆ ಸುಮಾರು ಮೂರು ಸಾವಿರ ವರುಷಗಳ ಹಿಂದೆ ಆಗಿಹೋದ ಆ ಮಹಾತ್ಮನ ಕೀರ್ತಿಯು ಈಗಲೂ ಜಗತ್ತಿನ ತುಂಬ ಪಸರಿಸಿದೆ. ಆದುದರಿಂದಲೇ ಜನರು ವರುಷ-ವರುಷವೂ ಆತನ ಜಯಂತಿಯನ್ನು ಆಚರಿಸುತ್ತಾರೆ.

## ಅಭ್ಯಾಸನಗಳು

೧. ಝೂರೋಸ್ತರನು ಎಲ್ಲಿ ಹುಟ್ಟಿದನು?
೨. ಝೂರೋಸ್ತರನ ತಂದೆ-ತಾಯಿಗಳು ಯಾರು?
೩. ಇರಾಣದ ಅರಸನಿಗೆ ಜ್ಯೋತಿಷಿಯು ಏನು ಹೇಳಿದನು?
೪. ಝೂರೋಸ್ತರನ ಮನಸ್ಸು ಚಿಕ್ಕಂದಿನಲ್ಲಿ ಯಾವ ಕಡೆಗೆ ಹರೆಯುತ್ತಿತ್ತು?
೫. ಇವನ ಚಿಕ್ಕಂದಿನಲ್ಲಿಯ ಹೆಸರು ಯಾವುದು?
೬. ಜನರು ಇವನಿಗೆ "ಝೂರೋಸ್ತರ" ಎಂದು ಏಕೆ ಕರೆಯಹತ್ತಿದರು?
೭. ಇವನು ಜನರಿಗೆ ಮಾಡಿದ ಉಪದೇಶಗಳು ಯಾವುವು?
೮. ಇವನು ಯಾವ ಧರ್ಮವನ್ನು ಸ್ಥಾಪಿಸಿದನು?
೯. ಪಾರಸೀ ಧರ್ಮದ ಪವಿತ್ರಗ್ರಂಥವು ಯಾವುದು?
೧೦. ಪಾರಸೀ ಜನರ ಮುಖ್ಯ ಧಾರ್ಮಿಕ ಕಟ್ಟಳೆಯು ಯಾವುದು?

# ೨. ಮಹಾವೀರ

ಎರಡೂವರೆ ಸಾವಿರ ವರುಷಗಳ ಹಿಂದಿನ ಸಂಗತಿಯು. ಆಗ ಉತ್ತರ ಭಾರತದಲ್ಲಿ ಕ್ಷತ್ರಕುಂಡ ಎಂಬ ಹೆಸರಿನದೊಂದು ಪಟ್ಟಣವಿತ್ತು. ಅಲ್ಲಿ ಸಿದ್ಧಾರ್ಥನೆಂಬ ಅರಸನು ರಾಜ್ಯವಾಳುತ್ತಿದ್ದನು. ತ್ರಿಶಲಾದೇವಿಯೆಂಬವಳು ಆತನ ಹೆಂಡತಿ; ಅವಳು ವೈಶಾಲೀದೇಶದ ರಾಜನ ಮಗಳು. ರಾಜ ಸಿದ್ಧಾರ್ಥ,



ಮಹಾವೀರ

ರಾಣಿ ತ್ರಿಶಲಾದೇವಿ ಇಬ್ಬರೂ ಜಾಣರೂ ಒಳ್ಳೆಯ ಗುಣಗಳಿಂದ ಕೂಡಿದವರೂ ಆಗಿದ್ದರು. ಅವರ ಹೊಟ್ಟೆಯಿಂದ ಸುಂದರನಾದ ಒಬ್ಬ ಮಗನು ಹುಟ್ಟಿದನು. ಅವನಿಗೆ ‘ವರ್ಧಮಾನ’ ಎಂಬ ಹೆಸರನ್ನಿಟ್ಟರು.

ವರ್ಧಮಾನನಿಗೆ ಎಂಟು ವರುಷ ತುಂಬಿದೊಡನೆಯೆ ಅವನ ವಿದ್ಯಾಭ್ಯಾಸ ಪ್ರಾರಂಭವಾಯಿತು. ಅವನು ಬಹಳ ಚುರುಕುಬುದ್ಧಿಯವ. ಗುರುಗಳು ಯಾವುದಾದರೊಂದು ವಿಷಯವನ್ನು ಹೇಳಿದರೆ, ಅದನ್ನು ಅವನು ಒಮ್ಮೆಲೇ ತಿಳಿದುಕೊಳ್ಳುವನು. ಗುರುಗಳು ತಿರುಗಿ ಕೇಳಿದರೆ ಅವನು ತಪ್ಪದೆ ಎಲ್ಲವನ್ನೂ ಹೇಳುತ್ತಿದ್ದನು. ಅವನ ಈ ಅಗಾಧವಾದ ಜ್ಞಾನವನ್ನು ಕಂಡು ಗುರುಗಳು ಬೆರಗಾಗುತ್ತಿದ್ದರು. ವರ್ಧಮಾನನು ಎಲ್ಲ ವಿಷಯಗಳನ್ನೂ ಬೇಗಬೇಗನೆ ಕಲಿತುಕೊಂಡನು. ಅವನ ಜಾಣತನಕ್ಕಾಗಿ ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು.

ಚಿಕ್ಕಂದಿನಿಂದಲೂ ವರ್ಧಮಾನನು ಧೈರ್ಯಶಾಲಿಯಾಗಿದ್ದನು. ಆಟ-ಪಾಟ-ಗಳಲ್ಲಿ ಯಾವಾಗಲೂ ಅವನೇ ಮುಂದು. ಓರಗೆಯ ಬಾಲಕರೊಡನೆ ಓಡಾಡುವುದು, ಜಿಗಿದಾಡುವುದು ಅವನಿಗೆ ಬಹಳ ಸೇರುತ್ತಿತ್ತು. ಸುಂದರವಾದ ವನಗಳನ್ನು ನೋಡಲೂ ಅವನು ಮೇಲಿಂದಮೇಲೆ ತಂದೆಯಕೂಡ ಹೋಗುತ್ತಿದ್ದನು. ಹೂವಿನಿಂದ ತುಂಬಿದ ಅಲ್ಲಿಯ ಗಿಡಗಂಟಿಗಳನ್ನೂ ಹರಿಯುತ್ತಿದ್ದ ನದಿ-ಹಳ್ಳಗಳನ್ನೂ ಕಂಡು ಆನಂದಪಡುತ್ತಿದ್ದನು. ಗುಡ್ಡಗಾಡಿನಲ್ಲಿಯ ಕಾಡುಮೃಗಗಳನ್ನು ಕಂಡು ಅವನು ಹೆದರುತ್ತಿದ್ದಿಲ್ಲ. ಅವು-ಗಳನ್ನು ಪ್ರೀತಿಸುತ್ತಿದ್ದನು.

ಒಮ್ಮೆ ವರ್ಧಮಾನನು ಗೆಳೆಯರೊಡನೆ, ಊರಹೊರಗಿನ ಬಯಲಿಗೆ ಆಡಲಿಕ್ಕೆ ಹೋಗಿದ್ದನು. ಅಲ್ಲಿ ಅವನೂ ಅವನ ಗೆಳೆಯರೂ ಒಂದು ಗಿಡವನ್ನು ಏರಿ ಆಡುತ್ತಿದ್ದರು. ಆಗ ಗಿಡದ ಬೊಡ್ಡೆಯ ಪೊದರಿನೊಳಗಿಂದ ಒಂದು ದೊಡ್ಡ ಹಾವು ಹೊರಬಿದ್ದಿತು. ಭುಸ್ಸೆಂದು ಹೆಡೆತೆಗೆದು ಬೊಡ್ಡೆಗೆ ಸುತ್ತುಹಾಕಿ ಅದು ಮೇಲಕ್ಕೆ ಬರಹತ್ತಿತು. ಅದನ್ನು ಕಂಡು ಬಾಲಕರೆಲ್ಲರೂ ಬೆದರಿದರು. ತಾವು ಇದ್ದಲ್ಲಿಂದಲೆ ಕೆಳಗೆ ಜಿಗಿದು ಓಡಿ ಹೋದರು. ಆದರೆ ವರ್ಧಮಾನನು ಹೆದರದೆ, ಆ ಹಾವನ್ನು ಹೆಡೆಯ ಹತ್ತಿರ ಗಟ್ಟಿಯಾಗಿ ಹಿಡಿದು ತೂರಿ ದೂರ ಒಗೆದನು. ಇದನ್ನು ಕೇಳಿ ಅವನ ತಾಯಿ-ತಂದೆಗಳು ಅವನನ್ನು ಬಹಳ ಹೊಗಳಿದರು.

ಮತ್ತೊಮ್ಮೆ ವರ್ಧಮಾನನು ಗೆಳೆಯರೊಂದಿಗೆ ಆಡಲಿಕ್ಕೆ ಹೊರಟಿದ್ದನು. ಆಗ ದಾರಿಯಲ್ಲಿ ಮದ್ದಾನೆಯೊಂದು ಅವರ ಎದುರಿಗೆ ಓಡುತ್ತ ಬಂದಿತು. ಜೊತೆಯ ಹುಡುಗರೆಲ್ಲರೂ ಓಡಿಹೋದರು. ಆದರೆ ವರ್ಧಮಾನನು ತನ್ನ ಸ್ಥಳಬಿಟ್ಟು ಕದಲಲಿಲ್ಲ. ಆ ಆನೆಯ ಸೊಂಡೆಯನ್ನು ಹಿಡಿದು ಏರಿ ಅದರ ಬೆನ್ನಮೇಲೆ ಕುಳಿತನು. ಇದನ್ನು ಕಂಡು ಎಲ್ಲರೂ ಅವನನ್ನು ಕೊಂಡಾಡಿದರು. ಅಂದಿನಿಂದ ಅವನನ್ನು 'ಮಹಾವೀರ' ಎಂದು ಕರೆಯಹತ್ತಿದರು.

ಮಹಾವೀರನು ಶೂರನಿದ್ದರೂ ಅವನ ಮನಸ್ಸು ಬಹಳ ಕೋಮಲ-ವಾಗಿತ್ತು. ತಂದೆಯೊಡನೆ ಅವನು ಆಗಾಗ ಬೇಟೆಗೆ ಹೋಗುತ್ತಿದ್ದನು. ಅಡವಿಯಲ್ಲಿ ಮನಬಂದಂತೆ ತಿರುಗಾಡುತ್ತಿದ್ದ ಮೃಗಗಳನ್ನು ನೋಡುತ್ತಿದ್ದನು; ಆನಂದಪಡುತ್ತಿದ್ದನು. 'ಪಾಪ! ಈ ಬಡಪ್ರಾಣಿಗಳನ್ನು ಸುಮ್ಮಸುಮ್ಮನೆ ಏಕೆ ಕೊಲ್ಲಬೇಕು!' ಎಂದು ದಯೆಹುಟ್ಟಿ ಬೇಟೆಯ ಆಟವನ್ನು ನಿಲ್ಲಿಸಿ ತಿರುಗಿ ಬರುತ್ತಿದ್ದನು. ಹಾಡುವ ಪಕ್ಷಿಗಳನ್ನಾಗಲಿ ಆಡುವ ಪಶುಗಳನ್ನಾಗಲಿ ಅವನು ಎಂದೂ ಕೊಲ್ಲುತ್ತಿರಲಿಲ್ಲ. ಚಿಕ್ಕಂದಿನಿಂದಲೂ ಮಹಾವೀರನಲ್ಲಿ ಪ್ರಾಣಿ-ದಯೆ, ಮಾನವಪ್ರೀತಿ ಇವು ಮನೆಮಾಡಿಕೊಂಡಿದ್ದುವು.

ಮಹಾವೀರನು ಬೆಳೆದು ದೊಡ್ಡವನಾದನು. ಅವನು ಯಾವಾಗಲೂ ತಾಯಿ-ತಂದೆಗಳ ಆಜ್ಞೆಯನ್ನು ಪಾಲಿಸುವುದರಲ್ಲಿಯೂ ಅವರ ಸೇವೆಯನ್ನು ಮಾಡುವುದರಲ್ಲಿಯೂ ಕಾಲಕಳೆಯುತ್ತಿದ್ದನು. ಅದರಲ್ಲಿಯೇ ಅವನಿಗೆ ಆನಂದವಾಗುತ್ತಿತ್ತು. ಮಗನು ವಯಸ್ಸಿಗೆ ಬಂದುದನ್ನು ಕಂಡು ತಾಯಿ-ತಂದೆಗಳು ಅವನ ಮದುವೆ ಮಾಡಬೇಕೆಂದು ವಿಚಾರ ಮಾಡಿದರು. ಆದರೆ ಮದುವೆ ಮಾಡಿಕೊಳ್ಳಲು ಮಹಾವೀರನ ಮನಸ್ಸು ಒಪ್ಪಲಿಲ್ಲ. ಕಡೆತನಕ ಬ್ರಹ್ಮಚಾರಿಯಾಗಿಯೇ ಇರಬೇಕೆಂದು ಅವನ ಅಪೇಕ್ಷೆ. ಇದು ತಂದೆ-ತಾಯಿಗಳ ಮನಸ್ಸಿಗೆ ಬರಲಿಲ್ಲ. ಮದುವೆಯ ಸಿದ್ಧತೆಯನ್ನು ನಡೆಸಿಯೇ ಬಿಟ್ಟರು. ಸಮರವೀರನೆಂಬ ಅರಸನ ಮಗಳಾದ ಯಶೋಧರೆಯನ್ನು ಗೊತ್ತುಮಾಡಿ ಮಹಾವೀರನ ಲಗ್ನಮಾಡಿದರು. ತಂದೆ-ತಾಯಿಗಳ ಮನಸ್ಸಿಗೆ ನೋವನ್ನು ಉಂಟುಮಾಡಬಾರದೆಂದು ಮಹಾವೀರನು ಕೆಲವು ದಿವಸಗಳ ವರೆಗೆ ಹೆಂಡತಿ-ಯೊಡನೆ ಸುಖವಾಗಿ ಸಂಸಾರ ಮಾಡಿದನು. ಆಗ ಅವನಿಗೆ ಒಬ್ಬ ಮಗಳು ಹುಟ್ಟಿದಳು. ಅವಳ ಹೆಸರು ಪ್ರಿಯದರ್ಶನೆ.

ಮುಂದೆ ಕೆಲವುದಿನಗಳಲ್ಲಿಯೆ ಮಹಾವೀರನ ತಂದೆ-ತಾಯಿಗಳು ತೀರಿ-ಕೊಂಡರು. ಇದರಿಂದ ಅವನಿಗೆ ಬಹಳ ದುಃಖವಾಯಿತು. "ಸಂಸಾರದಲಿ ಸುಖಕ್ಕಿಂತ ದುಃಖವೇ ಹೆಚ್ಚಿದೆ" ಎಂಬುದು ತಿಳಿಯಿತು. "ಈ ಲೋಕದಲ್ಲಿ ಯಾರಿಗೂ ದುಃಖವು ತಪ್ಪಿದುದಲ್ಲ. ಹುಟ್ಟಿದವರೆಲ್ಲರೂ ಸಾಯುವವರೇ ಎಂದಮೇಲೆ, ಸುಮ್ಮನೆ ಏಕೆ ಕಾಲಕಳೆಯಬೇಕು? ಅರಣ್ಯಕ್ಕೆ ಹೋಗಿ ತಪಸ್ಸು ಮಾಡಿ ದೇವರನ್ನು ಮೆಚ್ಚಿಸಿ ನಿರ್ವಾಣ ಹೊಂದಬೇಕು" ಎಂದು ಆತನು ವಿಚಾರ ಮಾಡಿದನು. ಅರಮನೆಯ ಯಾವ ಸುಖವಿಲಾಸಗಳೂ ಅವನನ್ನು ತಡೆಯ ಲಿಲ್ಲ. ಹೆಂಡತಿ-ಮಗಳನ್ನು ಬಿಟ್ಟು ಕಾಡಿಗೆ ಹೋದನು

ಕಾಡಿನಲ್ಲಿ ಮಹಾವೀರನು, ಅನೇಕ ವರುಷಗಳ ವರೆಗೆ ತಪಸ್ಸು ಮಾಡಿ ದನು. ಕೆಲವುದಿನ ಗುಹೆಗಳಲ್ಲಿ ಕುಳಿತನು. ಕೆಲವು ದಿವಸ ದಟ್ಟವಾದ ಕಾಡಿ

ನಲ್ಲಿ ಅಲೆದಾಡಿದನು. ಆಗ ಅವನಿಗೆ ದುಷ್ಟಜನರಿಂದಲೂ ಕಾಡುಮೃಗಗಳಿಂದಲೂ ಎಷ್ಟೋ ತೊಂದರೆಯಾಯಿತು. ಆದರೆ ಮಹಾವೀರನು ಅವುಗಳಿಗೆ ಹೆದರಲಿಲ್ಲ. ಶಾಂತರೀತಿಯಿಂದ ಕುಳಿತು ದೇವರ ಧ್ಯಾನಮಾಡುತ್ತಿದ್ದನು. ಹೀಗೆ ಹನ್ನೆರಡು ವರುಷ ಸತತ ತಪಸ್ಸುಮಾಡಿ, ಜೃಂಭಿಕ ಗ್ರಾಮಕ್ಕೆ ಬಂದನು! ಅದರ ನೆರೆಯಲ್ಲಿ ಹರಿದಿರುವ 'ಋಜುಪಾಲಿಕಾ' ನದಿಯದಂಡೆಯ ಮೇಲೆ ಒಂದು ಶಾಲವೃಕ್ಷವಿತ್ತು. ಅದರ ಅಡಿಯ ಬಂಡೆಯೊಂದರ ಮೇಲೆ ಕುಳಿತು ಧ್ಯಾನಮಾಡಹತ್ತಿದನು. ಅಲ್ಲಿ ಅವನಿಗೆ ಹೊಸದೊಂದು ತಿಳಿವಳಿಕೆ ಮೂಡಿತು. ಅಲ್ಲಿಂದ ಹೊರಟು ಮಹಾವೀರನು, ಜನರಿಗೆಲ್ಲ ತಾನು ಕಂಡ ತಿಳಿವಳಿಕೆಯ ಉಪದೇಶ ಮಾಡತೊಡಗಿದನು. ಆಗ ಅವನಿಗೆ ನಾಲ್ವತ್ತೆರಡು ವರುಷಗಳಾಗಿದ್ದವು.

ಸುಮಾರು ಮೂವತ್ತು ವರುಷಗಳವರೆಗೆ ಎಲ್ಲ ಕಡೆಗೆ ತಿರುಗಾಡಿ ಜೀವ-ದಯೆ, ಅಹಿಂಸೆಗಳನ್ನು ಬೋಧಿಸುವ ತನ್ನ ಧರ್ಮವನ್ನು ಪ್ರಸಾರ ಮಾಡಿದನು. ಹೋದ-ಹೋದಲ್ಲೆಲ್ಲ ಜನರು ಅವನ ಧರ್ಮವನ್ನು ಸ್ವೀಕರಿಸತೊಡಗಿದರು. ಮಗಧರಾಜ್ಯದ ಬಿಂಬಿಸಾರ, ಅಜಾತಶತ್ರು ಹಾಗು ವೈಶಾಲಿಯ ಅರಸನಾದ ಚೇಟಕ ಮುಂತಾದವರು ಈ ಧರ್ಮವನ್ನು ಸ್ವೀಕರಿಸಿ ಮಹಾವೀರನ ಶಿಷ್ಯರಾದರು. ಮಹಾವೀರನನ್ನು 'ಜಿನ' ಎಂದು ಕರೆಯಹತ್ತಿದರು. ಸಂಸ್ಕೃತ ಭಾಷೆಯಲ್ಲಿ 'ಜಿನ' ಎಂದರೆ ಎಲ್ಲವನ್ನು ತಿಳಿದವ ಎಂದು ಅರ್ಥ. ಜಿನನು ಬೋಧಿಸುತ್ತಿದ್ದ ಧರ್ಮವು 'ಜೈನ'ಧರ್ಮ ಎಂದು ಹೆಸರನ್ನು ಪಡೆಯಿತು. ಜಿನನು ಧರ್ಮಪ್ರಚಾರ ಮಾಡುತ್ತ ಎಪ್ಪತ್ತೆರಡು ವರುಷಗಳ ವರೆಗೆ ಬಾಳಿ ಕೊನೆಗೆ ಮುಕ್ತಿಯನ್ನು ಹೊಂದಿದನು.

"ಅಹಿಂಸಾ ಪರಮೋ ಧರ್ಮಃ" ಎಂದರೆ ಹಿಂಸೆಮಾಡದಿರುವುದೇ ಸರ್ವಶ್ರೇಷ್ಠವಾದ ಧರ್ಮ ಎಂಬುದು ಜೈನಧರ್ಮದ ಮುಖ್ಯಮಂತ್ರವು. "ಯಾವನು ಪ್ರಾಣಿಗಳನ್ನು ಪ್ರೀತಿಸುವನೋ ಅವನನ್ನು ದೇವರು ಪ್ರೀತಿಸುತ್ತಾನೆ" ಎಂಬುದು ಜೈನಧರ್ಮದವರ ನಂಬುಗೆ. "ಶರೀರವು ಪಾಪಮಯವಾಗಿರುವುದರಿಂದ ವ್ರತ-ಉಪವಾಸಗಳಿಂದ ಅದನ್ನು ದಂಡಿಸಬೇಕು. ಅದರಿಂದ ಶರೀರ-ಮನಸ್ಸುಗಳು ನಿರ್ಮಲವಾಗುವುವು. ಜಗತ್ತಿನ ಎಲ್ಲ ವಸ್ತುಗಳಲ್ಲಿ ಜೀವವಿದೆ" ಎಂದು ಅವರು ಹೇಳುತ್ತಾರೆ. ಜೈನರಲ್ಲಿ "ಶ್ವೇತಾಂಬರ, ದಿಗಂಬರ" ಎಂದು ಎರಡು ಮುಖ್ಯ ಪಂಗಡಗಳು ಇವೆ. ಉತ್ತರಭಾರತದಲ್ಲಿ ಶ್ವೇತಾಂಬರ ಜೈನರ ಸಂಖ್ಯೆ ಹೆಚ್ಚು. ದಕ್ಷಿಣ ಭಾರತದಲ್ಲಿ ದಿಗಂಬರ ಪಂಗಡಕ್ಕೆ ಸೇರಿದವರೇ ಬಹುಜನರಿರುವರು. ಶ್ರವಣಬೆಳುಗೊಳ, ಕಾರ್ಕಳ, ಪಾಲಿತಾಣಾ, ಗಿರಿನಾರಬೆಟ್ಟ ಮತ್ತು ಅಬೂಬೆಟ್ಟಗಳು ಜೈನರ ಪವಿತ್ರ ಕ್ಷೇತ್ರಗಳಾಗಿವೆ.

## ಅಭ್ಯಸನಗಳು

೧. ವರ್ಧಮಾನನ ತಂದೆ-ತಾಯಿಗಳು ಯಾರು?
೨. ಚಿಕ್ಕಂದಿನಲ್ಲಿ ವರ್ಧಮಾನನನ್ನು ಎಲ್ಲರೂ ಏಕೆ ಪ್ರೀತಿಸುತ್ತಿದ್ದರು?
೩. ಜನರು ಇವನನ್ನು ಮಹಾವೀರನೆಂದು ಏಕೆ ಕರೆಯಹತ್ತಿದರು?
೪. ಚಿಕ್ಕಂದಿನಲ್ಲಿ ಮಹಾವೀರನಲ್ಲಿ ಕಂಡುಬರುವ ಗುಣಗಳಾವುವು?
೫. ಇವನು ತನ್ನ ಹೆಂಡತಿ ಮಕ್ಕಳನ್ನು ಬಿಟ್ಟು, ಕಾಡಿಗೆ ಏಕೆ ಹೋದನು?
೬. ಇವನು ಎಷ್ಟು ವರುಷ ತಪಸ್ಸು ಮಾಡಿದನು?
೭. ಇವನು ಯಾವ ಧರ್ಮವನ್ನು ಸ್ಥಾಪಿಸಿದನು?
೮. ಜೈನಧರ್ಮದ ಮುಖ್ಯ ತತ್ತ್ವಗಳು ಯಾವುವು?
೯. ಜೈನರಲ್ಲಿಯ ಪಂಗಡಗಳಾವುವು?
೧೦. ಜೈನರ ಪವಿತ್ರ ಕ್ಷೇತ್ರಗಳು ಯಾವುವು?

# ೩. ಭಗವಾನ್ ಬುದ್ಧದೇವ

ಹಿಮಾಲಯ ಪರ್ವತದ ಅಡಿಯಲ್ಲಿ ನೇಪಾಳ ಎಂಬುದೊಂದು ದೇಶವಿದೆ. ಅದರ ದಕ್ಷಿಣಗಡಿಯಲ್ಲಿ ೨೫೦೦ ವರುಷಗಳ ಹಿಂದೆ ಕಪಿಲವಸ್ತು ಎಂಬ ನಗರವು ಇದ್ದಿತು. ಅಲ್ಲಿ ಶುದ್ಧೋದನನೆಂಬ ಅರಸನು ರಾಜ್ಯವಾಳುತ್ತಿದ್ದನು. ಅವನಿಗೆ ಇಬ್ಬರು ಹೆಂಡಿರು ಇದ್ದರು. ಹಿರಿಯವಳು ಮಾಯಾದೇವಿ; ಕಿರಿಯವಳು ಗೌತಮಿ. ಬಹಳ ದಿವಸಗಳವರೆಗೆ ಅವರಿಬ್ಬರಿಗೂ ಮಕ್ಕಳಾಗಲಿಲ್ಲ.




ಭಗವಾನ್ ಬುದ್ಧದೇವ

ಗಂಡಹೆಂಡಂದಿರು ಭಕ್ತಿಯಿಂದ ದೇವರನ್ನು ಪೂಜಿಸಿದರು. ದಾನ-ಧರ್ಮಗಳನ್ನು ಮಾಡಿದರು. ಕೊನೆಗೆ ತನ್ನ ೪೫ನೆಯ ವರುಷದ ವಯಸ್ಸಿನಲ್ಲಿ ಮಾಯಾದೇವಿ ಬಸಿರೆಯಾದಳು. ಎಲ್ಲರಿಗೂ ಬಹಳ ಸಂತೋಷವಾಯಿತು.

ಮಾಯಾದೇವಿ ಹೆರಿಗೆಗೆಂದು ತನ್ನ ಪರಿವಾರದೊಂದಿಗೆ ತವರೂರಿಗೆ ಹೊರಟಳು. ದಾರಿಯಲ್ಲಿ ಲುಂಬಿಣಿ ಎಂಬ ವನದಲ್ಲಿ ವಿಶ್ರಾಂತಿಗೆಂದು ಅವರು ತಂಗಿದ್ದರು. ಅದೇ ಸಮಯದಲ್ಲಿ ಆಕೆ ಸುಂದರವಾದ ಒಂದು ಗಂಡುಮಗುವನ್ನು ಹೆತ್ತಳು. ಈ ಸುದ್ದಿಯನ್ನು ಕೇಳಿ ರಾಜ ಹಿರಿಹಿರಿ ಹಿಗ್ಗಿದ. ಪ್ರಜೆಗಳೆಲ್ಲರೂ ಸಂತೋಷದಿಂದ ನಲಿದರು. ರಾಣಿಯನ್ನು ರಾಜ್ಯವೈಭವದಿಂದ ಕಪಿಲವಸ್ತುವಿಗೆ ಕರೆತಂದರು. ಕೂಸಿಗೆ ಸಿದ್ಧಾರ್ಥನೆಂದು ಹೆಸರನ್ನಿಟ್ಟರು. ಪದ್ಧತಿಯಂತೆ ಜೋಯಿಸರನ್ನು ಕರೆಸಿ ಅರಸನು ಮಗುವಿನ ಜಾತಕವನ್ನು ನೋಡಿಸಿದನು. ಜೋಯಿಸರು ಮಗುವನ್ನು ನೋಡಿ 'ಈ ಹುಡುಗನು ಮುಂದೆ ಪ್ರಪಂಚದ ಕಡೆಗೆ ಒಲಿದರೆ, ಮಹಾ ಬಲಶಾಲಿಯಾದ ರಾಜನಾಗುವನು. ಸಂನ್ಯಾಸದಕಡೆಗೆ ಮನಸ್ಸು ಮಾಡಿದರೆ, ಶ್ರೇಷ್ಠನಾದ ಯೋಗಿಯಾಗುವನು' ಎಂದು ಹೇಳಿದರು. ಇದನ್ನು ಕೇಳಿ ಆನಂದವೂ ಆಯಿತು; ದುಃಖವೂ ಆಯಿತು. ಮುಂದೆ ಕೆಲವು ದಿನಗಳಲ್ಲಿಯೆ ಮಾಯಾದೇವಿ ತೀರಿಕೊಂಡಳು. ಮಗುವನ್ನು ಚಿಕ್ಕತಾಯಿ ಗೌತಮಿ ಜೋಕೆಮಾಡಹತ್ತಿದಳು.

ಸಿದ್ಧಾರ್ಥ ಬಿದಿಗೆಯ ಚಂದ್ರನಂತೆ ಬೆಳೆಯತೊಡಗಿದ. ಅವನಿಗೆ ವಿದ್ಯಾಭ್ಯಾಸವನ್ನು ಪ್ರಾರಂಭಿಸುವಷ್ಟು ವಯಸ್ಸಾಯಿತು. ಶುದ್ಧೋದನ ರಾಜನು ಮಗನಿಗಾಗಿ ಮೂರು ಅರಮನೆಗಳನ್ನು ಕಟ್ಟಿಸಿದನು. ಮಳೆ-ಚಳಿ-ಬೇಸಗೆ ಈ ಮೂರೂ ಕಾಲಗಳಲ್ಲಿಯೂ ಸಿದ್ಧಾರ್ಥನಿಗೆ ಸುಖವು ಉಂಟಾಗುವಂತೆ ಅವುಗಳಲ್ಲಿ ವ್ಯವಸ್ಥೆಯಿತ್ತು. ಅಲ್ಲಿ ಕುಮಾರನ ವಿದ್ಯಾಭ್ಯಾಸಕ್ಕಾಗಿ ಯೋಗ್ಯರಾದ ಗುರುಗಳನ್ನು ನೇಮಿಸಲಾಯಿತು. ಜಗತ್ತಿನ ದುಃಖದ ಅರಿವು ಬಾಲಕನಿಗೆ ಸ್ವಲ್ಪವೂ ಆಗದಂತೆ ವಿದ್ಯಾಭ್ಯಾಸ ಮಾಡಿಸಬೇಕೆಂದು ರಾಜನು ಗುರುಗಳಿಗೆ ಹೇಳಿದನು. ಸಿದ್ಧಾರ್ಥನ ಜೊತೆಯಲ್ಲಿ ಆಟವಾಡುವುದಕ್ಕೆ ಗಟ್ಟಿಮುಟ್ಟಾದ, ಸುಂದರವಾದ ಬಾಲಕರನ್ನೇ ಆರಿಸಿ ಒದಗಿಸಿಕೊಟ್ಟನು. ಯಾವ ದುಃಖದ ನೋಟವೂ ಸಿದ್ಧಾರ್ಥನ ಕಣ್ಣಿಗೆ ಬೀಳದಂತೆ ಎಲ್ಲ ಒಗೆಯ ಏರ್ಪಾಡು ನಡೆಯಿತು.

ಸಿದ್ಧಾರ್ಥ ಒಲು ಕುಶಲಬುದ್ಧಿಯುವ ಗುರುಗಳು ಹೇಳಿದ ಪಾಠಗಳನ್ನು ತಪ್ಪದೆ ಕಲಿಯುತ್ತಿದ್ದ. ಕತ್ತಿ ತಿರುವುವುದು, ಕುದುರೆ ಹತ್ತುವುದು ಮುಂತಾದ ವಿದ್ಯೆಗಳನ್ನೂ ಮನಸ್ಸುಗೊಟ್ಟು ಕಲಿತನು. ಒಂದು ದಿನ ಅವನು ವನದಲ್ಲಿ ತಿರುಗಾಡುತ್ತಿದ್ದನು. ಆಗ ಹಂಸಪಕ್ಷಿಗಳ ಹಿಂಡೊಂದು ಆಕಾಶದಲ್ಲಿ ಹಾರಿ ಹೋಗುತ್ತಿತ್ತು. ಅವನು ನೋಡುತ್ತಿದ್ದಂತೆಯೇ ಒಂದು ಹಂಸಪಕ್ಷಿಯು ಚೀರುತ್ತ ಅವನ ಕಾಲ ಬಳಿ ಒಂದು ಬಿತ್ತು. ಅವನು ಅದನ್ನು ಎತ್ತಿಕೊಂಡನು. 'ಪಾಪ! ಹಾರುವ ಪಕ್ಷಿ' ಎಂದು ಕಳವಳಿಸಿದನು. ಯಾರೋ ಅದನ್ನು ಬಾಣದಿಂದ ಹೊಡೆದಿದ್ದರು. ನೋಡಿ ಸಿದ್ಧಾರ್ಥ ಮರುಗಿದನು. ಅದಕ್ಕೆ ತಗು

ಲಿದ ಬಾಣವನ್ನು ಕಿತ್ತು ಔಷಧ ಹಚ್ಚಿದನು. ನೀರನ್ನು ಕುಡಿಸಿದನು. ಪೂರ್ಣ ವಾಗಿ ಗುಣಹೊಂದಿದ ಮೇಲೆ ಅದನ್ನು ಮತ್ತೆ ಹಾರಿಸಿಬಿಟ್ಟನು.

ಸಿದ್ಧಾರ್ಥನು ಹದಿನೆಂಟು ವರುಷದವನಾಗಲು, ಅರಸನು ಅವನಿಗೆ ಯಶೋಧರೆಯೆಂಬ ಸುಂದರ ರಾಜಕುಮಾರಿಯನ್ನು ಮದುವೆಮಾಡಿದನು. ಸಿದ್ಧಾರ್ಥನು ಯಶೋಧರೆಯೊಡನೆ ಸುಖವಾಗಿ ದಿನಗಳನ್ನು ಕಳೆಯುತ್ತಿದ್ದನು. ಕೆಲವು ದಿನಗಳ ತರುವಾಯ ಯಶೋಧರೆಯು ಗರ್ಭಿಣಿಯಾಗಿ ಒಂದು ಗಂಡುಮಗುವನ್ನು ಹೆತ್ತಳು. ಕೂಸಿಗೆ ರಾಹುಲನೆಂದು ಹೆಸರಿಟ್ಟರು. ಮಗನ ಮುಖವನ್ನು ಕಂಡು ಸಿದ್ಧಾರ್ಥನಿಗೆ ಹಿಡಿಸಲಾರದಷ್ಟು ಆನಂದವಾಯಿತು.

ಯುವರಾಜನಾದ ಸಿದ್ಧಾರ್ಥನಿಗೆ ಗಂಡುಮಗು ಹುಟ್ಟಿದ ಸುದ್ದಿ ಊರ-ಲ್ಲೆಲ್ಲ ಹಬ್ಬಿತು. ಪ್ರಜೆಗಳೆಲ್ಲರೂ ಅರಸು ಮಗನ ಜನ್ಮದಿನೋತ್ಸವವನ್ನು ಆಚರಿಸಿದರು. ಊರನ್ನೆಲ್ಲ ಶೃಂಗರಿಸಿದ್ದರು. ಎಲ್ಲ ಕಡೆಗೂ ತಳಿರು-ತೋರಣ ಗಳನ್ನು ಕಟ್ಟಿದ್ದರು; ಧ್ವಜ-ಪತಾಕೆಗಳು ಹಾರಾಡುತ್ತಿದ್ದುವು. ಜನರು ತಮ್ಮ ಅಂಗಳಗಳನ್ನು ಸಾರಿಸಿ ಬಣ್ಣಬಣ್ಣದ ರಂಗವಲ್ಲಿ ಹಾಕಿದ್ದರು. ಪಟ್ಟಣದ ಆ ಶೋಭೆಯನ್ನು ನೋಡಬೇಕೆಂದು ಸಿದ್ಧಾರ್ಥನಿಗೆ ಮನಸ್ಸಾಯಿತು. ತನ್ನ ಸಾರಥಿ ಯಾದ ಚೆನ್ನನಿಗೆ ರಥ ಶೃಂಗರಿಸಲು ಹೇಳಿದನು. ತಾನೂ ಅಲಂಕಾರದ ಬಟ್ಟೆ-ಬರೆ ತೊಟ್ಟು ರಥದಲ್ಲಿ ಕುಳಿತನು. ಊರ ಶೋಭೆಯನ್ನು ನೋಡುತ್ತ ಸಾಗಿ ದನು. ಸ್ವಲ್ಪದೂರ ಹೋಗುವಷ್ಟರಲ್ಲಿ ಒಬ್ಬ ಮುಪ್ಪಿನ ಮುದುಕನು ಬಡಿಗೆ ಊರುತ್ತ ನಡೆದುದು ಸಿದ್ಧಾರ್ಥನ ಕಣ್ಣಿಗೆ ಬಿತ್ತು. ಆ ಮುದುಕನ ನಡುವು ಬಾಗಿತ್ತು. ಕೂದಲು ಬೆಳ್ಳಗಾಗಿದ್ದುವು. ಮೈಯಲ್ಲಿ ಎಲುವು-ಚರ್ಮಗಳಷ್ಟೇ ಉಳಿದಿದ್ದುವು. ಇದನ್ನು ಕಂಡು ಸಿದ್ಧಾರ್ಥನಿಗೆ ಆಶ್ಚರ್ಯವಾಯಿತು. ‹ಇದೇನು ಚೆನ್ನಾ!' ಎಂದು ಚೆನ್ನನನ್ನು ಕೇಳಿದನು. ಅದಕ್ಕೆ ಚೆನ್ನನು ‹ಅವನೂ ಒಬ್ಬ ಮನುಷ್ಯ; ಮುಪ್ಪಿನವನಾಗಿದ್ದಾನೆ!' ಎಂದು ಹೇಳಿದನು. ‹ಮನುಷ್ಯರೆಲ್ಲರಿಗೆ ಮುಪ್ಪುಬರುವುದು' ಎಂಬುದು ಅಂದು ಅವನಿಗೆ ಗೊತ್ತಾಯಿತು. ಅಷ್ಟಕ್ಕೆ ಮರಳಿ ಅರಮನೆಗೆ ಹೋದನು. ಮತ್ತೊಮ್ಮೆ ರೋಗದಿಂದ ಬಳಲುವ ಒಬ್ಬ ರೋಗಿಯನ್ನು ಸಿದ್ಧಾರ್ಥ ನೋಡಿದನು; ಇನ್ನೊಮ್ಮೆ ಶ್ಮಶಾನಕ್ಕೆ ಸಾಗಿಸುತ್ತಿರುವ ಒಂದು ಹೆಣವನ್ನು ಕಂಡನು. ‹ಮನುಷ್ಯನಿಗೆ ರೋಗ ಬರುವುದು; ಮನುಷ್ಯನು ಮುದುಕನಾಗುವನು; ಮನುಷ್ಯನು ಸಾಯುವನು' ಎಂಬ ಮಾತುಗಳು ಸಿದ್ಧಾರ್ಥನ ಮನಸ್ಸಿಗೆ ನೋವನ್ನುಂಟು ಮಾಡಿದುವು. ಇವುಗಳನ್ನು ನಿವಾರಿಸಲು ಮಾರ್ಗವಿಲ್ಲವೇ?' ಎಂದು ವಿಚಾರಮಾಡತೊಡಗಿದನು. ಅಂತಹ ಮಾರ್ಗವನ್ನು ಕಂಡುಹಿಡಿಯಲು ಅದೇ ದಿವಸ ಸಂಸಾರವನ್ನು ಬಿಟ್ಟು ಅರಣ್ಯಕ್ಕೆ ಹೋಗುವು ದಾಗಿ ನಿಶ್ಚಯಿಸಿದನು.

ಅಂದು ಹುಣ್ಣಿಮೆಯ ರಾತ್ರಿ. ಅರಮನೆಯಲ್ಲಿ ಎಲ್ಲರೂ ಮಲಗಿದ್ದಾರೆ. ಯಶೋಧರೆಯೂ ಮಲಗಿ ನಿದ್ರಿಸುತ್ತಿದ್ದಾಳೆ. ಆಕೆಯ ಪಕ್ಕದಲ್ಲಿ ಮುದ್ದು ಮಗು ರಾಹುಲನೂ ಮಲಗಿದ್ದಾನೆ. ಸಿದ್ಧಾರ್ಥನು ಕಾಲಸಪ್ಪಳವಾಗದಂತೆ ಯಶೋ-ಧರೆಯ ಹತ್ತಿರ ಬಂದನು. ತನ್ನ ಪ್ರೀತಿಯ ಹೆಂಡತಿಗೆ ಹಾಗು ಮುದ್ದು ಮಗನಿಗೆ



ಬುದ್ಧದೇವನು ಕಂಡ ದೃಶ್ಯಗಳು

ಕೊನೆಯದಾಗಿ ಮುದ್ದಿಡಬೇಕೆಂದು ಆತನಿಗೆ ಮನಸ್ಸಾಯಿತು. ಆದರೆ ಅವನು ಮನಸ್ಸನ್ನು ಜಗ್ಗಿ ಹಿಡಿದನು. ಹೆಂಡತಿ ಎಚ್ಚತ್ತರೆ ತನ್ನ ಎಲ್ಲ ಗುಟ್ಟು ಹಾಳಾಗುವುದೆಂದು ಯೋಚಿಸಿದನು. ಹೆಂಡತಿಯನ್ನೂ ಮಗನನ್ನೂ ಒಂದುಸಲ ಕಣ್ಣು ತುಂಬ ನೋಡಿ, ಕೂಡಲೆ ಅವನು ಸಾವಕಾಶವಾಗಿ ಹೊರಗೆ ಬಂದನು.

ಚೆನ್ನ ತನ್ನ ಒಡೆಯನ ಅಪ್ಪಣೆಯಂತೆ ಕುದುರೆಯನ್ನು ಸಿದ್ಧಗೊಳಿಸಿದ್ದನು. ಸಿದ್ಧಾರ್ಥ ಕುದುರೆಯನ್ನು ಹತ್ತಿದ. ಇಬ್ಬರೂ ಕೋಟೆಯನ್ನು ದಾಟಿದರು. ಬೆಳು-ದಿಂಗಳಲ್ಲಿ ಬಹಳ ದೂರ ನಡೆದುಹೋದರು. ಬೆಳಗಾಗುವುದರೊಳಗೆ ಅವರು 'ಅನುಮಾ' ನದಿಯ ದಡವನ್ನು ಸೇರಿದರು. ಸಿದ್ಧಾರ್ಥನು ಚೆನ್ನನಿಗೆ ತನ್ನ ಎಲ್ಲ ಆಭರಣಗಳನ್ನೂ ಉಡುಪುಗಳನ್ನೂ ಕೊಟ್ಟನು. ಕುದುರೆಯನ್ನು ತೆಗೆದು-ಕೊಂಡು ರಾಜಧಾನಿಗೆ ತಿರುಗಿಹೋಗಲು ಹೇಳಿದನು. ಒಡೆಯನನ್ನು ಬಿಟ್ಟು ತೆರಳುವುದಕ್ಕೆ ಚೆನ್ನನಿಗೆ ಬಲು ದುಃಖವಾಯಿತು. ಸಿದ್ಧಾರ್ಥನನ್ನು ಹತ್ತಿಸಿಕೊಂಡು ಬಂದಿದ್ದ ಕಂಥಕನೆಂಬ ಕುದುರೆಯೂ ಕಣ್ಣೀರು ಸುರಿಸಿತು. ನಿರ್ವಾಹವಿಲ್ಲದೆ ಚೆನ್ನನು ಹಿಂದಿರುಗಿದನು. ಒಡೆಯನನ್ನು ಅಗಲಿದ ದುಃಖ-ದಿಂದ 'ಕಂಥಕ' ಕುದುರೆಯು ದಾರಿಯಲ್ಲಿಯೇ ಬಿದ್ದು ಪ್ರಾಣಬಿಟ್ಟಿತು. ಚೆನ್ನ-ನೊಬ್ಬನೇ ತಿರುಗಿಬಂದು ಎಲ್ಲ ಸಂಗತಿಯನ್ನೂ ಅರಮನೆಯಲ್ಲಿ ತಿಳುಹಿದನು.

ಇತ್ತ ಸಿದ್ಧಾರ್ಥನು ಅಲ್ಲಿ ಇಲ್ಲಿ ತಿರುಗುತ್ತ ಮಗಧರಾಜ್ಯದ ರಾಜಧಾನಿಯಾದ ರಾಜಗೃಹಕ್ಕೆ ಬಂದನು. ಅಲ್ಲಿ ಅಲಾರ್ಕ ಮತ್ತು ಉದ್ರಕ ಎಂಬ ಬ್ರಾಹ್ಮಣ ಪಂಡಿತರ ಬಳಿ ವೇದಶಾಸ್ತ್ರಗಳನ್ನು ಅಭ್ಯಾಸಮಾಡಿದನು. ಅವರಿಂದ ಅವನ ಮನಸ್ಸಿಗೆ ಶಾಂತಿ ಸಿಗಲಿಲ್ಲ. ಅದನ್ನು ಬಿಟ್ಟು ಅಲ್ಲಿಯೆ ಸಮೀಪದಲ್ಲಿ ಇರುವ ಗ್ರಧ್ರಕೂಟ ಶಿಖರದ ಗುಹೆಯಲ್ಲಿ ಕುಳಿತು ವ್ರತ-ಉಪವಾಸಗಳನ್ನು ಮಾಡಿದನು. ಅಲ್ಲಿ ಇರುವಾಗ ಒಂದುದಿನ ಸಿದ್ಧಾರ್ಥನು, ಅರಸನ ಯಜ್ಞಕ್ಕೆ ಕುರುಬನೊಬ್ಬನು ಕುರಿಗಳನ್ನು ಹೊಡೆದುಕೊಂಡು ಹೋಗುವುದನ್ನು ಕಂಡನು. ಸಣ್ಣ ಮರಿಯೊಂದು ನಡೆಯಲಾರದೆ ಒದರುತ್ತಿತ್ತು. ಸಿದ್ಧಾರ್ಥನಿಗೆ ಕನಿಕರ ಹುಟ್ಟಿತು. ಮರಿಯನ್ನು ಎತ್ತಿಕೊಂಡು ತಾನೂ ಕುರುಬನೊಂದಿಗೆ ನಡೆದನು; ಅರಸನ ಮುಂದೆ ಬಂದು ನಿಂತನು. ಸಿದ್ಧಾರ್ಥನನ್ನು ನೋಡಿ ಎಲ್ಲರೂ ಚಕಿತ-ರಾದರು. "ಸುಮ್ಮಸುಮ್ಮನೆ ಪ್ರಾಣಿಗಳನ್ನು ಆಹುತಿಕೊಟ್ಟರೆ ನಿಮಗೆ ಏನು ಬರುವುದು? ಯಾವನಿಗೆ ಪ್ರಾಣಿಗಳನ್ನು ಬದುಕಿಸಲು ಬರುವುದಿಲ್ಲವೊ ಅವನು ಅವುಗಳನ್ನು ಕೊಲ್ಲಬಾರದು" ಎಂದವನು ಬೋಧಿಸಿದನು. ಅರಸನು ಒಪ್ಪಿಕೊಂಡು ಬಲಿಕೊಡುವುದನ್ನು ನಿಲ್ಲಿಸಿದನು.

ಬಳಿಕ ಸಿದ್ಧಾರ್ಥನು ಅಲ್ಲಿಂದ ಮುಂದೆ ನಡೆದನು. 'ಗಯಾ' ನಗರದ ಬಳಿಯಲ್ಲಿ, ನಿರಂಜನಾನದಿಯ ದಂಡೆಯ ಮೇಲೆ ಇದ್ದ ಒಂದು ಅರಳೆಯ ಮರದ ಕೆಳಗೆ ಕುಳಿತು ದೇವರ ಧ್ಯಾನ ಮಾಡಹತ್ತಿದನು. ಅನ್ನ-ನೀರುಗಳನ್ನು ಮರೆತುಬಿಟ್ಟನು. ಎಷ್ಟೋ ದಿನಗಳು ಕಳೆದುವು. ಶರೀರವು ಸೊರಗಿಹೋಯಿತು. ಕೊನೆಗೊಂದು ದಿನ ಅವನಿಗೆ ಜ್ಞಾನವುಂಟಾಯಿತು. ಸಂಸಾರದ ಜಂಜಡದಿಂದ ಪಾರಾಗುವ ಉಪಾಯ ಹೊಳೆಯಿತು. ಅಲ್ಲಿಂದ ಎದ್ದು ಸಂಚರಿಸುತ್ತ ಜನರಿಗೆ ಉಪದೇಶ ಮಾಡಹತ್ತಿದನು. ಅಂದಿನಿಂದ ಸಿದ್ಧಾರ್ಥನು ಬುದ್ಧನಾದನು. 'ಬುದ್ಧ' ಎಂದರೆ ಎಲ್ಲವನ್ನೂ ತಿಳಿದವ. ಬುದ್ಧನು ಹೊಸದೊಂದು ಧರ್ಮವನ್ನು ಸ್ಥಾಪಿಸಿದನು. ಅದಕ್ಕೆ ಬೌದ್ಧಧರ್ಮವೆಂದು ಹೆಸರು. ಗಯಾ ಪಟ್ಟಣವು 'ಬುದ್ಧಗಯೆ' ಎಂದೂ ಅವನು ಕುಳಿತು ತಪಸ್ಸುಮಾಡಿದ ಸ್ಥಳದಲ್ಲಿದ್ದ ಅರಳೆಯ ಮರವು 'ಬೋಧಿವೃಕ್ಷ' ಎಂದೂ ಈಗಲೂ ಹೆಸರಾಗಿವೆ.

ಬುದ್ಧನು ಮೊದಲು ಉಪದೇಶ ಮಾಡಿದುದು ಕಾಶಿಯಲ್ಲಿ. ಆನಂದನೆಂಬವನು ಆತನ ಮೊದಲನೆಯ ಶಿಷ್ಯನು. ಮುಂದೆ ೪೫ ವರುಷಗಳ ವರೆಗೆ ಬುದ್ಧನು ಎಲ್ಲ ಕಡೆಗೆ ತಿರುಗಾಡಿ ಉಪದೇಶ ಮಾಡಿದನು. ಹಾಗೆಯೆ ಕಪಿಲವಸ್ತುವಿಗೆ ಬಂದನು. ಹೆಂಡತಿ ಯಶೋಧರೆ, ಮಗ ರಾಹುಲ ಅವನ ಧರ್ಮವನ್ನು ಸ್ವೀಕರಿಸಿದರು. ಯಶೋಧರೆ 'ಭಿಕ್ಷುಣಿ' ಎಂದರೆ ಬೌದ್ಧ ಸಂನ್ಯಾಸಿನಿ-ಯಾದಳು. ಬುದ್ಧನು ಭಾರತದ ಬಹುಭಾಗವನ್ನು ಸುತ್ತಾಡಿ ತನ್ನ ಧರ್ಮವನ್ನು

ಪ್ರಚಾರಮಾಡಿದನು. ಅವನು ಎಂಬತ್ತು ವರುಷ ಬದುಕಿ ನಿರ್ವಾಣವನ್ನು ಹೊಂದಿದನು.

"ಯಾವಾಗಲೂ ಸತ್ಯ ಮಾತಾಡಬೇಕು. ಎಲ್ಲರನ್ನೂ ಪ್ರೀತಿಸಬೇಕು. ನೀತಿಯಿಂದ ನಡೆಯಬೇಕು. ಯಾವ ಪ್ರಾಣಿಗೂ ನೋವನ್ನುಂಟು ಮಾಡ-ಬಾರದು. ವೈರವನ್ನು ಮಾಡದೆ, ಕೆಡುಕು ಮಾಡಿದವರಿಗೂ ಒಳಿತು ಮಾಡಬೇಕು, ದೀನದರಿದ್ರರ ಸೇವೆ ಮಾಡಬೇಕು" ಇವೇ ಬೌದ್ಧಧರ್ಮದ ಮುಖ್ಯ ಮಾತುಗಳು.

## ಅಭ್ಯಸನಗಳು

೧. ಸಿದ್ಧಾರ್ಥನ ತಂದೆ-ತಾಯಿಗಳು ಯಾರು?

೨. ಇವನು ಎಲ್ಲಿ ಹುಟ್ಟಿದನು? ಮತ್ತು ಹುಟ್ಟಿದಕೂಡಲೆ, ಜೋಯಿಸರು ಇವನ ತಂದೆಗೆ ಏನು ಹೇಳಿದರು?

೩. ಚಿಕ್ಕಂದಿನಲ್ಲಿ ಇವನಲ್ಲಿ ಕಂಡುಬಂದ ಮಹತ್ತ್ವದ ಗುಣವು ಯಾವುದು?

೪. ಸಿದ್ಧಾರ್ಥನು ಪಟ್ಟಣದ ಶೋಭೆಯನ್ನು ನೋಡಲು ಹೋದಾಗ ಅಲ್ಲಿ ಏನೇನು ನೋಡಿದನು?

೫. ಸಿದ್ಧಾರ್ಥನು ಸಂಸಾರವನ್ನು ಬಿಟ್ಟು ಅರಣ್ಯಕ್ಕೆ ಹೋಗಲು ಏಕೆ ನಿಶ್ಚಯಿಸಿದನು?

೬. ಸಿದ್ಧಾರ್ಥನು ಯಾವ ಧರ್ಮವನ್ನು ಸ್ಥಾಪಿಸಿದನು?

೭. ಬೌದ್ಧಧರ್ಮದ ಮುಖ್ಯ ಮಾತುಗಳಾವುವು?

೮. ಕೆಳಗಿನ ವಾಕ್ಯಗಳಲ್ಲಿಯ ಬಿಟ್ಟ ಶಬ್ದಗಳನ್ನು ತುಂಬಿ ವಾಕ್ಯವನ್ನು ಪೂರ್ತಿಗೊಳಿಸಿರಿ.

(ಅ) ಸಿದ್ಧಾರ್ಥನು ತನ್ನ ಹೆಂಡತಿಯಾದ......ಮಗನಾದ......ಬಿಟ್ಟು ......ಹೋದನು.

(ಬ) ಸಿದ್ಧಾರ್ಥನು — — ನದಿಯ ದಂಡೆಯಮೇಲಿದ್ದ — — ಮರದ ಕೆಳಗೆ ಕುಳಿತು— —ಮಾಡಹತ್ತಿದನು.

(ಕ) ಬುದ್ಧನು ಮೊದಲು ಉಪದೇಶ ಮಾಡಿದುದು— —ಯಲ್ಲಿ— —ನೆಂಬವನು ಇವನ— —ಶಿಷ್ಯನು.

(ಡ) ಒಡೆಯನನ್ನು ಬಿಟ್ಟು ತೆರಳಲು— — —ನಿಗೆ ದುಃಖವಾಯಿತು; ಹತ್ತಿಸಿಕೊಂಡು ಬಂದ— — —ನೆಂಬ ಕುದುರೆಯೂ ಕಣ್ಣೀರು ಸುರಿಸಿತು.

# ೪. ಚಂದ್ರಗುಪ್ತ ಮೌರ್ಯ

ಬಹಳ ಹಿಂದಿನ ಕಾಲದ ಕತೆ. ಆಗ ಭಾರತದಲ್ಲಿ ಎಲ್ಲ ಕಡೆಗೂ ಸಣ್ಣ ಸಣ್ಣ ರಾಜ್ಯಗಳಿದ್ದುವು. ಅವುಗಳಲ್ಲಿ ಮಗಧ ಎಂಬ ರಾಜ್ಯವು ಸ್ವಲ್ಪ ದೊಡ್ಡದು. ಅಲ್ಲಿ ನಂದವಂಶದ ರಾಜರು ಆಳುತ್ತಿದ್ದರು. ಆ ಕಾಲದಲ್ಲಿ ಎಲ್ಲ ರಾಜ್ಯಗಳನ್ನೂ ಗೆದ್ದು, ದೊಡ್ಡದೊಂದು ಸಾಮ್ರಾಜ್ಯವನ್ನು ಸ್ಥಾಪಿಸಿದ ಅರಸನೆಂದರೆ ಚಂದ್ರಗುಪ್ತನು. ಅವನೇ ಭಾರತದ ಮೊದಲನೆಯ ಚಕ್ರವರ್ತಿಯೆಂದು ಹೆಸರುಪಡೆದಿದ್ದಾನೆ.



ಚಂದ್ರಗುಪ್ತ ಮೌರ್ಯ

ನಂದರ ರಾಜಧಾನಿ ಪಾಟಲೀಪುತ್ರ. ಈಗಿನ ಬಿಹಾರ ರಾಜ್ಯದಲ್ಲಿದ್ದ ಪಾಟಣಾನಗರಕ್ಕೆ ಆಗ 'ಪಾಟಲೀಪುತ್ರ' ಎಂದು ಹೆಸರಿತ್ತು. ನಂದವಂಶದ ಕಡೆಯ ಅರಸನೆಂದರೆ ಮಹಾಪದ್ಮ. ಅವನಿಗೆ ಎಂಟುಜನ ಗಂಡು ಮಕ್ಕಳಿದ್ದರು. ಅವರೆಲ್ಲರೂ ದುಷ್ಟರು. ಅವರ ಆಳಿಕೆಯಿಂದ ಪ್ರಜೆಗಳೆಲ್ಲರೂ ಬೇಸತ್ತಿದ್ದರು. ಮಹಾಪದ್ಮನ ಬಳಿಯಲ್ಲಿ ಮುರಾದೇವಿ ಎಂಬ ಒಬ್ಬ ದಾಸಿಯಿದ್ದಳು. ಅವಳ ಮೇಲೆ ಅರಸನ ಪ್ರೀತಿ ಬಹಳ. ಆಕೆಯ ಹೊಟ್ಟೆಯಿಂದ ಚಂದ್ರಗುಪ್ತನು ಹುಟ್ಟಿದನು.

ಬಾಲಕನಾದ ಚಂದ್ರಗುಪ್ತನು ಗಟ್ಟಿಮುಟ್ಟಾದ ಮೈಕಟ್ಟಿನವನೂ ಚುರುಕುಬುದ್ಧಿಯವನೂ ಆಗಿದ್ದನು. ಅವನ ಮುಖದಲ್ಲಿ ರಾಜಕಳೆ ತುಂಬಿ ತುಳುಕುತ್ತಿತ್ತು. ಅವನ ಮುದ್ದುಮುಖವನ್ನು ಕಂಡು ಎಲ್ಲ ಜನರೂ ಅವ

ನನ್ನು ಪ್ರೀತಿಸುತ್ತಿದ್ದರು. ಆದರೆ ಮಹಾಪದ್ಮನ ಎಂಟು ಜನ ಮಕ್ಕಳೂ ಅವನನ್ನು ಸೇರುತ್ತಿರಲಿಲ್ಲ; ದಾಸೀಪುತ್ರನೆಂದು ಅವನನ್ನು ಹೀಯಾಳಿಸುತ್ತಿದ್ದರು. ಅವರೆಲ್ಲರಿಗಿಂತಲೂ ಚಂದ್ರಗುಪ್ತನು ಬಲಿಷ್ಠನೂ ಚಪಲನೂ ಇದ್ದನು. ಆಟಪಾಟಗಳಲ್ಲಿ ಅವನದೇ ಒಂದು ಕೈ ಮೇಲು. ಆದುದರಿಂದ ಅವರಿಗೆ ಅಸೂಯೆ. ಎಲ್ಲರೂ ಒಂದಾಗಿ, ಒಮ್ಮೊಮ್ಮೆ ಚಂದ್ರಗುಪ್ತನನ್ನು ಆಟದಲ್ಲಿ ಹೊಡೆಯುತ್ತಿದ್ದರು.

ಇದೇ ಸಮಯದಲ್ಲಿ ಚಾಣಕ್ಯನೆಂಬ ಒಬ್ಬ ಬುದ್ಧಿವಂತ ಬ್ರಾಹ್ಮಣನು ಪಾಟಲೀಪುತ್ರಕ್ಕೆ ಬಂದನು. ಅರಸನ ಒಡ್ಡೋಲಗಕ್ಕೆ ಹೋದಾಗ, ಗರ್ವಿಷ್ಠ-ರಾದ ನಂದರು ಚಾಣಕ್ಯನನ್ನು ಅಪಮಾನಗೊಳಿಸಿದರು. ಆಗ ಅವನು—'ನಿಮ್ಮ ವಂಶವನ್ನು ನಿರ್ಮೂಲಮಾಡದಿದ್ದರೆ ನಾನು ಆರ್ಯಚಾಣಕ್ಯನೇ ಅಲ್ಲ' ಎಂದು ಆಣೆಮಾಡಿ, ಒಡ್ಡೋಲಗದಿಂದ ಹೊರಗೆ ಬಂದನು. ಬರುವಾಗ ಅವನು, ದಾರಿಯಲ್ಲಿ ಗೆಳೆಯರೊಂದಿಗೆ ಆಡುತ್ತಿದ್ದ ಚಂದ್ರಗುಪ್ತನನ್ನು ಕಂಡನು. ಆ ಬಾಲಕನಲ್ಲಿಯ ರಾಜಕಳೆಯನ್ನು ನೋಡಿ ಚಾಣಕ್ಯನಿಗೆ ಕುತೂಹಲ ಹುಟ್ಟಿತು. "ಈ ಬಾಲಕನು ಮುಂದೆ ರಾಜನಾಗುವನು. ಇವನಿಗೆ ತಕ್ಕ ವಿದ್ಯಾಬುದ್ಧಿಗಳನ್ನು ಕಲಿಸುವೆನು" ಎಂದು ಚಾಣಕ್ಯನು ಮುರಾ ದೇವಿಗೆ ಹೇಳಿದನು. ನಂದರು ಆಗಾಗ ಕೊಡುತ್ತಿದ್ದ ತೊಂದರೆಗಳಿಗಾಗಿ ಆಕೆಯೂ ಬೇಸತ್ತಿದ್ದಳು. ಆದುದರಿಂದ ಮಗನನ್ನು ಚಾಣಕ್ಯನ ಸಂಗಡ ಕಳುಹಲು ಆಕೆ ಸಮ್ಮತಿಸಿದಳು.

ಚಾಣಕ್ಯನು ಚಂದ್ರಗುಪ್ತನಿಗೆ, ಅರಸುಮಗನಿಗೆ ಬೇಕಾಗುವ ಎಲ್ಲ ವಿದ್ಯೆಗಳನ್ನೂ ಕಲಿಸಿದನು. ರಾಜನೀತಿಯ ತಂತ್ರಗಳನ್ನು ಕಲಿಸಿದನು. ಯೋಗ್ಯರಾದ ಅರಸರ ಗೆಳೆತನವನ್ನು ಹೇಗೆ ಮಾಡಬೇಕು. ವೈರಿಗಳ ಶಕ್ತಿಯನ್ನು ಹೇಗೆ ಕುಗ್ಗಿಸಬೇಕು. ಪ್ರಜೆಗಳ ಮನಸ್ಸನ್ನು ಒಲಿಸಬೇಕಾದರೆ ಯಾವ ರೀತಿಯಿಂದ ನಡೆದುಕೊಳ್ಳಬೇಕು—ಇವೇ ಮೊದಲಾದ ವಿಷಯಗಳನ್ನು ಚಂದ್ರಗುಪ್ತನು ಚೆನ್ನಾಗಿ ಕಲಿತುಕೊಂಡನು. ನಂದರಿಗೆ ಇದು ಗೊತ್ತಾಯಿತು. ಚಂದ್ರಗುಪ್ತನು ತಮ್ಮ ರಾಜ್ಯವನ್ನು ಅಪಹರಿಸಬಹುದೆಂದು ಅವರು ಸಂಶಯಪಟ್ಟು, ಅವನನ್ನು ಕೊಲ್ಲಲು ಹವಣಿಸಿದರು. ಇದು ಚಾಣಕ್ಯನಿಗೂ ಗೊತ್ತಾಯಿತು. ಆದುದರಿಂದ ಅವನು ಚಂದ್ರಗುಪ್ತನನ್ನು ಕರೆದುಕೊಂಡು, ಬಹಳದೂರದ ತಕ್ಷಶಿಲೆ ಎಂಬಲ್ಲಿಗೆ ಹೋದನು. ಅಲ್ಲಿಯೇ ಚಂದ್ರಗುಪ್ತನು ದೊಡ್ಡವನಾದನು.

ದೊಡ್ಡವನಾದ ಮೇಲೆ ಚಂದ್ರಗುಪ್ತನು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಅತ್ತಿತ್ತ ಗುಡ್ಡಗಾಡಿನ ಪ್ರದೇಶಗಳನ್ನು ತಿರುಗಾಡಿದನು; ಅಲ್ಲಿಯ ಕೆಲವು

ರಾಜನ ಗೆಳೆತನವನ್ನು ಮಾಡಿದನು. ಅವರ ಸಹಾಯದಿಂದ ದೊಡ್ಡದೊಂದು ಸೈನ್ಯವನ್ನು ಸಿದ್ಧಪಡಿಸಿದನು. ತನ್ನ ಸೈನ್ಯದೊಂದಿಗೆ ಮಗಧ ರಾಜ್ಯದಮೇಲೆ ದಂಡೆತ್ತಿಹೋದನು. ನಂದರ ದುಷ್ಟ ಆಳಿಕೆಯಿಂದ ಪ್ರಜರೂ ಬೇಸತ್ತಿದ್ದರು. ನಂದರ ಸೈನ್ಯದಲ್ಲಿಯ ಕೆಲವರೂ, ನಂದರು ಹಾಳಾಗಲೆಂದೇ ಇಚ್ಛೆಪಡುತ್ತಿದ್ದರು. ಆದುದರಿಂದ ಚಂದ್ರಗುಪ್ತನನ್ನು ಯುದ್ಧದಲ್ಲಿ ಸೋಲಿಸುವುದು ನಂದರಿಗೆ ಸಾಧ್ಯವಾಗಲಿಲ್ಲ. ಅವನು ನಂದರನ್ನು ಗೆದ್ದು ಅವರೆಲ್ಲರನ್ನೂ ಕೊಲ್ಲಿಸಿದನು. ನಂದರ ಮಂತ್ರಿಯಾದ ಅಮಾತ್ಯರಾಕ್ಷಸನೆಂಬವನು ಮಾತ್ರ ತಪ್ಪಿಸಿಕೊಂಡು ಹೋದನು. ಮಗಧರಾಜ್ಯವು ಚಂದ್ರಗುಪ್ತನ ಕೈಸೇರಿತು. ಬಹಳ ವೈಭವದಿಂದ ಅವನಿಗೆ ಪಾಟಲೀಪುತ್ರದಲ್ಲಿ ರಾಜ್ಯಾಭಿಷೇಕ ನಡೆಯಿತು. ಚಾಣಕ್ಯನು ಚಂದ್ರಗುಪ್ತನ ಮಂತ್ರಿಯಾದನು.

ನಂದರ ಪಕ್ಷದವನಾದ ಅಮಾತ್ಯರಾಕ್ಷಸನು ತಪ್ಪಿಸಿಕೊಂಡು ಹೋದ-ನಷ್ಟೇ? ಅವನು ಚಂದ್ರಗುಪ್ತನನ್ನು ಬಹುಪರಿಯಿಂದ ಪೀಡಿಸಿದನು. ಒಮ್ಮೆ ಔಷಧಿಯಲ್ಲಿ ವಿಷಕೂಡಿಸಿ ಚಂದ್ರಗುಪ್ತನಿಗೆ ಕುಡಿಸುವ ಹಂಚಿಕೆ ಹಾಕಿದನು. ಮತ್ತೊಮ್ಮೆ ಮಲಗಿಕೊಂಡ ಅರಸನನ್ನು ಕೊಲ್ಲಲು ಚಾಂಡಾಲರನ್ನು ಕಳು-ಹಿದ್ದನು. ಈ ಒಳಸಂಚುಗಳು ಚಾಣಕ್ಯನಿಗೆ ಹೇಗೋ ಗೊತ್ತಾದುವು. ಅವನು ಇವುಗಳಿಂದ ಚಂದ್ರಗುಪ್ತನನ್ನು ಪಾರುಮಾಡಿದನು. ಚಾಣಕ್ಯನ ಮುಂದೆ ತನ್ನ ಆಟ ನಡೆಯದಾಗಲು, ರಾಕ್ಷಸನು ಎಲ್ಲಿಯೋ ತಲೆತಪ್ಪಿಸಿ-ಕೊಂಡು ಇರಹತ್ತಿದನು.

ಅರಸನಾದ ಕೆಲವೇ ದಿನಗಳಲ್ಲಿ ಚಂದ್ರಗುಪ್ತನು ದಿಗ್ವಿಜಯಕ್ಕೆ ಹೊರಟನು. ಪೂರ್ವಕ್ಕೆ ಬಂಗಾಲದವರೆಗೆ ರಾಜ್ಯ ಬೆಳೆಸಿದನು. ಆಗ ಪಂಜಾಬ-ದಲ್ಲಿ ಸಿಕಂದರನ ರಾಯಭಾರಿಯಾದ ಸೆಲ್ಯೂಕಸನು ಆಳುತ್ತಿದ್ದನು. ಅವನು ಬಹಳ ಬಲಾಢ್ಯನಿದ್ದನು. ಚಂದ್ರಗುಪ್ತನು ಅವನ ಮೇಲೆ ಏರಿಹೋದನು. ಸೆಲ್ಯೂಕಸನು ಸೋತು ಅವನೊಡನೆ ಒಪ್ಪಂದಮಾಡಿಕೊಂಡನು. ಚಂದ್ರ-ಗುಪ್ತನ ಶೌರ್ಯ-ಸಾಹಸಗಳಿಗೆ ಮೆಚ್ಚಿ ಸೆಲ್ಯೂಕಸನು, ತನ್ನ ಮಗಳನ್ನು ಅವನಿಗೆ ಕೊಟ್ಟು ಲಗ್ನಮಾಡಿದನು. ಅಲ್ಲದೆ ಕಾಬೂಲ-ಕಂದಹಾರಗಳನ್ನು ವರದಕ್ಷಿಣೆಯಾಗಿ ಕೊಟ್ಟನು. ಇದರಿಂದ ಚಂದ್ರಗುಪ್ತನ ರಾಜ್ಯವು ಬಂಗಾಲದಿಂದ ಇರಾಣದವರೆಗೆ ಹಬ್ಬಿತು. ಭಾರತದಲ್ಲಿಯ ಮೊದಲನೆಯ ಸಾಮ್ರಾಜ್ಯವು ಇದೇ! ಚಂದ್ರಗುಪ್ತನು ತನ್ನ ತಾಯಿಗೆ ಮಹತ್ವಕೊಟ್ಟು, ತನ್ನ ವಂಶಕ್ಕೆ 'ಮೌರ್ಯವಂಶ' ಎಂದೂ ತನ್ನ ಸಾಮ್ರಾಜ್ಯಕ್ಕೆ 'ಮೌರ್ಯ ಸಾಮ್ರಾಜ್ಯ' ಎಂದೂ ಹೆಸರಿಟ್ಟನು.

ಚಾಣಕ್ಯಮಂತ್ರಿಯ ಸಹಾಯದಿಂದ ಚಂದ್ರಗುಪ್ತನು ತನ್ನ ರಾಜ್ಯವನ್ನು

ಒಳ್ಳೆಯ ರೀತಿಯಿಂದ ಆಳಿದನು. ಪ್ರವಾಸಿಕರ ಸಲುವಾಗಿ ಒಳ್ಳೆಯ ರಾಜಮಾರ್ಗಗಳನ್ನು ಮಾಡಿಸಿದನು; ಅಲ್ಲಲ್ಲಿಗೆ ಧರ್ಮಶಾಲೆಗಳನ್ನು ಕಟ್ಟಿಸಿದನು; ಒಕ್ಕಲಿಗರ ಅನುಕೂಲತೆಗಾಗಿ ಕೆರೆ-ಕಟ್ಟೆಗಳನ್ನು ಕಟ್ಟಿಸಿದನು; ಪ್ರಜರ ನ್ಯಾಯವಿಚಾರಣೆಯನ್ನು ತಾನೇ ಮಾಡುತ್ತಿದ್ದನು. ಕಳವು, ಕೊಲೆ, ಸುಲಿಗೆ ಮತ್ತು ರಾಜದ್ರೋಹ ಮಾಡಿದವರನ್ನು ಅವನು ಶಿಕ್ಷಿಸದೆ ಬಿಡುತ್ತಿದ್ದಿಲ್ಲ. ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ಗೂಢಚಾರರನ್ನಿಟ್ಟು, ಅವರಿಂದ ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳುತ್ತಿದ್ದನು. ಆಡಳಿತದ ಅನುಕೂಲತೆಗಾಗಿ ಬೇರೆ ಬೇರೆ ಖಾತೆಗಳನ್ನು ರಚಿಸಿ, ಅವುಗಳನ್ನು ದಕ್ಷರಾದ ಅಧಿಕಾರಿಗಳ ಕೈಯಲ್ಲಿ ಕೊಟ್ಟಿದ್ದನು. ಇವೆಲ್ಲಕ್ಕೂ ಚಾಣಕ್ಯನ ಚಾತುರ್ಯವೇ ಮುಖ್ಯ ಕಾರಣವಾಗಿತ್ತು.

ಚಂದ್ರಗುಪ್ತನ ರಾಜ್ಯವು ಒಳ್ಳೆಯ ಘನತೆಯನ್ನು ಪಡೆದಿತ್ತು. ಅವನು ಸುಮಾರು ೨೫ ವರುಷಗಳ ಕಾಲ ರಾಜ್ಯವಾಳಿದನು. ಮುಪ್ಪಿನವನಾಗಲು ರಾಜ್ಯಭಾರವನ್ನು ತನ್ನ ಮಗನಾದ ಬಿಂದುಸಾರನಿಗೆ ಒಪ್ಪಿಸಿ, ತಾನು ಭದ್ರಬಾಹು ಮುನಿಗಳ ಶಿಷ್ಯನಾಗಿ ಜೈನಧರ್ಮವನ್ನು ಸ್ವೀಕರಿಸಿದನು. ಗುರುಗಳೊಡನೆ ಅವನು, ಈಗ ಮೈಸೂರು ರಾಜ್ಯದಲ್ಲಿ ಇರುವ ಶ್ರವಣಬೆಳುಗೊಳಕ್ಕೆ ಬಂದುನಿಂತನು. ಅಲ್ಲಿಯೇ ಕ್ರಿ. ಪೂ. ೨೯೭ರಲ್ಲಿ ನಿರ್ವಾಣವನ್ನು ಹೊಂದಿದನು.

ಚಂದ್ರಗುಪ್ತನ ಆಳಿಕೆಯಲ್ಲಿ ಮೆಗ್ಯಾಸ್ಥೆನೀಸ್ ಎಂಬ ಗ್ರೀಸದೇಶದ ಪ್ರವಾಸಿಯು ಇಲ್ಲಿಗೆ ಬಂದಿದ್ದನು. ಅವನು ಚಂದ್ರಗುಪ್ತನ ಆಸ್ಥಾನದಲ್ಲಿಯೆ ಇದ್ದನು. ಅವನು ತನ್ನ ಗ್ರಂಥದಲ್ಲಿ ಮೌರ್ಯಸಾಮ್ರಾಜ್ಯದ ಬಗೆಗೆ ಹೀಗೆ ಬರೆದಿದ್ದಾನೆ:— "ಪಾಟಲೀಪುತ್ರ ನಗರವು ಅತಿ ವೈಭವದಿಂದ ಮೆರೆಯುತ್ತದೆ. ಇಲ್ಲಿಯ ಜನರು ಯೋಗ್ಯರು; ಧೈರ್ಯಶಾಲಿಗಳು. ಸ್ತ್ರೀಯರೆಲ್ಲರೂ ಗುಣವತಿಯರು. ಜನರು ವಿಶ್ವಾಸವುಳ್ಳವರು. ಒಬ್ಬರನ್ನೊಬ್ಬರು ಮೋಸಗೊಳಿಸುವುದಿಲ್ಲ. ರಾಜ್ಯದಲ್ಲಿ ಕಳವು-ಸುಲಿಗೆಗಳ ಸುಳಿವು ಕೂಡ ಇಲ್ಲ."

## ಅಭ್ಯಸನಗಳು

೧. ಚಂದ್ರಗುಪ್ತನ ತಂದೆ-ತಾಯಿಗಳು ಯಾರು?

೨. ಮಹಾಪದ್ಮನ ಮಕ್ಕಳು ಚಂದ್ರಗುಪ್ತನನ್ನು ಏಕೆ ಹೀಯಾಳಿಸುತ್ತಿದ್ದರು.

೩. ಚಾಣಕ್ಯನು "ನಂದರನ್ನು ನಿರ್ಮೂಲ ಮಾಡುವೆನು" ಎಂದು ಏಕೆ ಪ್ರತಿಜ್ಞೆ ಮಾಡಿದನು?

೪. ಚಾಣಕ್ಯನು ಚಂದ್ರಗುಪ್ತನಿಗೆ ಯಾವ ಯಾವ ವಿದ್ಯೆಗಳನ್ನು ಕಲಿಸಿದನು?

೫. ಚಂದ್ರಗುಪ್ತನು ದೊಡ್ಡವನಾದಮೇಲೆ, ತನ್ನ ರಾಜ್ಯವನ್ನು ದೊರಕಿಸಲು ಯಾವ ಪ್ರಯತ್ನಗಳನ್ನು ಮಾಡಿದನು?

೬. ನಂದರ ಮಂತ್ರಿಯು ಚಂದ್ರಗುಪ್ತನನ್ನು ಯಾವ ರೀತಿಯಿಂದ ಪೀಡಿಸಿದನು?
೭. ಚಂದ್ರಗುಪ್ತನು ಅರಸನಾದಮೇಲೆ ಯಾರ ಕೂಡ ಯುದ್ಧ ಮಾಡಿದನು? ಮತ್ತು ಅದರ ಪರಿಣಾಮವೇನಾಯಿತು?
೮. ಚಂದ್ರಗುಪ್ತನು ಜನಹಿತದ ಯಾವ ಯಾವ ಕಾರ್ಯಗಳನ್ನು ಮಾಡಿದನು?
೯. ಚಂದ್ರಗುಪ್ತನು ತನ್ನ ವಂಶಕ್ಕೆ ಮೌರ್ಯವಂಶವೆಂದು ಏಕೆ ಕರೆಯಹತ್ತಿದನು?
೧೦. ಚಂದ್ರಗುಪ್ತನ ಸಾಮ್ರಾಜ್ಯದ ಬಗೆಗೆ ಮೆಗ್ಯಾಸ್ಥೆನೀಸನು ಹೇಳಿದ ಮಾತುಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೫. ಅಶೋಕಚಕ್ರವರ್ತಿ

ಮುದ್ದು ಮಕ್ಕಳೆ, ನಮ್ಮ ರಾಷ್ಟ್ರದ ಮುದ್ರೆಯನ್ನೂ ರಾಷ್ಟ್ರಧ್ವಜದಲ್ಲಿ ಇರುವ ಚಕ್ರವನ್ನೂ ನೋಡಿರುವಿರಲ್ಲವೆ? ಅವು ಎಲ್ಲಿಯವು, ಅವುಗಳನ್ನು ಯಾರು ಕೆತ್ತಿಸಿದರು— ಎಂಬುದು ನಿಮಗೆ ಗೊತ್ತೇ? ಇವು ಸಾರನಾಥದಲ್ಲಿರುವ ಅಶೋಕನ ಸ್ತಂಭದ ಮೇಲೆ ಇವೆ. ಸಾರನಾಥವು ಉತ್ತರಭಾರತದಲ್ಲಿದೆ. ಅಲ್ಲಿ ಇರುವ ಆ ಪುರಾತನಸ್ತಂಭವನ್ನು ಅಶೋಕ ಚಕ್ರವರ್ತಿಯು ನಿಲ್ಲಿಸಿದ್ದಾನೆ.

ಅಶೋಕ ಚಕ್ರವರ್ತಿ ರಾಜ್ಯದ ಆಶೆಯಿಂದ ವೈರಿಜನರನ್ನು ಸಂಹಾರ ಮಾಡಿ ರಕ್ತದ ಕಾಲುವೆ ಹರಿಸಿದ್ದನು. ಮುಂದೆ ಪಶ್ಚಾತ್ತಾಪದಿಂದ ದಯಾವಂತನಾಗಿ ಜಗತ್ತಿಗೆಲ್ಲ ಒಳ್ಳೆಯದನ್ನು ಮಾಡಿ ಹೆಸರಾದನು. ಅಂತಹ ದಯಾಳು ಸಮ್ರಾಟನ ಚರಿತ್ರೆ ಗೊತ್ತಿದೆಯೆ ನಿಮಗೆ?

ಮೌರ್ಯವಂಶದ ಚಂದ್ರಗುಪ್ತನ ತರುವಾಯ, ಅವನ ಮಗ ಬಿಂದುಸಾರನು ಅರಸನಾದನು. ಅವನಿಗೆ ಸುಷೀಮ, ಅಶೋಕ, ವೀತಶೋಕ ಎಂದು ಮೂವರು ಮಕ್ಕಳಿದ್ದರು. ಅವರಲ್ಲಿ ಎರಡನೆಯವನಾದ ಅಶೋಕನು ಬಲು ಬುದ್ಧಿವಂತ ಮತ್ತು ಮಹಾಪರಾಕ್ರಮಿ. ಹಿರಿಯವನಾದ ಸುಷೀಮನು ಮಂದಬುದ್ಧಿಯವ ಮತ್ತು ಹೇಡಿ. ಆದುದರಿಂದ ಬಿಂದುಸಾರನು ಅಶೋಕನನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಚಿಕ್ಕವನಿದ್ದಾಗ ಅಶೋಕನಿಗೆ ಅರಸುಮಕ್ಕಳಿಗೆ ಬೇಕಾಗುವ ಎಲ್ಲ ವಿದ್ಯೆ-ಬುದ್ಧಿಗಳನ್ನೂ ಕಲಿಸಿದನು. ರಾಜ್ಯವಾಳುವ ಕೌಶಲ್ಯವನ್ನೂ ತಿಳಿಸಿಕೊಟ್ಟನು.

ಬಿಂದುಸಾರನ ಮರಣಸಮಯದಲ್ಲಿ ಅಶೋಕನು ಉಜ್ಜಯಿನಿಯಲ್ಲಿ ಇದ್ದನು. ಅವನು ತಂದೆಯ ಸಾವಿನ ಸುದ್ದಿಯನ್ನು ಕೇಳಿ ಪಾಟಲೀಪುತ್ರಕ್ಕೆ ಬಂದನು. ರಾಧಾಗುಪ್ತನೆಂಬ ಮಂತ್ರಿಯ ಸಹಾಯದಿಂದ, ಕ್ರಿ. ಶ. ಪೂ.

೨೭೨ರಲ್ಲಿ, ಪಾಟಲೀಪುತ್ರದ ಸಿಂಹಾಸನದ ಮೇಲೆ ಕುಳಿತನು. ಪಟ್ಟಕ್ಕೆ ತಾನು ಹಕ್ಕುದಾರನೆಂದು ಸುಷೀಮನು ಕೆಲವು ಸರದಾರರನ್ನು ಕೂಡಿಕೊಂಡು ಬಂಡೆಬ್ಬಿಸಿದನು. ಆಗ ಅಶೋಕನು ಸುಷೀಮನನ್ನೂ ಎಲ್ಲ ವಿರೋಧಿಗಳನ್ನೂ ನಾಶಮಾಡಿ ಬಂಡನ್ನು ಮುರಿದನು.

ಅಶೋಕನು ಅರಸನಾದ ಮೇಲೆ, ಹೊಸ ಪ್ರದೇಶಗಳನ್ನು ಗೆದ್ದು ತನ್ನ ರಾಜ್ಯವನ್ನು ಬೆಳೆಸಬೇಕೆಂದು ಮನಸ್ಸು ಮಾಡಿದನು. ಉತ್ತರ ಭಾರತವನ್ನೆಲ್ಲ ಅವನ ಅಜ್ಜನಾದ ಚಂದ್ರಗುಪ್ತನು ಗೆದ್ದಿದ್ದನು; ದಕ್ಷಿಣ ಭಾರತವನ್ನು ತಂದೆ



ಅಶೋಕಚಕ್ರವರ್ತಿ

ಯಾದ ಬಿಂದುಸಾರನು ಗೆದ್ದಿದ್ದನು. ಇನ್ನು ಉಳಿದುದೆಂದರೆ ಕಳಿಂಗರಾಜ್ಯವು ಒಂದೇ. ಆದುದರಿಂದ ಅದನ್ನು ಗೆಲ್ಲಬೇಕೆಂದು ಅಶೋಕನು ನಿಶ್ಚಯಿಸಿದನು. ದೊಡ್ಡ ದಂಡಿನೊಡನೆ ಆ ದೇಶದ ಮೇಲೆ ದಾಳಿಮಾಡಿದನು.

ಕಳಿಂಗರಾಜ್ಯವು ಚಿಕ್ಕದು; ಆದರೆ ಅಲ್ಲಿಯ ಜನರು ಬಹಳ ಶೂರರು. ಘನವಂತರು ಹಾಗೂ ವಿದ್ಯಾವಂತರು. ತಮ್ಮ ಸ್ವಾತಂತ್ರ್ಯವನ್ನು ಕಾಯ್ದು ಕೊಳ್ಳಲು ಅವರು ಎಷ್ಟು ಕಷ್ಟಗಳನ್ನಾದರೂ ಸಹಿಸಲು ಸಿದ್ಧರಾಗಿದ್ದರು. ಆದುದರಿಂದ ಅವರು ಹಟದಿಂದಲೂ ಧೈರ್ಯದಿಂದಲೂ ಅಶೋಕನ ಸೈನ್ಯವನ್ನು ಎದುರಿಸಿದರು. ಬಹಳ ಸಾಹಸದಿಂದ ಕಾದಿದರು. ಆ ಮಹಾಯುದ್ಧದಲ್ಲಿ ಎರಡೂ ಕಡೆಗಳಲ್ಲಿಯೂ ಲೆಕ್ಕವಿಲ್ಲದಷ್ಟು ಸೈನಿಕರು ಸತ್ತರು. ರಕ್ತದ ಕಾಲುವೆಗಳು ಹರಿದುವು. ಕೊನೆಗೆ ಅಶೋಕನಿಗೆ ಜಯವಾಯಿತು.

ಜಯದ ಉಬ್ಬಿನಲ್ಲಿ ಅಶೋಕನು ರಣಾಂಗಣದಲ್ಲಿ ತಿರುಗಾಡುತ್ತಿದ್ದನು. ಆಗ ಅಲ್ಲಿ ಬಿದ್ದಿರುವ ಲಕ್ಷಾಂತರ ಹೆಣಗಳನ್ನು ನೋಡಿದನು; ಗಾಯಗೊಂಡು ಬಿದ್ದ ಸೈನಿಕರು ನರಳುವುದನ್ನೂ ಕೇಳಿದನು. ಹರಿಯುತ್ತಿರುವ ರಕ್ತವನ್ನು ಕಂಡನು. ಅದರಿಂದ ಅಶೋಕನ ಮನಸ್ಸಿಗೆ ಬಹಳೇ ನೋವಾಯಿತು. ಅವನು – "ಅಯ್ಯೋ! ನಾನು ಎಂತಹ ಅನ್ಯಾಯ ಮಾಡಿದೆನು! ರಾಜ್ಯದ ಆಶೆಯಿಂದ ಎಷ್ಟು ಜನರನ್ನು ಕೊಂದೆನಲ್ಲ! ಎಷ್ಟು ಮನೆಗಳು ನನ್ನಿಂದ ನೆಲಸಮವಾದುವು! ಎಷ್ಟು ಜನ ಸ್ತ್ರೀಯರು ಹಾಗೂ ಬಾಲಕರು ಅನಾಥರಾದರು! ಇವರೆಲ್ಲರನ್ನು ದುಃಖದಲ್ಲಿ ಮುಳುಗಿಸಿ ನನಗೆ ಸುಖಸಿಗುವುದೇ? ಛೇ, ಛೇ! ನನಗೆ ಈ ಯುದ್ಧ ಬೇಡ, ಯುದ್ಧಮಾಡಬೇಕಾಗುವಂತಹ ರಾಜ್ಯ ಬೇಡ!" ಎಂದು ದುಃಖಿಸಿದನು.



ಅಶೋಕನ ಸ್ತಂಭ

ಅಂದಿನಿಂದ ಅಶೋಕನ ಸ್ವಭಾವವು ಸಂಪೂರ್ಣ ಬದಲಾಯಿತು. 'ಯುದ್ಧದಿಂದ ಸಿಗುವ ಗೆಲವು ಗೆಲವೇ ಅಲ್ಲ. ಪ್ರೀತಿಯಿಂದ ದೊರೆಯುವ ಗೆಲವು ನಿಜವಾದುದು. ಅದರಿಂದಲೇ ಜಗತ್ತಿಗೆ ಹಿತವಾಗುವುದು!' ಎಂಬ ಮಾತನ್ನು ಅವನು ಪೂರ್ತಿಯಾಗಿ ಮನಗಂಡನು. ಕ್ರೂರತನವನ್ನು ಬಿಟ್ಟು ಬಿಟ್ಟನು. 'ನಾನು ಜೀವಿಸಿರುವ ವರೆಗೆ ಇನ್ನೆಂದೂ ಯುದ್ಧಮಾಡುವುದಿಲ್ಲ' ಎಂದು ಪ್ರತಿಜ್ಞೆಯನ್ನು ಮಾಡಿದನು. ಇನ್ನುಮೇಲೆ ತನ್ನ ಕೈಲಾದ ಮಟ್ಟಿಗೆ ಪ್ರಜೆಗಳ ಹಿತಮಾಡಬೇಕೆಂದು ನಿಶ್ಚಯ ಮಾಡಿದನು. ಅದೇ ಸಮಯಕ್ಕೆ ಸರಿಯಾಗಿ ಅವನಿಗೆ ಉಪಗುಪ್ತನೆಂಬ ಬೌದ್ಧ ಸಂನ್ಯಾಸಿಯ ದರ್ಶನವಾಯಿತು. ಅವನು ಅಶೋಕನಿಗೆ ಬೌದ್ಧಧರ್ಮವನ್ನು ಉಪದೇಶಮಾಡಿದನು. 'ಹಿಂಸೆ ಮಾಡಬಾರದು' ಎಂಬ ಬೌದ್ಧಧರ್ಮದ ತತ್ತ್ವವು ಅಶೋಕನ ಮನಸ್ಸನ್ನು ಹಿಡಿದುಬಿಟ್ಟಿತು. ಅವನು ಬೌದ್ಧ ಧರ್ಮವನ್ನು ಸ್ವೀಕರಿಸಿದನು. ಅಂದಿನಿಂದ 'ಪ್ರಿಯದರ್ಶಿ' ಎಂಬ ಹೆಸರನ್ನಿಟ್ಟುಕೊಂಡು ರಾಜ್ಯವಾಳಲು ಪ್ರಾರಂಭಿಸಿದನು.

'ಪ್ರಿಯದರ್ಶಿ' ಎಂದರೆ ಎಲ್ಲರಿಗೂ ಒಳ್ಳೆಯದನ್ನು ಮಾಡುವವ—ಎಂದು ಅರ್ಥ. ಅಶೋಕನು ನಿಜವಾಗಿ ಪ್ರಿಯದರ್ಶಿಯಾದನು. ಅವನು ಮಾಂಸ ತಿನ್ನುವುದನ್ನು ಬಿಟ್ಟುಬಿಟ್ಟನು. ಬೇಟೆ ಆಡುವುದನ್ನು ನಿಲ್ಲಿಸಿದನು. ತನ್ನ ಸಾಮ್ರಾಜ್ಯದಲ್ಲೆಲ್ಲ ಯಾರೂ ಪ್ರಾಣಿಗಳನ್ನು ಕೊಲ್ಲಬಾರದೆಂದು ಕಟ್ಟಪ್ಪಣೆ

ಮಾಡಿದನು. ಕಾಡುಗಳಿಗೆ ಬೆಂಕಿ ಇಡುವುದು ಅಪರಾಧವೆಂದು ಸಾರಿದನು. ಜನರಿಗೂ ಪಶುಗಳಿಗೂ ಉಪಯೋಗವಾಗಲೆಂದು ಅಲ್ಲಲ್ಲಿ ಔಷಧಾಲಯಗಳನ್ನು ಪ್ರಾರಂಭಿಸಿದನು. ಔಷಧಕ್ಕೆ ಉಪಯೋಗವಾಗುವ ಬೇರೆ ಬೇರೆ ವನಸ್ಪತಿಗಳನ್ನು ಅಲ್ಲಲ್ಲಿಯ ಗುಡ್ಡ-ಬೆಟ್ಟಗಳಲ್ಲಿ ಹಚ್ಚಿಸಿದನು. ಕೆರೆ-ಬಾವಿಗಳನ್ನು ತೆಗೆಸಿದನು. ಅರವಟ್ಟಿಗೆ-ಅನ್ನಛತ್ರಗಳನ್ನು ಇಡಿಸಿದನು. ಜನರಿಗೆ ವಿದ್ಯೆ-ಬುದ್ಧಿಗಳು ದೊರೆಯಬೇಕೆಂದು ಅಲ್ಲಲ್ಲಿ ಪಾಠಶಾಲೆಗಳನ್ನು ಪ್ರಾರಂಭಿಸಿದನು. ಆತನ ಕಾಲದಲ್ಲಿ ನಲಂದ, ತಕ್ಷಶಿಲೆ ಮತ್ತು ಉಜ್ಜಯನಿ ವಿಶ್ವವಿದ್ಯಾಲಯಗಳು ಬಹಳ ಪ್ರಸಿದ್ಧಿಯನ್ನು ಪಡೆದಿದ್ದುವು. ಅವುಗಳ ವೆಚ್ಚಕ್ಕಾಗಿ ಅಶೋಕನು ಹೇರಳ ಹಣವನ್ನು ಕೊಡುತ್ತಿದ್ದನು.

ಅಶೋಕನ ಆಡಳಿತದ ಕಾಲದಲ್ಲಿ ಮುಂದೆ ಎಂದೂ ಯುದ್ಧಗಳಾಗಲಿಲ್ಲ. ಜನರು ವ್ಯಾಪಾರ-ಒಕ್ಕಲುಗಳನ್ನು ಮಾಡಿಕೊಂಡು ಸುಖವಾಗಿದ್ದರು. ಎಲ್ಲ ಕಡೆಗೂ ಕಲೆ-ಕೈಗಾರಿಕೆಗಳು ತಲೆಯೆತ್ತಿ ನಿಂತವು. ಸ್ವತಃ ಅಶೋಕನು "ತಾಯಿ-ತಂದೆಗಳಲ್ಲಿ ಭಕ್ತಿಯಿಡಬೇಕು, ಸತ್ಯಮಾತಾಡಬೇಕು, ಭೂತದಯೆ ಇರಬೇಕು" ಎಂದು ಮುಂತಾದ ಎಷ್ಟೋ ನೀತಿಯ ಮಾತುಗಳನ್ನು ಕಲ್ಲುಗಳ ಮೇಲೆ ಕೆತ್ತಿಸಿ, ರಾಜ್ಯದ ಎಲ್ಲ ಕಡೆಯಲ್ಲಿಯೂ ನಿಲ್ಲಿಸಿದ್ದಾನೆ. ಅವು ಭಾರತದ ಅನೇಕ ಭಾಗಗಳಲ್ಲಿ ಈಗಲೂ ನೋಡಲು ಸಿಗುತ್ತವೆ. ಅವೆಲ್ಲ ಅಶೋಕನ ಸ್ತಂಭಗಳೆಂದು ಪ್ರಸಿದ್ಧಿಯನ್ನು ಪಡೆದಿರುತ್ತವೆ.

ಬೌದ್ಧಧರ್ಮವನ್ನು ಪ್ರಚಾರಮಾಡಲು ಅಶೋಕನು ತನ್ನ ಆಯುಷ್ಯದ ಬಹುಭಾಗವನ್ನು ಕಳೆದನು. ಮೇಲಿಂದ ಮೇಲೆ ಅಲ್ಲಲ್ಲಿ ಧರ್ಮಸಭೆಗಳನ್ನು ಕೂಡಿಸುತ್ತಿದ್ದನು. ಅಲ್ಲಿ ಧರ್ಮದ ವಿಷಯದಲ್ಲಿ ಚರ್ಚೆ ನಡೆಯುವಂತೆ ಏರ್ಪಡಿಸುತ್ತಿದ್ದನು. ಧರ್ಮಪ್ರಚಾರಕ್ಕಾಗಿ ಸಾವಿರಾರು ಭಿಕ್ಷುಗಳನ್ನು ಗ್ರೀಸ್, ಇಜಿಪ್ತ, ಸಿಲೋನ್, ಬ್ರಹ್ಮದೇಶ ಮತ್ತು ಚೀನ ದೇಶಗಳಿಗೆ ಕಳುಹಿದ್ದನು. ಇವನ ಮಗನಾದ ಕುನಾಲನೂ ತಂಗಿಯಾದ ಸಂಘಮಿತ್ರೆಯೂ ಧರ್ಮಪ್ರಸಾರಕ್ಕಾಗಿ ಪರದೇಶಗಳಿಗೆ ಹೋಗಿದ್ದರು. ಅಶೋಕನು ಬಹಳ ಹಣವನ್ನು ವೆಚ್ಚಮಾಡಿ ಬೇರೆ ಬೇರೆ ಸ್ತೂಪ-ಚೈತ್ಯಾಲಯ-ವಿಹಾರಗಳನ್ನು ಕಟ್ಟಿಸಿದನು; ಅನೇಕ ಶಿಲಾಲೇಖಗಳನ್ನು ಬರೆಸಿದನು. ಅಶೋಕನ ಕಾಲಕ್ಕೆ ಮಗಧರಾಜ್ಯವು ವೈಭವದ ಶಿಖರಕ್ಕೆ ಮುಟ್ಟಿತ್ತು. ಇವನಂತಹ ಘನವಂತನೂ, ದಯಾಳುವೂ ಆದ ಅರಸನು ಎಂದೂ ಆಗಿಲ್ಲವೆಂದು ಹೇಳುತ್ತಾರೆ.

## ಅಭ್ಯಾಸನಗಳು

೧. ನಮ್ಮ ರಾಷ್ಟ್ರಧ್ವಜದಲ್ಲಿಯ ಚಕ್ರವು ಎಲ್ಲಿಯದು? ಅದನ್ನು ಯಾರು ಕೆತ್ತಿಸಿದರು?
೨. ಅಶೋಕನ ತಂದೆ ಯಾರು? ಅವನು ಅಶೋಕನನ್ನು ಏಕೆ ಪ್ರೀತಿಸುತ್ತಿದ್ದನು?
೩. ಅಶೋಕನು ಅರಸನಾದ ಮೇಲೆ, ಯಾವ ದೇಶದ ಮೇಲೆ ದಾಳಿಮಾಡಿದನು?
೪. ಅಶೋಕನು ತಾನು ಜೀವದಿಂದ ಇರುವವರೆಗೆ ಇನ್ನೆಂದೂ ಯುದ್ಧಮಾಡುವದಿಲ್ಲವೆಂದು ಏಕೆ ಪ್ರತಿಜ್ಞೆಮಾಡಿದನು?
೫. ಇವನು ಯಾವ ಧರ್ಮವನ್ನು ಸ್ವೀಕರಿಸಿದನು?
೬. ಅಶೋಕನು ಯಾವ ಪ್ರಜಾಹಿತದ ಕಾರ್ಯಗಳನ್ನು ಮಾಡಿದನು?
೭ ಅಶೋಕನು ಕಲ್ಲಿನ ಮೇಲೆ ಕೆತ್ತಿಸಿದ ನೀತಿಯ ಮಾತುಗಳು ಯಾವುವು?
೮. ಅಶೋಕನು ಬೌದ್ಧಧರ್ಮದ ಪ್ರಸಾರಕ್ಕಾಗಿ ಮಾಡಿದ ಮಹತ್ತ್ವದ ಕಾರ್ಯಗಳಾವುವು?

# ೬. ಯೇಸುಕ್ರಿಸ್ತ

ಭೂಮಧ್ಯಸಮುದ್ರದ ಪೂರ್ವದಂಡೆಯ ಮೇಲೆ ಪಾಲಿಸ್ಟೈನ್ ಎಂಬ ದೇಶವಿದೆ. ನಝರೇತ್ ಎಂಬುದು ಅಲ್ಲಿಯದೊಂದು ಚಿಕ್ಕಪಟ್ಟಣ. ಅಲ್ಲಿ ಒಬ್ಬ ಬಡವನಾದ ಬಡಗಿ ಇದ್ದನು. ಆತನ ಹೆಸರು ಜೋಸೆಫ್. ಅವನಿಗೆ ಮೇರಿ ಎಂಬ ಹೆಂಡತಿ ಇದ್ದಳು. ಅವರಿಬ್ಬರೂ ದುಡಿದು ಪಡೆದುದರಲ್ಲಿಯೆ ಸುಖವಾಗಿ ಸಂಸಾರ ಸಾಗಿಸಿಕೊಂಡು ಇದ್ದರು. ಒಂದು ದಿನ ಮೇರಿಯ ಕನಸಿನಲ್ಲಿ ಒಬ್ಬ ದೇವದೂತನು ಬಂದು—"ದೇವರ ಕುಮಾರನು ನಿನ್ನ ಹೊಟ್ಟೆಯಿಂದ ಜನಿಸುವನು. ಅವನಿಂದ ಜಗದ ರಕ್ಷಣೆಯಾಗುವುದು. ಅವನಿಗೆ ಯೇಸು (ರಕ್ಷಕ) ಎಂದು ಹೆಸರಿಡಬೇಕು" ಎಂದು ಹೇಳಿದಂತಾಯಿತು. ಕನಸಿನ ಮಾತುಗಳು ನನಸಾಗಿ, ಮೇರಿಯು ಗರ್ಭವತಿಯಾದಳು.

ಪಾಲಿಸ್ಟೈನ್ ಪ್ರದೇಶವು ಆಗಸ್ಟಸ್ ಸೀಝರ್ ಎಂಬ ಸಾರ್ವಭೌಮರಾಜನ ಆಡಳಿತಕ್ಕೆ ಒಳಪಟ್ಟಿತ್ತು. ಅವನು ತನ್ನ ಸಾಮ್ರಾಜ್ಯದಲ್ಲೆಲ್ಲ ಜನಗಣನೆ ಮಾಡಲು ಆಜ್ಞೆವಿಧಿಸಿದನು. 'ಜನರು ಎಲ್ಲಿದ್ದರೂ ತಮ್ಮ ಮೂಲಮನೆತನದ ಊರುಗಳಿಗೇ ಹೋಗಿ ಲೆಕ್ಕವನ್ನು ಬರೆಸಬೇಕು!' ಎಂದು ಅವನ ಕಟ್ಟಳೆಯಿತ್ತು. ಕಾರಣ ಜೋಸೆಫನು ಗರ್ಭಿಣಿಯಾದ ತನ್ನ ಹೆಂಡತಿಯೊಡನೆ, ತನ್ನ ಮನೆತನದ ಊರಾದ ಬೆತ್ಲೆಹೇಮಿಗೆ ಹೋದನು. ಇವರು ಹೋಗುವುದರೊಳಗಾಗಿ, ಬೇರೆಬೇರೆ ಕಡೆಯಿಂದ ಜನರು ಬಂದು ಅಲ್ಲಿಯ ಛತ್ರಗಳೂ, ದೇವ

ಸ್ಥಾನಗಳೂ ತುಂಬಿಹೋಗಿದ್ದುವು. ಬೇರೆ ಎಡೆಯಿಲ್ಲದೆ ಇವರು, ಒಂದು ದನದ ಕೊಟ್ಟಿಗೆಯಲ್ಲಿ ಉಳಿದುಕೊಂಡರು. ಆಗ ಮೇರಿಯು ದಿನತುಂಬಿದ ಗರ್ಭಿಣಿ. ಆ ಕೊಟ್ಟಿಗೆಯಲ್ಲಿರುವಾಗಲೇ ಅವಳು ಗಂಡುಕೂಸನ್ನು ಹಡೆದಳು. ಪಾಪ! ಹಸುಮಗುವಿಗೆ ಹೊದಿಸಲು ಹೆಚ್ಚಾಗಿ ಬಟ್ಟೆ-ಬರೆ ಕೂಡ ಇರಲಿಲ್ಲ. ಮಲಗಿಸಲು ತೊಟ್ಟಿಲಿರಲಿಲ್ಲ. ಮೇರಿಯು ತನ್ನಲ್ಲಿದ್ದ ಅಲ್ಪಸ್ವಲ್ಪ ಬಟ್ಟೆಯನ್ನೇ ಬೆಚ್ಚಗೆ ಹೊದಿಸಿ ಹುಲ್ಲಿನ ಮೇಲೆ ಕೂಸನ್ನು ಮಲಗಿಸಿದಳು. ಹುಟ್ಟಿದ ಮಗುವಿಗೆ 'ಯೇಸು' ಎಂದು ಹೆಸರಿಟ್ಟರು.



ಯೇಸುಕ್ರಿಸ್ತ

ಯೇಸು ಹುಟ್ಟಿದ ರಾತ್ರಿ, ಬೆತ್ಲೆಹೇಮ್ ನಗರದ ಸಮೀಪದ ಗುಡ್ಡಗಾಡಿನಲ್ಲಿ ಕುರಿಕಾಯುತ್ತಿದ್ದ ಕುರುಬರಿಗೆ, ಆಕಾಶದಲ್ಲಿ ಒಂದು ಪ್ರಕಾಶಮಾನವಾದ ಬೆಳಕು ಕಂಡಿತಂತೆ. ಆಗಲೇ ದೇವದೂತನೊಬ್ಬನು ಬಂದು "ಎಲ್ಲರನ್ನೂ ರಕ್ಷಿಸುವ ಯೇಸು–ಯೆಹೂದ್ಯರ ಅರಸು—ಬೆತ್ಲೆಹೇಮಿನಲ್ಲಿ, ಒಂದು ದನಗಳ ಕೊಟ್ಟಿಗೆಯಲ್ಲಿ ಹುಟ್ಟಿದ್ದಾನೆ" ಎಂದು ಹೇಳಿ ಮಾಯವಾದನಂತೆ.

ಆಗ ಕುರುಬರು ಮಗುವನ್ನು ಹುಡುಕಿಕೊಂಡು ಬೆತ್ಲೆಹೇಮಿಗೆ ಬಂದರು. ಮಗುವನ್ನು ಕಂಡು ಅವರಿಗೆ ಆನಂದವಾಯಿತು. ಅವರು ಆ ದೇವಕುಮಾರನಿಗೆ ನಮಸ್ಕಾರಮಾಡಿ ತಿರುಗಿಹೋದರು; ಜನರಲ್ಲಿ ಆ ಸುದ್ದಿಯನ್ನು ಹರಡಿದರು.

ಕೆಲವು ದಿನಗಳು ಕಳೆದುವು. ಮನೆತನದ ನಿಯಮದ ಪ್ರಕಾರ, ಗಂಡ-ಹೆಂಡತಿ ಇಬ್ಬರೂ, ಜೆರುಸಲೇಮಿನಲ್ಲಿ ಇರುವ ದೇವಾಲಯಕ್ಕೆ ಮಗುವನ್ನು ತೆಗೆದುಕೊಂಡು ಹೋದರು. ಅಲ್ಲಿಯ ಪಂಡಿತರೂ ಧರ್ಮಗುರುಗಳೂ ಮಗುವನ್ನು ಕಂಡರು! ತಮ್ಮನ್ನು ಉದ್ಧರಿಸುವ ಮಹಾತ್ಮನು ಹುಟ್ಟಿಬಂದಿದ್ದಾನೆಂದು ಅವರು ಮಗುವನ್ನು ಮುದ್ದಿಸಿ ನಮಸ್ಕರಿಸಿದರು. ಬಳಿಕ ಆ ದಂಪತಿಗಳು ಪುಟ್ಟ ಯೇಸುವಿನೊಡನೆ ಬೆತ್ಲೆಹೇಮಿಗೆ ಮರಳಿದರು.

ಆಗ ಜೆರುಸಲೇಮಿನಲ್ಲಿ ಹೆರೋದನೆಂಬ ಅರಸನು ಆಳುತ್ತಿದ್ದನು. ಯೇಸುವು ಹುಟ್ಟಿದ ಸಮಾಚಾರ ಅವನ ಕಿವಿಗೆ ಮುಟ್ಟಿತು. ಅದನ್ನು ಕೇಳಿ ಅವನಿಗೆ ಭಯವಾಯಿತು. ಎಲ್ಲಿ ತನ್ನ ಅರಸೊತ್ತಿಗೆಯು ಹೋಗುವುದೋ ಎಂದು ಅವನು ಕಳವಳಗೊಂಡನು. ಆಗ ಅವನು ಬೆತ್ಲೆಹೇಮಿನಲ್ಲಿ ಮತ್ತು ಅದರ ಸುತ್ತುಮುತ್ತಲಿನ ಊರುಗಳಲ್ಲಿ ಇರುವ—ಎರಡು ವರುಷಕ್ಕಿಂತ ಕಡಿಮೆ ವಯಸ್ಸಿನ—ಗಂಡುಮಕ್ಕಳನ್ನೆಲ್ಲ ಕೊಲ್ಲುವಂತೆ ತನ್ನ ಸೇವಕರಿಗೆ ಅಪ್ಪಣೆ ಮಾಡಿದನು. ಆದರೆ ಜೋಸೆಫನು ಅವರ ಕಣ್ಣುತಪ್ಪಿಸಿ, ಹೆಂಡತಿ ಹಾಗು ಮಗುವಿನೊಡನೆ ಇಜಿಪ್ತಿಗೆ ಓಡಿಹೋದನು. ಮುಂದೆ ಕೆಲವು ದಿವಸಗಳಲ್ಲಿ ಹೆರೋದನು ಮರಣಹೊಂದಲು, ಜೋಸೆಫನು ಹೆಂಡತಿ-ಮಗನೊಡನೆ ಮತ್ತೆ ನಝರೇತಿಗೆ ಬಂದನು.

ಯೇಸುವು ಬೆಳೆದು ದೊಡ್ಡವನಾದನು; ತಂದೆಯ ಬಳಿಯಲ್ಲಿಯೆ ವಿದ್ಯೆ-ಬುದ್ಧಿಗಳನ್ನು ಕಲಿತನು. ತಂದೆಯ ಉದ್ಯೋಗವಾದ ಬಡಿಗತನವನ್ನೂ ಕಲಿತುಕೊಂಡನು. ಪ್ರತಿವರುಷ 'ಪಸ್ಕ' ಹಬ್ಬಕ್ಕೆ ಬೆತ್ಲೆಹೇಮಿನಿಂದ, ಜೋಸೆಫ್ ಮತ್ತು ಮೇರಿ ಇವರು ಯೇಸುವಿನೊಡನೆ ಜೆರುಸಲೇಮಿಗೆ ಬರುತ್ತಿದ್ದರು. ಅಲ್ಲಿ ಪಂಡಿತರು ದೇವಾಲಯದಲ್ಲಿ ಕುಳಿತು ಧರ್ಮದ ಚರ್ಚೆಯನ್ನು ಮಾಡುತ್ತಿದ್ದರು. ಬಾಲಕನಾದ ಯೇಸುವು ಅವರ ಮಧ್ಯದಲ್ಲಿ ಕುಳಿತು ಶಾಂತಚಿತ್ತದಿಂದ ಅದನ್ನು ಆಲಿಸುತ್ತಿದ್ದನು. ನಡುನಡುವೆ ಅವರಿಗೆ ಪ್ರಶ್ನೆಗಳನ್ನೂ ಕೇಳುತ್ತಿದ್ದನು. ಬಾಲಕನ ಚುರುಕುಬುದ್ಧಿಯನ್ನು ಕಂಡು ಪಂಡಿತರಿಗೆ ಆಶ್ಚರ್ಯವೆನಿಸುತ್ತಿತ್ತು.

ಮುಂದೆ ಕೆಲವು ವರುಷಗಳಲ್ಲಿ ಜೋಸೆಫನು ತೀರಿಕೊಂಡನು. ಮನೆತನದ ಭಾರವೆಲ್ಲ ಯೇಸುವಿನ ಮೇಲೆಯೇ ಬಿದ್ದಿತು. ಬಡಗಿತನವನ್ನು ಮಾಡಿ

ಅವನು ಮನೆತನವನ್ನು ನಡೆಸಹತ್ತಿದ್ದನು. ಜನರು ಕಷ್ಟದಲ್ಲಿ ಇರುವುದನ್ನು ಕಂಡರೆ ಯೇಸುವಿನ ಮನಸ್ಸು ಕರಗಿಹೋಗುವುದು. ಅವರಿಗೆ ಬೇಕಾದ ನೆರವನ್ನೂ ಅವನು ಕೊಡುವನು. ಯೇಸುವಿನ ನಡತೆಯನ್ನು ಕಂಡು ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು.

ಬರುಬರುತ್ತ ಯೇಸುವಿಗೆ ಯೋಹಾನನೆಂಬವನ ಗೆಳೆತನವಾಯಿತು. ಅವನಿಂದಲೇ ಯೇಸುವು ಧರ್ಮದ ದೀಕ್ಷೆಯನ್ನು ಪಡೆದನು. ಮುಂದೆ ನಾಲ್ವತ್ತು ದಿನಗಳವರೆಗೆ ನಿರಾಹಾರದಿಂದಿದ್ದು, ಕಾಡಿನಲ್ಲಿ ತಪಸ್ಸನ್ನು ಮಾಡಿದನು. ಬಳಿಕ ಅವನು ಜನರಿಗೆ ತನ್ನ ಧರ್ಮದ ದಾರಿಯನ್ನು ಬೋಧಿಸತೊಡಗಿದನು. ಸೈತಾನನೆಂಬ ದುಷ್ಟನು ಅವನ ಏಳಿಗೆಯನ್ನು ಸೈರಿಸದೆ, ಅವನನ್ನು ಕೊಲ್ಲಲು ಬಗೆಬಗೆಯ ಹಂಚಿಕೆಗಳನ್ನು ಮಾಡಿದನು. ಆದರೆ ಅದು ಸಾಧ್ಯವಾಗಲಿಲ್ಲ.

ಮುಂದೆ ಹಾಗೆಯೆ ಧರ್ಮವನ್ನು ಉಪದೇಶಿಸುತ್ತ, ಯೇಸುವು ಅತ್ತಿತ್ತ ತಿರುಗಾಡಹತ್ತಿದನು. ಅವನಿಗೆ ಹನ್ನೆರಡು ಜನ ನಂಬಿಗೆಯ ಶಿಷ್ಯರು ಸಿಕ್ಕರು. ಅವರೊಡನೆ ಅವನು ಜೆರೂಸಲೇಮಿಗೆ ಬಂದನು. ಅಲ್ಲಿ ಕೂಡಿದ್ದ ಯೆಹೂದ್ಯರಿಗೆ, ಅವರ ಶಾಸ್ತ್ರಿಗಳೂ ಧರ್ಮದ ಮುಖಂಡರೂ ಮಾಡುವ ಅನ್ಯಾಯ-ಮೋಸಗಳನ್ನು ತಿಳಿಸಿದನು. ಇದರಿಂದ ಅವರು ಯೇಸುವಿನ ಮೇಲೆ ಸಿಟ್ಟಾದರು. ಹೇಗಾದರೂ ಮಾಡಿ ಅವನನ್ನು ಕೊಲ್ಲಬೇಕೆಂದು ಹಂಚಿಕೆ ಹಾಕಿದರು. ರಾತ್ರಿಸಮಯದಲ್ಲಿ, ಯೇಸುವು ಶಿಷ್ಯರೊಡನೆ ದೇವರ ಪ್ರಾರ್ಥನೆಮಾಡುವಾಗ ಅವನನ್ನು ಹಿಡಿಸಿದರು. ಪರಿಪರಿಯಿಂದ ಅವನಿಗೆ ತೊಂದರೆಕೊಟ್ಟರು. ಪಿಲಾತನೆಂಬ ನ್ಯಾಯಾಧೀಶನ ಬಳಿಗೆ ಒಯ್ದು ಅವನ ಅಪರಾಧದ ವಿಚಾರಣೆ ನಡೆಯುವಂತೆ ಮಾಡಿದರು. ಯೇಸುವು ನಿರ್ದೋಷಿಯಾಗಿದ್ದರೂ, ಅವನ ವೈರಿಗಳಿಗೆ ಬೆದರಿ ಪಿಲಾತನು, ಯೇಸುವಿಗೆ ಮರಣದಂಡನೆಯ ಶಿಕ್ಷೆಯನ್ನು ವಿಧಿಸಿದನು.

ಶಿಲುಬೆಗೆ ಏರಿಸಲು ಯೇಸುವನ್ನು ತಕ್ಕೊಂಡು ಹೋದರು. ಆಗ ಮುಳ್ಳಿನ ಕಿರೀಟವನ್ನು ಅವನ ತಲೆಯಮೇಲಿರಿಸಿ ನೆತ್ತಿಯ ಮೇಲೆ ಜಡಿದರು. ವಿರೋಧಿಗಳಾದ ಜನರು ಯೇಸುವನ್ನು ಒದೆದರು; ಅವನ ಮುಖದ ಮೇಲೆ ಉಗುಳಿದರು. ಕೊನೆಗೆ ಶಿಲುಬೆಯ ಮೇಲೆ ಏರಿಸಿ ಕೈಕಾಲುಗಳಲ್ಲಿ ಮೊಳೆಗಳನ್ನು ಜಡಿದರು. ಆದರೂ ಯೇಸು ಶಾಂತಚಿತ್ತದಿಂದ ದೇವರನ್ನು ಧ್ಯಾನಿಸುತ್ತಿದ್ದನು. 'ತಂದೆಯೇ! ತಿಳಿಯದೆ ಮಾಡಿದ ಇವರ ತಪ್ಪುಗಳನ್ನು ಕ್ಷಮಿಸು!' ಎಂದು ದೇವರನ್ನು ಬೇಡಿಕೊಂಡು ಪ್ರಾಣಬಿಟ್ಟನು. ಯೇಸುವಿನ ಕೆಲವು ಶಿಷ್ಯರೂ ಪ್ರಾಣಕ್ಕೆ ಎರವಾಗಬೇಕಾಯಿತು.

ಯೇಸುವಿನ ದೇಹವನ್ನು ಅವನ ಶಿಷ್ಯನೊಬ್ಬನು ಒಯ್ದು ತನ್ನ ತೋಟದಲ್ಲಿ ಹೂಳಿದನು. ಆಮೇಲೆ ಮೂರು ದಿವಸಕ್ಕೆ ಭೂಕಂಪವಾಯಿತಂತೆ. ಯೇಸುವಿನ ಹೆಣವು ಗೋರಿಯಿಂದ ಮಾಯವಾಯಿತಂತೆ. ಯೇಸುವು ಮತ್ತೆ ಜೀವಂತನಾಗಿ ನಾಲ್ವತ್ತು ದಿನಗಳವರೆಗೆ ತನ್ನ ಮತವನ್ನು ಕುರಿತು ಬೋಧಿಸಿದನೆಂದೂ, ಕೊನೆಯ ದಿನ ಗುಡ್ಡದ ಮೇಲೆ ನಿಂತು ಬೋಧಿಸುತ್ತಿದ್ದ ಹಾಗೆಯೆ ಅವನು ದೇವಲೋಕಕ್ಕೆ ಏರಿಹೋದನೆಂದೂ ಕ್ರೈಸ್ತರು ನಂಬುತ್ತಾರೆ.

ಯೇಸುವಿಗೆ ಕ್ರಿಸ್ತನೆಂಬ ಹೆಸರು ಅವನು ಸತ್ತಮೇಲೆ ಬಂದಿತು. ಕ್ರಿಸ್ತ ಎಂಬುದು ಗ್ರೀಕ್ ಭಾಷೆಯ ಪದವು; ಅದರ ಅರ್ಥ 'ಜಗದುದ್ಧಾರಕ' ಎಂದು. ಮೊದಲು ಯೇಸುವೆಂದು ಇದ್ದ ಹೆಸರು ಮುಂದೆ 'ಯೇಸೂಕ್ರಿಸ್ತ' ಎಂದಾಯಿತು. ಯೇಸೂಕ್ರಿಸ್ತನು ಹೊಸದೊಂದು ಧರ್ಮವನ್ನೇ ಸ್ಥಾಪಿಸಿದನು. ಅದರ ಹೆಸರು ಕ್ರೈಸ್ತಧರ್ಮ. ಆ ಧರ್ಮದ ಗ್ರಂಥವು 'ಬೈಬಲ್'. ಅದರಲ್ಲಿ ಯೇಸುವಿನ ಧರ್ಮಬೋಧನೆಯ ವಚನಗಳು ಇರುವುವು.

## ಅಭ್ಯಸನಗಳು

೧. ಯೇಸುವಿನ ತಾಯಿ-ತಂದೆಗಳು ಎಲ್ಲಿ ಇರುತ್ತಿದ್ದರು?
೨. ಬೆತ್ಲೆಹೇಮಿಗೆ ಅವರು ಏತಕ್ಕೆ ಬಂದಿದ್ದರು?
೩. ಯೇಸುವಿನ ಜನ್ಮವು ಎಲ್ಲಿ ಆಯಿತು?
೪. ಹೆರೋದನಿಗೆ ಯೇಸುವಿನ ಜನ್ಮದ ಸುದ್ದಿ ಯಾರಿಂದ ತಿಳಿಯಿತು?
೫. ಜೋಸೆಫನು ಇಜಿಪ್ತಿಗೆ ಹೆಂಡತಿ-ಮಗನೊಡನೆ ಏಕೆ ಓಡಿಹೋದನು?
೬. ಜೆರೂಸಲೇಮಿಗೆ ಜನರು ಏಕೆ ಬರುತ್ತಿದ್ದರು?
೭. ಯೇಸುವನ್ನು ಕೊಲ್ಲಲು ಹವಣಿಸಿದವರು ಯಾರು ಯಾರು?
೮. ಯೇಸುವಿನ ಕೊನೆ ಹೇಗಾಯಿತು?
೯. ಯೇಸು ಸ್ಥಾಪಿಸಿದ ಧರ್ಮ ಯಾವುದು?
೧೦. ಕ್ರೈಸ್ತಧರ್ಮದ ಪವಿತ್ರಗ್ರಂಥವು ಯಾವುದು?

# ೭. ಸಮ್ರಾಟ್ ಸಮುದ್ರಗುಪ್ತ

ಸುಮಾರು ೧೬೦೦ ವರುಷಗಳ ಹಿಂದೆ ಉತ್ತರ ಭಾರತದಲ್ಲಿ ಚಂದ್ರಗುಪ್ತ ನೆಂಬ ಅರಸನು ರಾಜ್ಯವಾಳುತ್ತಿದ್ದನು. ಅವನ ರಾಜಧಾನಿ 'ಪಾಟಲಿಪುತ್ರ' ಎಂಬ ನಗರ. ಚಂದ್ರಗುಪ್ತನಿಗೆ ಕುಮಾರದೇವಿಯೆಂಬ ಹೆಂಡತಿ ಇದ್ದಳು. ಈ ದಂಪತಿಗಳಿಗೆ ನಾಲ್ಕುಜನ ಗಂಡುಮಕ್ಕಳಿದ್ದರು. ಅವರಲ್ಲಿ ಸಮುದ್ರಗುಪ್ತನೇ ಎಲ್ಲ ರೀತಿಯಿಂದಲೂ ಪಟ್ಟಕ್ಕೆ ಯೋಗ್ಯನಾಗಿದ್ದನು. ಆದುದರಿಂದ ಚಂದ್ರ-ಗುಪ್ತನ ಮರಣದ ತರುವಾಯ ಸಮುದ್ರಗುಪ್ತನೇ ಅರಸನಾದನು.




ಸಮ್ರಾಟ್ ಸಮುದ್ರಗುಪ್ತ

ಚಿಕ್ಕವನಿದ್ದಾಗಲೇ ಸಮುದ್ರಗುಪ್ತನು ತನ್ನ ಚುರುಕುಬುದ್ಧಿಯನ್ನೂ ವೀರತನವನ್ನೂ ತೋರ್ಪಡಿಸಿದ್ದನು. ಅರಸುಮಕ್ಕಳಿಗೆ ಬೇಕಾಗುವ ಎಲ್ಲ ವಿದ್ಯೆ-ಬುದ್ಧಿಗಳನ್ನೂ ಕಲಿತು ಅವನು ಜಾಣನಾದನು. ಸಮುದ್ರಗುಪ್ತನು ಮಹಾಧೈರ್ಯಶಾಲಿಯೂ ಆಗಿದ್ದನು. ಬುದ್ಧಿ ಹಾಗು ಸಾಹಸಗಳು ಕೂಡಿದ

ಮೇಲೆ ಕೇಳುವುದೇನು? 'ಸಮುದ್ರಗುಪ್ತನು ಮುಂದೆ ದೊಡ್ಡ ಸಾರ್ವಭೌಮ ನಾಗುವುದರಲ್ಲಿ ಸಂದೇಹವಿಲ್ಲ' ಎಂದು ಎಲ್ಲ ಜನರೂ ನುಡಿಯುತ್ತಿದ್ದರು. ಅದರಂತೆ ಅವನು, ಅಶೋಕನ ತರುವಾಯ ಭಾರತದಲ್ಲಿಯೇ ದೊಡ್ಡ ಸಾರ್ವ-ಭೌಮನಾಗಿ ಹೋದನು.

ಸಮುದ್ರಗುಪ್ತನು ಕ್ರಿ. ಶ. ೩೩೦ರಲ್ಲಿ ಪಟ್ಟಕ್ಕೆ ಬಂದನು. ಆಗ ಅವನ ರಾಜ್ಯ ಚಿಕ್ಕದಾಗಿತ್ತು. ಕೆಲವೇ ದಿನಗಳಲ್ಲಿ ಅವನು ತನ್ನ ರಾಜ್ಯವನ್ನು ಬೆಳೆಸಲು ಪ್ರಾರಂಭಿಸಿದನು. ದೊಡ್ಡ ಸೈನ್ಯವನ್ನು ಕಟ್ಟಿಕೊಂಡು ಭಾರತದ ನಾಲ್ಕೂದಿಕ್ಕಿಗೆ ಹೋದನು. ಅಲ್ಲಲ್ಲಿಯ ಅರಸರನ್ನು ಗೆದ್ದನು. ಕೆಲವು ಜನ ಅರಸರ ರಾಜ್ಯಗಳನ್ನು ಕಸಿದುಕೊಂಡು ತನ್ನ ರಾಜ್ಯಕ್ಕೆ ಕೂಡಿಸಿ ಕೊಂಡನು. ಇನ್ನು ಕೆಲವು ಅರಸರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿ ಕೊಂಡನು.

ಆಗ ದಕ್ಷಿಣಭಾರತದಲ್ಲಿ ಪಲ್ಲವವಂಶದ ದೊರೆಯಾದ ವಿಷ್ಣುಗೋಪನು ಕಂಚಿಯಲ್ಲಿ ಆಳುತ್ತಿದ್ದನು. ಅವನು ಸಮುದ್ರಗುಪ್ತನ ಶೌರ್ಯವನ್ನು ಕಂಡು ಅವನ ಮಾಂಡಲಿಕನಾಗಿ ಇರಲು ಒಪ್ಪಿಕೊಂಡನು; ಅವನಿಗೆ ಕಪ್ಪ-ಕಾಣಿಕೆ ಗಳನ್ನೂ ಕೊಟ್ಟನು. ಹೀಗೆ ಸಮುದ್ರಗುಪ್ತನ ಸಾಮ್ರಾಜ್ಯವು ಉತ್ತರದಲ್ಲಿ ನೇಪಾಳದಿಂದ ದಕ್ಷಿಣದಲ್ಲಿ ಕಂಚಿಯವರೆಗೂ ಹಬ್ಬಿತು.

ಬಳಿಕ ಸಮುದ್ರಗುಪ್ತನು ಸಾರ್ವಭೌಮನೆನಿಸಿಕೊಳ್ಳಬೇಕೆಂದು ಅಶ್ವ-ಮೇಧಯಾಗವನ್ನು ಆರಂಭಿಸಿದನು. ಯಾಗದ ಕುದುರೆಯ ಹಿಂದಿನಿಂದ ವಿಪುಲ ಸೈನ್ಯದೊಡನೆ ತಾನೇ ಹೊರಟನು. ಆ ಕುದುರೆಯನ್ನು ತಡೆಯುವ ಶಕ್ತಿ ಯಾರಲ್ಲಿಯೂ ಇರಲಿಲ್ಲ. ದಿಗ್ವಿಜಯದಿಂದ ತಿರುಗಿಬಂದು ಕ್ರಿ. ಶ. ೩೫೦ ರಲ್ಲಿ ಅವನು ತನ್ನ ಯಾಗವನ್ನು ಮುಗಿಸಿದನು. ಈ ಯಾಗದ ನೆನಪಿಗಾಗಿ ಯಜ್ಞದ ಕುದುರೆಯ ಗುರುತಿನ ನಾಣ್ಯಗಳನ್ನು ಮಾಡಿಸಿದನು; ಅಲ್ಲದೆ ಆ ನಾಣ್ಯಗಳ ಮೇಲೆ ತನ್ನ ಹಾಗು ತನ್ನ ರಾಣಿಯಾದ ದತ್ತಾದೇವಿಯ ಹೆಸರನ್ನು ಕೆತ್ತಿಸಿದನು.

ಸಮುದ್ರಗುಪ್ತನು ವೈದಿಕಧರ್ಮದ ಅನುಯಾಯಿ. ಆದರೆ ಅವನು ಪರ ಧರ್ಮದವರನ್ನು ಎಂದೂ ಪೀಡಿಸಲಿಲ್ಲ. ಎಲ್ಲರೂ ತಮ್ಮ ತಮ್ಮ ಧರ್ಮಗಳಂತೆ ನಡೆದುಕೊಳ್ಳಬೇಕೆಂದು ಹೇಳುತ್ತಿದ್ದನು. ಬುದ್ಧಗಯೆಯ ಯಾತ್ರೆಗೆ ಬರುವ ಬೌದ್ಧಯಾತ್ರಿಕರ ಸಲುವಾಗಿ, ಬುದ್ಧಗಯೆಯ ಹತ್ತಿರ ಅನೇಕ ಧರ್ಮಸಾಲೆ ಗಳನ್ನು ಕಟ್ಟಿಸಿದನು. ಇವನ ಶೌರ್ಯ-ಸಾಹಸಗಳನ್ನೂ ವೈಭವ ಹಾಗು ಘನತೆಯನ್ನೂ ಕಂಡು ಪರದೇಶದ ರಾಜರು ಇವನೊಡನೆ ಗೆಳೆತನ ಮಾಡಿ ದರು. ಸಿಲೋನದ ರಾಜನಾದ ಮೇಘವರ್ಮನು ಇವನಲ್ಲಿ ತನ್ನ ರಾಯಭಾರಿ

ಯನ್ನಿಟ್ಟು ಈತನ ರಾಯಭಾರಿಯನ್ನು ತನ್ನಲ್ಲಿ ಇಟ್ಟುಕೊಂಡಿದ್ದನು. ಇರಾಣದ ಅರಸನೂ ಸಮುದ್ರಗುಪ್ತನಿಗೆ ಕಪ್ಪ-ಕಾಣಿಕೆಗಳನ್ನು ಕಳುಹುತ್ತಿದ್ದನು.

ಸಮುದ್ರಗುಪ್ತನು ಕೇವಲ ಯುದ್ಧವೀರನಾಗಿರದೆ ಒಳ್ಳೆಯ ರಸಿಕನೂ ಕಲಾಪ್ರಿಯನೂ ಆಗಿದ್ದನು. ಇವನು ದೊಡ್ಡ ಪಂಡಿತನೂ ಕವಿಯೂ ಆಗಿದ್ದನು. ತನ್ನ ರಾಜ್ಯದಲ್ಲಿ ಇರುವ ಕವಿಗಳಿಗೂ ವಿದ್ವಾಂಸರಿಗೂ ಆಶ್ರಯ ಕೊಡುತ್ತಿದ್ದನು. ಅಲ್ಲದೆ ತಾನೇ ಸ್ವತಃ ಗ್ರಂಥಗಳನ್ನು ಬರೆದಿರುವನು. ತನ್ನ ಮಾಂಡಲಿಕ ರಾಜರನ್ನು ಇವನು ಪ್ರೀತಿ-ಆದರಗಳಿಂದ ನಡಿಸಿಕೊಳ್ಳುತ್ತಿದ್ದನು. ಆದುದರಿಂದ ಎಲ್ಲರೂ ಇವನ ದೊಡ್ಡ ಮನಸ್ಸನ್ನು ಕಂಡು ಇವನನ್ನು ಬಹಳ ಗೌರವದಿಂದ ಕಾಣುತ್ತಿದ್ದರು!

ಸಮುದ್ರಗುಪ್ತನ ರಾಜ್ಯದಲ್ಲಿ ಎಲ್ಲೆಲ್ಲಿಯೂ ಶಾಂತತೆಯು ನೆಲಸಿತ್ತು. ಉದ್ಯೋಗ-ವ್ಯವಸಾಯಗಳು ಚೆನ್ನಾಗಿ ಸಾಗಿದ್ದುವು. ಜನರು ಉಂಡು-ಉಟ್ಟು ಸುಖವಾಗಿದ್ದರು. ಆದುದರಿಂದ ಈ ರಾಜನ ಆಳಿಕೆಯ ಕಾಲವನ್ನು 'ಸುವರ್ಣ (ಬಂಗಾರದ) ಯುಗ' ಎಂದು ಹೇಳುವರು.

ಹೀಗೆ ಸಮ್ರಾಟ್ ಸಮುದ್ರಗುಪ್ತನು ಮಗಧಸಾಮ್ರಾಜ್ಯವನ್ನು ಒಳ್ಳೆಯ ಘನತೆಯಿಂದ ಆಳಿ ಕ್ರಿ. ಶ. ೩೭೫ರಲ್ಲಿ ಮಡಿದನು.

## ಅಭ್ಯಾಸನಗಳು

೧. ಸಮುದ್ರಗುಪ್ತನ ತಂದೆ-ತಾಯಿಗಳು ಯಾರು?

೨. ಸಮುದ್ರಗುಪ್ತನು ಚಿಕ್ಕವನಿರುವಾಗ, ಜನರು ಇವನ ಗುಣಗಳನ್ನು ಕಂಡು ಇವನ ಬಗ್ಗೆ ಏನು ಅನ್ನುತ್ತಿದ್ದರು?

೩. ಸಮುದ್ರಗುಪ್ತನು ತನ್ನ ಸಾಮ್ರಾಜ್ಯವನ್ನು ಎಲ್ಲಿಂದ ಎಲ್ಲಿಯವರೆಗೆ ಹಬ್ಬಿಸಿದನು?

೪. ಸಮುದ್ರಗುಪ್ತನು ಸಾರ್ವಭೌಮನಾಗಬೇಕೆಂದು ಏನು ಮಾಡಿದನು?

೫. ಸಮುದ್ರಗುಪ್ತನ ಶೌರ್ಯ-ಸಾಹಸಗಳಿಗೆ ಮೆಚ್ಚಿ ಯಾವ ಯಾವ ದೇಶಗಳ ಅರಸರು ಇವನ ಕೂಡ ಗೆಳೆತನವನ್ನು ಮಾಡಿದರು?

೬. ಸಮುದ್ರಗುಪ್ತನ ಆಳಿಕೆಯನ್ನು ಸುವರ್ಣಯುಗವೆಂದು ಏಕೆ ಕರೆಯುವರು?

೭. ಸಮುದ್ರಗುಪ್ತನಲ್ಲಿ ಕಂಡುಬರುವ ಮಹತ್ತ್ವದ ಗುಣಗಳನ್ನು ಹೇಳಿರಿ.

೮. ಕೆಳಗೆ ಕೆಲವು ಇಸ್ವಿಗಳನ್ನೂ, ಅವುಗಳ ಮುಂದೆ ಆಗ ಸಂಭವಿಸಿದ ಸಂಗತಿಗಳನ್ನೂ ಕೊಟ್ಟಿದೆ. ಅವುಗಳನ್ನು ಹೊಂದಿಸಿ ಬರೆಯಿರಿ.

| | |
|---|---|
| ೧) ಕ್ರಿ. ಶ. ೩೭೫ | ೧) ಪಟ್ಟಕ್ಕೆ ಬಂದನು. |
| ೨) ಕ್ರಿ. ಶ. ೩೩೦ | ೨) ಅಶ್ವಮೇಧಯಜ್ಞವನ್ನು ಮುಗಿಸಿದನು. |
| ೩) ಕ್ರಿ. ಶ. ೩೫೦ | ೩) ಚಂದ್ರಗುಪ್ತನು ಮಡಿದನು. |

# ೮. ಮುಹಮ್ಮದ ಪೈಗಂಬರರು

ನಮ್ಮ ದೇಶದ ಪಶ್ಚಿಮಕ್ಕೆ ಅರಬೀಸಮುದ್ರವು ಇರುವುದು. ಅದರ ಆಚೆಯ ದಂಡೆಯಲ್ಲಿ ಅರಬಸ್ತಾನವೆಂಬ ದೇಶವಿದೆ. ಸುಮಾರು ಹದಿಮೂರು ನೂರು ವರುಷಗಳ ಹಿಂದೆ, ಅಲ್ಲಿಯ ಜನರ ಪರಿಸ್ಥಿತಿ ನೆಟ್ಟಗಿರಲಿಲ್ಲ. ಅವರಲ್ಲಿ ಎಷ್ಟೆಷ್ಟೋ ಸಣ್ಣ ಸಣ್ಣ ಪಂಗಡಗಳಿದ್ದುವು. ಬಲಿಷ್ಠನಾದವನೇ ಅಲ್ಲಿ ಮುಂದಾಳು. ಹಣಗಾರರಾದ ಕೆಲವು ಜನರು, ಹಣವಿಲ್ಲದ ಬಹುಜನ ಬಡವರನ್ನು ತಮ್ಮ ಮನಸ್ಸಿಗೆ ಬಂದಂತೆ ನಡೆಸಿಕೊಳ್ಳುತ್ತಿದ್ದರು. ಜನರಲ್ಲಿ ಮೂಢ ನಂಬಿಕೆಗಳೂ ಕೆಟ್ಟರೂಢಿಗಳೂ ನೆಲೆಗೊಂಡಿದ್ದುವು. ಮೂರ್ತಿಪೂಜೆಯು ಎಲ್ಲ ಕಡೆಗೂ ನಡೆಯುತ್ತಿತ್ತು. ಒಂದೇ ಮಕ್ಕಾ ಪಟ್ಟಣದೊಳಗಿನ "ಕಾಬಾ" ಎಂಬಲ್ಲಿ, ೩೬೦ರಷ್ಟು ಬೇರೆಬೇರೆ ಮೂರ್ತಿಗಳಿದ್ದುವು. ಮಕ್ಕಾಪಟ್ಟಣ ಅರಬರ ಪವಿತ್ರ ಕ್ಷೇತ್ರವಾಗಿತ್ತು. ಖುರೈಷ್ ಎಂಬ ವಂಶದವರು ಅಲ್ಲಿಯ ಮುಖ್ಯ ಪೂಜಾರಿಗಳಾಗಿದ್ದರು.

ಖುರೈಷ್ ಪಂಗಡದ ಮುಖ್ಯಸ್ಥ ಅಬ್ದುಲ್ ಎಂಬವ. ಅವನು ಮಕ್ಕಾ ಪಟ್ಟಣದ ದೇವಾಲಯದ ಆಡಳಿತವನ್ನು ನೋಡಿಕೊಳ್ಳುತ್ತಿದ್ದ; ಮತ್ತು ವ್ಯಾಪಾರವನ್ನೂ ಮಾಡುತ್ತಿದ್ದ. ಅವನಿಗೆ 'ಅಮೀನಾ' ಎಂಬ ಹೆಂಡತಿ ಇದ್ದಳು. ಈ ಗಂಡ-ಹೆಂಡಿರಿಗೆ ಕ್ರಿ. ಶ. ೫೭೦ರಲ್ಲಿ ಒಬ್ಬ ಮಗನು ಹುಟ್ಟಿದನು. ಅವನಿಗೆ ಮುಹಮ್ಮದನೆಂದು ಹೆಸರಿಟ್ಟರು. ಮಗನು ಹುಟ್ಟುವ ಎರಡು-ಮೂರು ತಿಂಗಳ ಪೂರ್ವದಲ್ಲಿಯೇ, ತಂದೆ ಅಬ್ದುಲ್ಲಾ ತೀರಿಕೊಂಡಿದ್ದನು; ಆರು ವರುಷದವನಾಗುವುದರೊಳಗಾಗಿಯೆ ಮುಹಮ್ಮದನ ತಾಯಿಯೂ ತೀರಿಕೊಂಡಳು. ಮುಂದೆ ಬಾಲಕ ಮುಹಮ್ಮದನನ್ನು, ಅವನ ಕಕ್ಕನಾದ ಅಬೂತಾಲೀಬನು ಜೋಕೆಮಾಡತೊಡಗಿದನು.

ಸಣ್ಣವನಿದ್ದಾಗ ಮುಹಮ್ಮದನು, ಚಿಕ್ಕಪ್ಪನ ಕುರಿಗಳನ್ನು ಕಾಯಲು ಹೋಗುತ್ತಿದ್ದನು. ಕಾಡಿನಲ್ಲಿ ಒಬ್ಬೊಂಟಿಗನಾಗಿ ತಿರುಗಾಡಬೇಕಾಗುತ್ತಿತ್ತು; ಅಲ್ಲಿ ಅವನಿಗೆ ದೇವರ ಬಗೆಗೂ ಜಗತ್ತಿನ ಬಗೆಗೂ ವಿಚಾರಗಳು ಬರತೊಡಗಿದುವು. ಕುರಿಗಳು ಮೇಯುತ್ತಿರುವಾಗ, ಅವನು ಒಂದು ಕಡೆಗೆ ಕುಳಿತು ದೇವರ ಧ್ಯಾನಮಾಡುತ್ತಿದ್ದನು. ಪ್ರತಿದಿನವೂ ಎಷ್ಟೋ ಕಾಲವನ್ನು ದೇವರ ಚಿಂತನೆಯಲ್ಲಿ ಕಳೆಯುತ್ತಿದ್ದನು. ಮುಂದೆ ಪ್ರಾಯಕ್ಕೆ ಬರಲು ಅವನ ಕಕ್ಕನು ಕುರಿಕಾಯುವುದನ್ನು ಬಿಡಿಸಿ ಅವನನ್ನು ವ್ಯಾಪಾರಕ್ಕೆ ಹಚ್ಚಿದನು. ಆಗ ಮುಹಮ್ಮದನು, ಸರಕುಗಳನ್ನು ಮಾರಲು ದೂರ-ದೂರದ ದೇಶಗಳಿಗೆ ಹೋಗು

ತ್ತಿದ್ದನು! ಸತ್ಯ-ಪ್ರಾಮಾಣಿಕತೆ-ವಿಶ್ವಾಸಗಳ ಮೂಲಕ ಅವನ ವ್ಯಾಪಾರವು ಬೆಳೆಯಿತು.

ಮಕ್ಕಾಪಟ್ಟಣದಲ್ಲಿ 'ಖುದೇಜಾಬೀಬಿ' ಎಂಬ ಒಬ್ಬ ಶ್ರೀಮಂತ ಹೆಣ್ಣು-ಮಗಳು ಇದ್ದಳು. ಅವಳು ದೊಡ್ಡ ವ್ಯಾಪಾರವನ್ನು ಇಟ್ಟಿದ್ದಳು. ಮಹಮ್ಮದನ ಒಳ್ಳೆಯ ಗುಣಗಳನ್ನು ಕಂಡು, ಅವಳು ಅವನನ್ನು ತನ್ನ ಮುಖ್ಯ ಗುಮಾಸ್ತನನ್ನಾಗಿ ನೇಮಿಸಿದಳು. ಮುಂದೆ ಅವಳೇ, ಮಹಮ್ಮದನ ಪ್ರಾಮಾಣಿಕತನಕ್ಕೂ ಚೆಲುವಿಕೆಗೂ ಮನಸೋತು ಅವನನ್ನು ಮದುವೆಯಾದಳು. ಆಗ ಮಹಮ್ಮದನಿಗೆ ೨೫ ವರುಷದ ವಯಸ್ಸು. ಖುದೇಜಳಿಗೆ ೪೦ ವರುಷದ ವಯಸ್ಸು.

ಖುದೇಜಳನ್ನು ಲಗ್ನವಾದುದರಿಂದ ಮಹಮ್ಮದನು ದೊಡ್ಡ ಐಶ್ವರ್ಯವಂತನಾದನು. ಆದರೆ ಅವನು ಆ ಐಶ್ವರ್ಯವನ್ನು ತನ್ನ ಸುಖ-ಭೋಗಗಳಿಗೆ ಬಳಸಲಿಲ್ಲ. ಬಡಬಗ್ಗರಿಗೆ ಸಹಾಯ ಮಾಡುವುದರಲ್ಲಿ ವೆಚ್ಚಮಾಡಹತ್ತಿದನು. ಇದರಿಂದ ಮಹಮ್ಮದನ ಕೀರ್ತಿ ಎಲ್ಲ ಕಡೆಗೂ ಹಬ್ಬಿತು.

ಬಿಡುವು ದೊರೆತಾಗಲೆಲ್ಲ ಮಹಮ್ಮದನು ಅಡವಿಗೆ ಹೋಗುತ್ತಿದ್ದನು. ಅಲ್ಲಿ ಒಬ್ಬನೇ ಕುಳಿತು ದೇವರ ಧ್ಯಾನ ಮಾಡುತ್ತಿದ್ದನು. ಮಕ್ಕಾದ ಬಳಿಯ ಬೆಟ್ಟದಲ್ಲಿ ಇರುವ 'ಹಿರಾ' ಎಂಬ ಗುಹೆಯಲ್ಲಿ, ೮—೧೦ ದಿನಗಳವರೆಗೆ ಅನ್ನ-ನೀರುಗಳಿಲ್ಲದೆ ಕುಳಿತು ದೇವರ ಧ್ಯಾನದಲ್ಲಿ ಮಗ್ನನಾಗುತ್ತಿದ್ದನು. ಜಗತ್ತನ್ನು ಹುಟ್ಟಿಸಿ ಕಾಯುವ ದೇವರು ಒಬ್ಬನೇ ಇರುವನೆಂದು ಅವನ ಮನವರಿಕೆಯಾಗಿತ್ತು. ಮಹಮ್ಮದನ ಒಬ್ಬನೇ ದೇವನೆಂದರೆ ಅಲ್ಲಾ. ಅವನ ಹೊರತು ಇನ್ನಾವ ದೇವರೂ ಇಲ್ಲವೆಂದು ಅವನು ನಂಬಿದ್ದನು. ಜನರು ಒಬ್ಬನೇ ಒಬ್ಬ ದೇವನನ್ನು ಪೂಜಿಸದೆ 'ಕಾಬಾ'ದಲ್ಲಿಯ ಎಣಿಕೆ ಇಲ್ಲದಷ್ಟು ಮೂರ್ತಿಗಳನ್ನು ಪೂಜಿಸುವುದನ್ನು ನೋಡಿ ಅವನು ವ್ಯಸನಪಡುತ್ತಿದ್ದನು.

ಅವನು ಒಂದು ದಿನ ಹಿರಾ ಗುಹೆಯಲ್ಲಿ ಕುಳಿತು ದೇವರ ಧ್ಯಾನ ಮಾಡುವಾಗ ದೇವದೂತನು ಪ್ರತ್ಯಕ್ಷನಾಗಿ—"ಮಹಮ್ಮದ, ನೀನು ದೇವರ ಸೇವಕ! ನೀನೇ ಪೈಗಂಬರ! ಒಬ್ಬನೇ ದೇವರನ್ನು ಎಲ್ಲರೂ ಆರಾಧಿಸುವಂತೆ ಬೋಧಿಸು!" ಎಂದು ಹೇಳಿ ಮಾಯವಾದನು. ಮಹಮ್ಮದನಿಗೆ ಸಂತೋಷವಾಯಿತು. ಅಲ್ಲಿಂದ ಎದ್ದು ಅವನು ಮನೆಗೆ ಬಂದನು. ಹೆಂಡತಿಗೆ ಹೇಳಿದನು. ಆಕೆಗೂ ಬಹಳ ಸಂತೋಷವಾಯಿತು. ಅವಳು ಪತಿಯ ಉಪದೇಶವನ್ನು ಕೇಳಿ ಅವನ ಮತವನ್ನು ಸ್ವೀಕರಿಸಿದಳು. ಬಳಿಕ ಮಹಮ್ಮದನು ಮಕ್ಕಾ ಪಟ್ಟಣದಲ್ಲಿಯ ಅರಬರಿಗೆ ತನ್ನ ಮತವನ್ನು ಉಪದೇಶ ಮಾಡತೊಡಗಿದನು.

ಮೊದಲು ಹಜರತ್ ಅಲಿ, ಹಜರತ್ ಅಬೂಬಕರ್ ಎಂಬುವರು ಮಹಮ್ಮದನ ಶಿಷ್ಯರಾದರು. ಆದರೆ ಅನೇಕರು ಅವನ ಮತಕ್ಕೆ ವಿರೋಧಿಗಳಾಗಿ

ನಿಂತರು. ಪರಿಪರಿಯಿಂದ ಮಹಮ್ಮದನಿಗೆ ತೊಂದರೆ ಕೊಡಹತ್ತಿದರು. ಖುರೈಷ್ ಮನೆತನದವರಂತೂ ಆತನ ಮೇಲೆ ಬಹಳ ಸಿಟ್ಟಾದರು. 'ಇವನು ನಮ್ಮ ಧರ್ಮವನ್ನು ಕೆಡಿಸುವನು' ಎಂದು ದೂರಹತ್ತಿದರು. ಕೆಲವರು ಮಹಮ್ಮದನ ಶಿಷ್ಯರನ್ನು ಹೊಡೆದರು. ಆತನ ಕಕ್ಕನಿಂದ ಹೇಳಿಸಿದರು; ಆದರೂ ಅವನು ಕೇಳಲಿಲ್ಲ. ಮುಂದೆ ಕೆಲವು ದಿವಸಗಳಲ್ಲಿ ಅವನ ಹೆಂಡತಿ ಹಾಗು ಚಿಕ್ಕಪ್ಪ ಇಬ್ಬರೂ ಸತ್ತುಹೋದರು. ಮಕ್ಕಾದಲ್ಲಿಯ ಜನರು ಅವನಿಗೆ ಬಹಳ ತೊಂದರೆಕೊಡಹತ್ತಿದರು. ಆಗ ಮಹಮ್ಮದನು ಮಕ್ಕಾ ಬಿಟ್ಟು ಮದಿನಾ ಪಟ್ಟಣಕ್ಕೆ ಹೋದನು. ಅಲ್ಲಿ ತನ್ನ ಉಪದೇಶವನ್ನು ಪ್ರಾರಂಭಿಸಿದನು. ಮೊದ-ಮೊದಲು ಅಲ್ಲಿಯ ಜನರೂ ಅವನನ್ನು ಹಳಿದರು. ಆದರೆ ಬರುಬರುತ ಅವನ ಧೈರ್ಯ-ತಾಳ್ಮೆ-ಸೇವಾಬುದ್ಧಿಗಳನ್ನು ಕಂಡು, ಅವನ ಮತಕ್ಕೆ ಸೇರಿದರು.

ಮಕ್ಕಾದ ಜನರು ಮಹಮ್ಮದನನ್ನು ಅಲ್ಲಿಯೂ ಸುಮ್ಮನೆ ಬಿಡಲಿಲ್ಲ. ಅವನನ್ನು ಕೊಲ್ಲಬೇಕೆಂದು ದೊಡ್ಡ ದಂಡಿನೊಡನೆ ಮದಿನಾ ಪಟ್ಟಣವನ್ನು ಮುತ್ತಿದರು. ಆದರೆ ಮಹಮ್ಮದನು ಧೈರ್ಯಬಿಡಲಿಲ್ಲ. ಪ್ರಾಣರಕ್ಷಣೆಗಾಗಿ ತಾನೂ ದಂಡುಕೂಡಿಸಿದ. ವೈರಿಗಳನ್ನೆಲ್ಲ ಹೊಡೆದೋಡಿಸಿದ. ಬಳಿಕ ಅವರು ಮತ್ತೊಂದು ಸಲ ಇವನ ಮೇಲೆ ದಂಡೆತ್ತಿಬಂದರು. ಆಗ ಮಹಮ್ಮದನ ಅನುಯಾಯಿಗಳ ಸಂಖ್ಯೆ ಮೊದಲಿಗಿಂತ ಎರಡು ಮೂರು ಪಾಲು ಹೆಚ್ಚಿತ್ತು. ಅವರೆಲ್ಲರ ಮುಂದೆ ವಿರೋಧಿಗಳ ಆಟ ನಡೆಯಲಿಲ್ಲ. ಕೊನೆಗೆ ಅವರು ಸೋತು ಮಹಮ್ಮದನಿಗೆ ಶರಣಾಗತರಾದರು; ಅವನ ಹೊಸಧರ್ಮವನ್ನು ತಾವೂ ಸ್ವೀಕರಿಸಿದರು. ಎಲ್ಲರೂ ಕೂಡಿಕೊಂಡು ಮಹಮ್ಮದನನ್ನು ವೈಭವದಿಂದ ಮಕ್ಕಾ ಪಟ್ಟಣಕ್ಕೆ ಕರೆದುಕೊಂಡು ಹೋದರು. ಅಲ್ಲಿ ಎಲ್ಲ ಜನರೂ ಅವನ ಉಪದೇಶವನ್ನು ಕೇಳಿದರು. 'ಕಾಬಾ'ದಲ್ಲಿಯ ಮೂರ್ತಿಗಳನ್ನು ಕಿತ್ತೊಗೆದು ಅಲ್ಲಿ ಮಸೀದೆಯನ್ನು ಕಟ್ಟಿದರು. ಅಲ್ಲಿ ಕುಳಿತು ಅಲ್ಲಾನನ್ನು ಪ್ರಾರ್ಥಿಸಹತ್ತಿದರು. ಮಹಮ್ಮದನು ನಿಜವಾಗಿಯೂ ಪೈಗಂಬರನೆಂದು ಎಲ್ಲ ಅರಬರೂ ಒಪ್ಪಿಕೊಂಡರು.

ಮಹಮ್ಮದ ಪೈಗಂಬರರು ಎಲ್ಲ ಕಡೆಗೆ ತಿರುಗಾಡಿ, ತಮ್ಮ ಹೊಸಧರ್ಮವಾದ ಇಸ್ಲಾಮ್ ಮತವನ್ನು ಪ್ರಸಾರಮಾಡಿದರು. ದಿನದಿನಕ್ಕೆ ಅವರ ಅನುಯಾಯಿಗಳ ಸಂಖ್ಯೆ ಬೆಳೆಯತೊಡಗಿತು. ಹೀಗೆಯೆ ಪ್ರಚಾರ ಮಾಡುತ್ತ ಮತ್ತೆ ಮದಿನಾ ಪಟ್ಟಣಕ್ಕೆ ಬಂದರು. ಅಲ್ಲಿ ಅವರು ಬೇನೆಯಿಂದ ಹಾಸಿಗೆ ಹಿಡಿದರು; ಆದರೂ ನಿತ್ಯ ಮಸೀದೆಗೆ ಹೋಗಿ ದೇವರ ಪ್ರಾರ್ಥನೆ ಮಾಡುವುದನ್ನು ಬಿಡಲಿಲ್ಲ. ಕೊನೆಗೆ ಕ್ರಿ. ಶ. ೬೩೨ರಲ್ಲಿ ಅವರ ಅಂತ್ಯವಾಯಿತು.

"ದೇವರು ಒಬ್ಬನೇ. ಮೂರ್ತಿಪೂಜೆ ಮಾಡಬಾರದು. ತಾಯಿ-ತಂದೆಗಳ ಸೇವೆ ಮಾಡಬೇಕು. ಜೂಜಾಡಬಾರದು. ಮನುಷ್ಯರೆಲ್ಲರೂ ಸಮಾನರೆಂದು ತಿಳಿಯಬೇಕು." ಇದು ಅವರ ಉಪದೇಶದ ಸಾರ. ಅವರ ಉಪದೇಶದ ವಚನಗಳೆಲ್ಲ "ಕುರಾನ್" ಎಂಬ ಗ್ರಂಥದಲ್ಲಿ ಒಟ್ಟುಗೂಡಿವೆ. ಇದು ಇಸ್ಲಾಮ್ ಧರ್ಮದ ಪವಿತ್ರ ಗ್ರಂಥ.

## ಅಭ್ಯಸನಗಳು

೧. ಮಹಮ್ಮದ ಪೈಗಂಬರರು ಯಾವ ದೇಶದವರು?

೨. ಅವರ ತಂದೆ-ತಾಯಿಗಳು ಯಾರು?

೩. ಚಿಕ್ಕಂದಿನಲ್ಲಿ ಮಹಮ್ಮದ ಪೈಗಂಬರರು ಯಾವ ಕೆಲಸ ಮಾಡುತ್ತಿದ್ದರು?

೪. ಮಹಮ್ಮದ ಪೈಗಂಬರರ ಲಗ್ನವು ಯಾರ ಸಂಗಡ ಆಯಿತು? ಯಾಕೆ?

೫. ಇವರು ದೇವರ ಧ್ಯಾನವನ್ನು ಎಲ್ಲಿ ಕುಳಿತು ಮಾಡಿದರು?

೬. ದೇವದೂತನು ಪ್ರತ್ಯಕ್ಷನಾಗಿ ಇವರಿಗೆ ಹೇಳಿದ ಮಾತುಗಳು ಯಾವುವು?

೭. ಇವರು ಸ್ಥಾಪಿಸಿದ ಧರ್ಮವು ಯಾವುದು?

೮. ಇವರು ಹೇಳಿದ ಉಪದೇಶದ ಮಾತುಗಳು ಯಾವುವು?

೯. ಇಸ್ಲಾಮ ಧರ್ಮದ ಪವಿತ್ರಗ್ರಂಥವು ಯಾವುದು?

೧೦. ಕೆಳಗಿನ ವಾಕ್ಯಗಳಲ್ಲಿಯ ಬಿಟ್ಟ ಶಬ್ದಗಳನ್ನು ತುಂಬಿ, ವಾಕ್ಯಗಳನ್ನು ಪೂರ್ತಿಗೊಳಿಸಿರಿ.

(ಅ) ಅರಬರು ಇವರಿಗೆ— —— ಎಂಬ ಬಿರುದನ್ನು ಕೊಟ್ಟರು?

(ಬ) ——ಲಗ್ನವಾಗುವುದರಿಂದ ಮಹಮ್ಮದನು—— ವಂತನಾದನು.

(ಕ) ಮೊದಲು— —ಮತ್ತು—ಎಂಬವರು ಮಹಮ್ಮದನ ಶಿಷ್ಯರಾದರು.

(ಡ) ಮೊದಲು———ದಲ್ಲಿಯ ಮೂರ್ತಿಗಳನ್ನು ತೆಗೆದು—ಕಟ್ಟಿದರು.

(ಇ) — —ದಲ್ಲಿ ಮಹಮ್ಮದ ಪೈಗಂಬರರು ತೀರಿಕೊಂಡರು.

# ೯. ಹರ್ಷವರ್ಧನ

ಪಂಜಾಬ ರಾಜ್ಯದಲ್ಲಿ ಸ್ಥಾನೇಶ್ವರ ಎಂಬ ಒಂದು ಪಟ್ಟಣವಿದೆ. ಹಿಂದೆ ಅಲ್ಲಿ ಪ್ರಭಾಕರವರ್ಧನ ಎಂಬ ರಾಜನು ಆಳುತ್ತಿದ್ದನು. ಅವನ ರಾಣಿ ಯಶೋಮತಿ. ಆಕೆಯ ಹೊಟ್ಟೆಯಿಂದ ರಾಜವರ್ಧನ, ಹರ್ಷವರ್ಧನ ಎಂದು ಇಬ್ಬರು ಗಂಡುಮಕ್ಕಳು, ರಾಜಶ್ರೀ ಎಂಬ ಒಬ್ಬಳು ಹೆಣ್ಣುಮಗಳೂ ಹುಟ್ಟಿದರು. ಮೂವರೂ ಅರಸುಮಕ್ಕಳು ಸುಖದಿಂದ ಬೆಳೆದರು. ಒಳ್ಳೆಯ ಗುರುವಿನಿಂದ ವಿದ್ಯೆ-ಬುದ್ಧಿಗಳನ್ನು ಕಲಿತರು. ಅಣ್ಣನಾದ ರಾಜವರ್ಧನನಿಗಿಂತ ಹರ್ಷವರ್ಧನನು, ಎಲ್ಲ ವಿಷಯಗಳಲ್ಲಿಯೂ ಒಂದು ಹೆಜ್ಜೆ ಮುಂದೆ ಇದ್ದನು. ಅವನು ರಾಜಕಾರಣ ಮತ್ತು ಯುದ್ಧ ವಿದ್ಯೆಗಳಲ್ಲಿ ಪ್ರವೀಣನಾದಂತೆ ಸಂಸ್ಕೃತ ಭಾಷೆಯಲ್ಲಿಯೂ ಪಂಡಿತನಾದನು.


ಹರ್ಷವರ್ಧನ

ರಾಜವರ್ಧನನು ಬೆಳೆದು ಪ್ರಾಯಕ್ಕೆ ಬಂದಿದ್ದ. ಆಗ ಪ್ರಭಾಕರವರ್ಧನನ ರಾಜ್ಯದ ಮೇಲೆ ಹೂಣರು ದಾಳಿಯನ್ನು ಮಾಡಿದರು. ಅರಸನು ಮುಪ್ಪಿನವನಾದ ಕಾರಣ, ಯುವರಾಜನಾದ ರಾಜವರ್ಧನನು ಹೂಣರನ್ನು ಇದಿರಿಸಬೇಕಾಯಿತು. ಆಗ ಹರ್ಷವರ್ಧನನು ಚಿಕ್ಕವನಿದ್ದನು; ಆದರೂ ಅಣ್ಣನೊಡನೆ ಯುದ್ಧಕ್ಕೆ ಹೋದನು. ಇತ್ತ ಸ್ಥಾನೇಶ್ವರದಲ್ಲಿ ಪ್ರಭಾಕರವರ್ಧನನ ಆರೋಗ್ಯವು ಕೆಟ್ಟಿತು. ಈ ಸುದ್ದಿಯನ್ನು ಕೇಳಿ ಹರ್ಷವರ್ಧನನು ತಿರುಗಿಬಂದನು. ಕೆಲವೆ ದಿನಗಳಲ್ಲಿ ರಾಜನು ತೀರಿಕೊಂಡನು. ರಾಣಿ ಯಶೋಮತಿದೇವಿಯು ಗಂಡನೊಡನೆ ಸಹಗಮನ ಮಾಡಿದಳು. ರಾಜವರ್ಧನನು ಹೂಣರ ದಾಳಿಯನ್ನು ಅಡಗಿಸಿ, ಜಯಶಾಲಿಯಾಗಿ ತಿರುಗಿ ಬಂದನು. ತಂದೆಯ ಮರಣದ ಸುದ್ದಿಯನ್ನು ಕೇಳಿ ಅವನು ಬಹಳ ದುಃಖಬಟ್ಟನು. ಆದರೆ ಮಾಡುವುದೇನು? ನಿಯಮದಂತೆ ಹಿರಿಯನಾದ ರಾಜವರ್ಧನನಿಗೆ ಪಟ್ಟಾಭಿಷೇಕವಾಯಿತು.

ಅರಸನಾದ ಕೆಲವು ದಿನಗಳಲ್ಲಿಯೆ, ರಾಜವರ್ಧನನಿಗೆ ಇನ್ನೊಂದು ಸಂಕಟವು ಬಂದೊದಗಿತು; ತಂಗಿ ರಾಜಶ್ರೀಯ ಗಂಡನಾದ ಕನೋಜದ ಗ್ರಹವರ್ಮನು ಯುದ್ಧದಲ್ಲಿ ಮಡಿದನೆಂದೂ, ಮಾಳವದ ರಾಜನಾದ ದೇವಗುಪ್ತನು ರಾಜಶ್ರೀಯನ್ನು ಕಾರಾಗೃಹದಲ್ಲಿ ಇಟ್ಟಿರುವನೆಂದೂ ಸುದ್ದಿ ಬಂದಿತು. ತಂಗಿಯ ಸಂಕಟವನ್ನು ಕೇಳಿ ರಾಜವರ್ಧನನು ಕಳವಳಪಟ್ಟನು; ದೇವಗುಪ್ತನನ್ನು

ಚೆನ್ನಾಗಿ ದಂಡಿಸಬೇಕೆಂದು ನಿಶ್ಚಯಮಾಡಿದನು; ದೊಡ್ಡ ದಂಡು ತಕ್ಕೊಂಡು ಅವನು ಕನೋಜಕ್ಕೆ ಹೋದನು. ಯುದ್ಧಮಾಡಿ ದೇವಗುಪ್ತನನ್ನು ಸೋಲಿಸಿ ದನು. ಆಗ ದೇವಗುಪ್ತನ ಸಹಾಯಕನಾದ ವಂಗರಾಜ ಶಶಾಂಕನು, ರಾಜ-ವರ್ಧನನ ಸಂಗಡ ಒಪ್ಪಂದ ಮಾಡಿಕೊಂಡನು. ಆದರೆ ಅವನ ಒಳಸಂಚು ಬೇರೆಯಾಗಿತ್ತು. ರಾಜವರ್ಧನನನ್ನು ಮೋಸದಿಂದ ಕೊಲ್ಲಬೇಕೆಂದು ಅವನು ಮನಸ್ಸುಮಾಡಿದ್ದನು. ಪಾಪ! ರಾಜವರ್ಧನನಿಗೆ ಇದು ತಿಳಿಯಲಿಲ್ಲ. ಶಶಾಂಕನು ರಾಜವರ್ಧನನನ್ನು ಊಟಕ್ಕೆಂದು ಕರೆಸಿ, ಅವನನ್ನು ಮೋಸದಿಂದ ಕೊಲ್ಲಿಸಿದನು. ಈ ಸುದ್ದಿಯು ತಿಳಿಯುತ್ತಲೆ ರಾಜಶ್ರೀಯು ಹೇಗೋ ಪಾರಾಗಿ, ದಾಸಿಯರೊಡನೆ ವಿಂಧ್ಯ ಪರ್ವತದ ಕಡೆಗೆ ಓಡಿಹೋದಳು.

ಅಣ್ಣನ ಮರಣದ ವಾರ್ತೆಯನ್ನು ಕೇಳಿ ಹರ್ಷವರ್ಧನನಿಗೆ ಸಿಡಿಲು ಒಡೆ-ದಂತಾಯಿತು. ದುಃಖಿಸುತ್ತ ಕುಳಿತುಕೊಳ್ಳುವ ಕಾಲವಲ್ಲವೆಂದು ಸರದಾರರು ಅವನಿಗೆ ಸಮಾಧಾನ ಹೇಳಿದರು. ಮುಂದೆ ಅವನನ್ನೇ ಪಟ್ಟಕ್ಕೆ ಕುಳ್ಳಿರಿಸಿದರು.

ಹರ್ಷವರ್ಧನನಿಗೆ ಆಗ ಇನ್ನೂ ಹದಿನಾರು ವರುಷ. ಇಷ್ಟು ಚಿಕ್ಕವನಾಗಿ ದ್ದರೂ ಅವನಲ್ಲಿ ಅದ್ಭುತ ಪರಾಕ್ರಮ, ಧೈರ್ಯ ಹಾಗು ಸಾಹಸಗಳು ತುಂಬಿ ದ್ದುವು. ಆದುದರಿಂದ ಅವನು ಸುಮ್ಮನೆ ಕುಳಿತುಕೊಳ್ಳಲಿಲ್ಲ. ತನ್ನ ಅಣ್ಣನನ್ನು ಕೊಂದ—ತಂಗಿಯನ್ನು ಕಷ್ಟಕ್ಕೆ ಗುರಿಮಾಡಿದ—ದುಷ್ಟರಾಜನನ್ನು ಕೊನೆ-ಗಾಣಿಸುವವರೆಗೆ, ತಿರುಗಿ ರಾಜಧಾನಿಗೆ ಬರುವುದಿಲ್ಲವೆಂದು ಪಣತೊಟ್ಟನು. ದಂಡಿನೊಡನೆ ಕನೋಜದ ಕಡೆಗೆ ನಡೆದನು. ಮುಂದೆ ಹೋಗುವಷ್ಟರಲ್ಲಿ ರಾಜಶ್ರೀಯು ಕನೋಜದಿಂದ ತಪ್ಪಿಸಿಕೊಂಡು ವಿಂಧ್ಯಪರ್ವತಕ್ಕೆ ಹೋಗಿರುವ ಳೆಂದು ತಿಳಿಯಿತು. ಆಗ ಹರ್ಷವರ್ಧನನು ದಂಡನ್ನು ಅಲ್ಲಿಯೆ ಬಿಟ್ಟು ತಂಗಿ ಯನ್ನು ಹುಡುಕಲು ವಿಂಧ್ಯಪರ್ವತದ ಕಡೆಗೆ ನಡೆದನು. ಆ ಕಾಡಿನಲ್ಲಿ ಎಲ್ಲೆಲ್ಲಿಯೂ ಹುಡುಕಿದನು. ಕೊನೆಗೆ 'ರಾಜಶ್ರೀಯು ಅಗ್ನಿಪ್ರವೇಶಮಾಡಲು ಸಿದ್ಧಳಾಗಿರುವಳು' ಎಂದು ದಿವಾಕರಮಿತ್ರನೆಂಬ ಬೌದ್ಧ ಸಾಧುವಿನಿಂದ ತಿಳಿ ಯಿತು. ಹರ್ಷವರ್ಧನನು ಅಲ್ಲಿಗೆ ಓಡಿಹೋದನು; ಅಗ್ನಿಪ್ರವೇಶ ಮಾಡುವು-ದನ್ನು ಬಿಡಿಸಿ ತಂಗಿಯನ್ನು ಕರೆದುಕೊಂಡು ಬಂದನು.

ಇತ್ತ ಹರ್ಷವರ್ಧನನ ಸೇನಾಪತಿಯಾದ ಭಂಡಿಯು ಶಶಾಂಕನನ್ನು ಕೊಂದನು; ಅವನ ರಾಜ್ಯವನ್ನೂ ವಶಪಡಿಸಿಕೊಂಡನು. ಕನೋಜವು ಹರ್ಷ-ವರ್ಧನನ ವಶವಾಯಿತು. ಮುಂದೆ ಆ ರಾಜನು, ಸ್ಥಾನೇಶ್ವರವನ್ನು ಬಿಟ್ಟು ಕನೋಜವನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಬಳಿಕ ಅವನು, ದೊಡ್ಡ ಸೈನ್ಯದೊಡನೆ ಸತತವಾಗಿ ಆರುವರುಷಗಳ ವರೆಗೆ ದಿಗ್ವಿಜಯ ನಡೆಸಿ ದನು. ಪಂಜಾಬ, ಸಿಂಧ, ಮಧ್ಯಪ್ರದೇಶ, ಬಂಗಾಲ, ಗುಜರಾಥ, ರಾಜಸ್ಥಾನ

ಮೊದಲಾದ ಎಲ್ಲ ಪ್ರದೇಶಗಳನ್ನು ಗೆದ್ದನು; ಉತ್ತರಭಾರತಕ್ಕೆಲ್ಲ ತಾನೆ ಚಕ್ರವರ್ತಿಯಾದನು.

ಈಗ ಹರ್ಷವರ್ಧನನಿಗೆ ದಕ್ಷಿಣ ಭಾರತವನ್ನೂ ಗೆಲ್ಲಬೇಕೆಂಬ ಆಶೆ ಯುಂಟಾಯಿತು. ದಕ್ಷಿಣಕ್ಕೆ ದಂಡೆತ್ತಿ ಬಂದನು. ಆಗ ದಕ್ಷಿಣದಲ್ಲಿ ಚಾಲುಕ್ಯರ ೨ನೆಯ ಪುಲಿಕೇಶಿಯು ಸಾರ್ವಭೌಮನಾಗಿ ಆಳುತ್ತಿದ್ದನು. ಇಬ್ಬರಿಗೂ ನರ್ಮದಾನದಿಯ ದಂಡೆಯಮೇಲೆ ಘನಘೋರ ಕಾಳಗವಾಯಿತು. ಕೆಚ್ಚೆದೆಯ ಕನ್ನಡ ಬಂಟರ ಹೊಡೆತಕ್ಕೆ ಹರ್ಷವರ್ಧನನ ಸೈನಿಕರು ತಡೆಯಲಿಲ್ಲ. ಅವನು ಸೋತು ಕನೋಜಕ್ಕೆ ಹಿಂದಿರುಗಿದನು. ಮುಂದೆ ಅವನು ದಕ್ಷಿಣಕ್ಕೆ ದಂಡೆತ್ತಿ ಹೋಗಬೇಕೆಂಬ ವಿಚಾರವನ್ನು ಎಂದೂ ಮಾಡಲಿಲ್ಲ. ಕ್ರಿ. ಶ. ೬೪೮ರಲ್ಲಿ ಹರ್ಷವರ್ಧನನು ಮರಣಹೊಂದಿದನು.

ಹರ್ಷವರ್ಧನನು ಸುಮಾರು ೪೦ ವರುಷಗಳ ವರೆಗೆ ರಾಜ್ಯವಾಳಿದನು. ಈತನ ಕಾಲವೆಂದರೆ ಪ್ರಜೆಗಳಿಗೆ ಹರ್ಷದ ಕಾಲವೇ ಆಗಿತ್ತು. ಇವನು ಜನರ ಅನುಕೂಲತೆಗಾಗಿ ಧರ್ಮಸಾಲೆಗಳನ್ನು ಕಟ್ಟಿಸಿದ್ದನು. ಔಷಧಾಲಯಗಳನ್ನು ಇಡಿಸಿದ್ದನು. ಇವನ ಆಸ್ಥಾನದಲ್ಲಿ ಬಾಣ, ಸುಬಂಧು, ದಂಡಿ ಮುಂತಾದ ಶ್ರೇಷ್ಠ ಕವಿಗಳೂ ನಾಟಕಕಾರರೂ ಇದ್ದರು. ಸ್ವತಃ ಹರ್ಷವರ್ಧನನು ಕವಿಯೂ ನಾಟಕಕಾರನೂ ಆಗಿದ್ದನು. 'ರತ್ನಾವಳಿ,' 'ನಾಗಾನಂದ,' 'ಪ್ರಿಯದರ್ಶಿಕಾ' ಮುಂತಾದ ನಾಟಕಗಳನ್ನು ಈತನೇ ಬರೆದಿದ್ದಾನೆ. ಇವನ ಕಾಲದಲ್ಲಿ 'ನಲಂದ' ವಿಶ್ವವಿದ್ಯಾಲಯವು ಪ್ರಸಿದ್ಧವಾಗಿತ್ತು. ಆಗ ಅಲ್ಲಿ ಅಭ್ಯಾಸ ಮಾಡಲು ಚೀನದ ಪ್ರವಾಸಿಯಾದ ಹುವೆನ್‌ತ್ಸಾಂಗನು ಬಂದಿದ್ದನು. ಅವನು ಹರ್ಷವರ್ಧನನ ಕಾಲದ ದೇಶದ ಸ್ಥಿತಿಯನ್ನು ಕುರಿತು ಹೀಗೆ ಬರೆದಿದ್ದಾನೆ: "ಜನರು ವಂಚಕರಲ್ಲ; ಮರ್ಯಾದೆವಂತರು. ನುಡಿದಂತೆ ನಡೆಯುವವರು. ಅವರಲ್ಲಿ ಕೊಲೆ-ಸುಲಿಗೆಗಳು ತೀರ ಕಡಿಮೆ. ಜನರು ಬಾಗಿಲುಗಳಿಗೆ ಕೀಲಿಗಳನ್ನು ಹಾಕುವುದಿಲ್ಲ. ದೇಶದಲ್ಲಿ ದೊಡ್ಡ ದೊಡ್ಡ ಪಟ್ಟಣಗಳು ಇವೆ. ಅರಸನಲ್ಲಿ ದೊಡ್ಡ ದಂಡು ಇದೆ. ರಾಜಧಾನಿ ಸುಂದರವಾಗಿದೆ."

## ಅಭ್ಯಸನಗಳು

೧. ಹರ್ಷವರ್ಧನನು ಯಾವ ಯಾವ ರಾಜರನ್ನು ಸೋಲಿಸಿದನು?

೨. ಕೆಳಗೆ ಕೆಲವು ಅಪೂರ್ಣವಾಕ್ಯಗಳನ್ನೂ ಮುಂದೆ ಕಂಸದಲ್ಲಿ ಕೆಲವು ಸಂಗತಿಗಳನ್ನೂ ಕೊಟ್ಟಿದೆ. ಸರಿಯಾದ ಪದಗಳನ್ನೂ ಬಿಟ್ಟ ಸ್ಥಳದಲ್ಲಿ ತುಂಬಿ ವಾಕ್ಯಗಳನ್ನು ಪೂರ್ಣಮಾಡಿರಿ.

(ಅ) ಹರ್ಷವರ್ಧನನ ತಂದೆಯ ಹೆಸರು— — —
(ಗ್ರಹವರ್ಮ, ಶಶಾಂಕ, ಪ್ರಭಾಕರವರ್ಧನ)

(ಆ) — —ಯು ರಾಜನೊಡನೆ ಸಹಗಮನ ಮಾಡಿದಳು.
(ರಾಜಶ್ರೀ, ಯಶೋಮತಿ)

(ಇ) ಇವನ ಕಾಲಕ್ಕೆ ಚೀನದ ಪ್ರವಾಸಿಯಾದ— — —ಬಂದಿದ್ದನು.
(ಭಾಸ್ಕರವರ್ಮ, ಶಶಾಂಕ, ಹುವೆನ್‌ತ್ಸಾಂಗ್)

೩. ರಾಜವರ್ಧನನು ತನ್ನ ತಂಗಿಯಾದ ರಾಜಶ್ರೀಯನ್ನು ಕಾರಾಗೃಹದಿಂದ ಹೇಗೆ ಪಾರುಮಾಡಿದನು?

೪. ರಾಜವರ್ಧನನನ್ನು ಯಾರು ಕೊಂದರು? ಮತ್ತು ಹೇಗೆ?

೫. ಹರ್ಷವರ್ಧನನು ಅರಸನಾದ ಬಳಿಕ, ತನ್ನ ಅಣ್ಣನ ಮರಣದ ಸೇಡನ್ನು ತೀರಿಸಿಕೊಳ್ಳಲು ಏನು ಮಾಡಿದನು?

೬. ಹರ್ಷವರ್ಧನನು ದಕ್ಷಿಣಭಾರತವನ್ನು ಗೆಲ್ಲಬೇಕೆಂದು ಯಾರ ಸಂಗಡ ಯುದ್ಧಮಾಡಿದನು?

೭. ಹರ್ಷವರ್ಧನನು ಮಾಡಿದ ಜನಹಿತದ ಕಾರ್ಯಗಳಾವುವು?

೮. ಹರ್ಷನು ಬರೆದ ನಾಟಕಗಳಾವುವು?

೯. ಹರ್ಷನ ಕಾಲಕ್ಕೆ ಭಾರತದ ಸ್ಥಿತಿಯನ್ನು ನೋಡಿ, ಹುವೆನ್‌ತ್ಸಾಂಗನು ಬರೆದ ಸಂಗತಿಗಳನ್ನು, ನಿಮ್ಮ ಮಾತುಗಳಲ್ಲಿ ಹೇಳಿರಿ.

೧೦. ಹರ್ಷನ ಗುಣಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.



# ೧೦. ಇಮ್ಮಡಿ ಪುಲಿಕೇಶಿ

'ಇಮ್ಮಡಿ ಪುಲಿಕೇಶಿ' ಎಂದರೆ, 'ಎರಡನೆಯ ಪುಲಿಕೇಶಿ' ಎಂದರ್ಥ. ಇವನು ಬಾದಾಮಿಯ ಚಾಲುಕ್ಯ ಮನೆತನದಲ್ಲಿ ತುಂಬ ಪ್ರಸಿದ್ಧಿಯನ್ನು ಪಡೆದ ಸಾರ್ವಭೌಮನು. ಒಂದನೆಯ ಪುಲಿಕೇಶಿಯು ಈತನ ಅಜ್ಜನು. ಅವನಿಗೆ ಕೀರ್ತಿವರ್ಮ, ಮಂಗಳೇಶ ಎಂದು ಇಬ್ಬರು ಮಕ್ಕಳಿದ್ದರು. ಕೀರ್ತಿವರ್ಮನ ಮಗನೇ ಇಮ್ಮಡಿ ಪುಲಿಕೇಶಿ. ಇವನು ತನ್ನ ಪರಾಕ್ರಮ-ಸಾಹಸಗಳಿಂದ, ಬಾದಾಮಿಯ ಚಾಲುಕ್ಯರ ಚಿಕ್ಕದಾದ ರಾಜ್ಯವನ್ನು ವಿಸ್ತಾರವಾದ ಸಾಮ್ರಾಜ್ಯವನ್ನಾಗಿ ಮಾಡಿದನು; ದೇಶ-ವಿದೇಶಗಳಲ್ಲಿಯೂ ತನ್ನ ಕೀರ್ತಿ-ಪ್ರತಾಪಗಳನ್ನು ಹಬ್ಬಿಸಿದನು.

ಕೀರ್ತಿವರ್ಮನು ತೀರಿಕೊಂಡಾಗ ಪುಲಿಕೇಶಿ ಇನ್ನೂ ಹಸುಮಗುವಾಗಿ-ದ್ದನು. ಆದುದರಿಂದ ಕೀರ್ತಿವರ್ಮನ ತಮ್ಮನಾದ ಮಂಗಳೇಶನೇ ರಾಜ್ಯಕಾರ ಭಾರವನ್ನು ನೋಡಿಕೊಳ್ಳತೊಡಗಿದನು. ಮಂಗಳೇಶನೂ ಸಾಮಾನ್ಯ ಮನುಷ್ಯ ನಾಗಿರಲಿಲ್ಲ; ಶೂರನೂ, ಆಡಳಿತದಲ್ಲಿ ನಿಪುಣನೂ ಆಗಿದ್ದನು. ಅವನು ವಿರೋಧಿಗಳನ್ನೆಲ್ಲ ಹತ್ತಿಕ್ಕಿ ಅವರನ್ನು ತನ್ನ ಆಧೀನಪಡಿಸಿಕೊಂಡನು. ರಾಜ್ಯ ದಲ್ಲೆಲ್ಲ ಸುಖ-ಸಮಾಧಾನಗಳು ನೆಲೆಸುವಂತೆ ಮಾಡಿದನು. ಬಾದಾಮಿಯಲ್ಲಿ 'ಮೇಣಬಸತಿ'ಗಳನ್ನು ಕೊರೆಸಿದವನು ಈ ಮಂಗಳೇಶನೆ. ಗುಡ್ಡದಲ್ಲಿಯ ಬಂಡೆಗಳನ್ನೆ ಕೊರೆದು ಅಲ್ಲಿ ಸುಂದರವಾದ ಗವಿಗುಡಿಗಳನ್ನು ನಿರ್ಮಿಸಿದ್ದಾರೆ.

ಪುಲಿಕೇಶಿಯು ಬೆಳೆದು ದೊಡ್ಡವನಾದನು. ಆದರೆ ಮಂಗಳೇಶನು ಅವನಿಗೆ ರಾಜ್ಯವನ್ನು ಒಪ್ಪಿಸಲಿಲ್ಲ. 'ಅನಾಯಾಸವಾಗಿ ಸಿಕ್ಕಿರುವ ಅಧಿಕಾರ ವನ್ನು ಕಳೆದುಕೊಳ್ಳಬೇಕೇಕೆ?' ಎಂಬ ದುರಾಶೆ ಮಂಗಳೇಶನಿಗೆ. ಅಲ್ಲದೆ ತನ್ನ ತರುವಾಯ ಬಾದಾಮಿಯ ರಾಜ್ಯಕ್ಕೆ ತನ್ನ ಮಗನು ಅಧಿಕಾರಿಯಾಗ-ಬೇಕು ಎಂಬ ಆಶೆ ಅವನಿಗೆ.

ಪುಲಿಕೇಶಿ ಈ ವಿಷಯವನ್ನೆಲ್ಲ ಸೂಕ್ಷ್ಮವಾಗಿ ನೋಡಿ ತಿಳಿದುಕೊಂಡನು. ತನ್ನ ಸಾಮರ್ಥ್ಯವನ್ನು ಪ್ರಕಟಿಸದೆ ತನ್ನ ರಾಜ್ಯವು ತನಗೆ ದೊರೆಯದು— ಎಂಬುದನ್ನು ಅರಿತುಕೊಂಡನು. ಚತುರನಾದ ಪುಲಿಕೇಶಿ, ಮಂಗಳೇಶನಿಗೆ ಗೊತ್ತಾಗದಂತೆ ಗುಪ್ತರೀತಿಯಿಂದ ಸೈನ್ಯವನ್ನು ಕೂಡಿಸಿದನು. ಮಂಗಳೇಶನ ಅನ್ಯಾಯವನ್ನು ಸಹಿಸದೆ, ಅನೇಕ ಜನರು ತರುಣ ಪುಲಿಕೇಶಿಗೆ ತುಂಬ ಸಹಾಯ ನೀಡಿದರು.

ಪುಲಿಕೇಶಿ ತನ್ನ ಸೈನ್ಯವನ್ನು ತೆಗೆದುಕೊಂಡು ಮಂಗಳೇಶನ ಮೇಲೆ ಸಾಗಿಬಂದನು. ಮಂಗಳೇಶನಿಗೆ ಈ ವರ್ತಮಾನವು ತಿಳಿಯಿತು. ಅವನೂ

ದೊಡ್ಡ ಸೈನ್ಯವನ್ನು ತೆಗೆದುಕೊಂಡು ಪುಲಿಕೇಶಿಯನ್ನು ಎದುರಿಸಿದನು. ಚಿಕ್ಕಪ್ಪ, ಮಗ ಇವರ ನಡುವೆ ಘನಘೋರವಾದ ಯುದ್ಧ ನಡೆಯಿತು. ಮಂಗಳೇಶನ ಸೈನ್ಯ ಸೋತು ಹಿಂಜರಿಯಿತು. ಮಂಗಳೇಶನು ಯುದ್ಧದಲ್ಲಿ ಸತ್ತುಹೋದನು. ಕ್ರಿ. ಶ. ೬೦೯ರಲ್ಲಿ ಪುಲಿಕೇಶಿಯು ತನ್ನದೇ ಆದ ಚಾಲುಕ್ಯ ಸಿಂಹಾಸನದ ಮೇಲೆ ಕುಳಿತುಕೊಂಡನು.



ಇರಾನ ದೇಶದ ರಾಯಭಾರಿಗಳು ಪುಲಿಕೇಶಿಯ ಬಳಿಗೆ ಬಂದರು

ಪುಲಿಕೇಶಿ ಬಲು ಶೂರ, ಸಾಹಸಿ. ನೋಡು-ನೋಡುವಷ್ಟರಲ್ಲಿಯೆ ಕರ್ನಾಟಕದೊಳಗಿನ ಎಲ್ಲ ರಾಜರನ್ನು ಗೆದ್ದು, ಅವರನ್ನೆಲ್ಲ ತನ್ನ ಅಧೀನರನ್ನಾಗಿ

ಮಾಡಿಕೊಂಡನು. ದಕ್ಷಿಣದಲ್ಲಿಯ ಚೋಳ, ಚೇರ, ಪಾಂಡ್ಯ, ಕೇರಳ, ಪಲ್ಲವ ಮೊದಲಾದ ಅರಸರು ಇವನ ಮಾಂಡಲಿಕರಾದರು. ಉತ್ತರದಲ್ಲಿ ಗುರ್ಜರ-ಮಾಳವ-ಲಾಟ-ಕೋಸಲ ದೇಶಗಳ ಅರಸರನ್ನೂ ಇವನು ಹಣ್ಣಿಗೆ ತಂದನು. ಅವರೂ ಚಾಲುಕ್ಯ ಸಾಮ್ರಾಜ್ಯದ ಆಧಿಪತ್ಯವನ್ನು ಒಪ್ಪಿದರು. ನರ್ಮದೆಯಿಂದ ಸಿಂಹಳದ್ವೀಪದ ವರೆಗಿನ ದಕ್ಷಿಣಭಾರತವನ್ನೆಲ್ಲ ಗೆದ್ದು ಪುಲಿಕೇಶಿಯು ಸಾರ್ವಭೌಮನಾದನು.

ದಕ್ಷಿಣದಲ್ಲಿ ಪುಲಿಕೇಶಿಯು ಆಳುತ್ತಿದ್ದಾಗ, ಉತ್ತರಭಾರತದಲ್ಲಿ ಹರ್ಷವರ್ಧನನು ಆಳುತ್ತಿದ್ದನು. ಅವನು ದಕ್ಷಿಣಭಾರತವನ್ನು ಗೆಲ್ಲಬೇಕೆಂದು ಹೊಂಚುಹಾಕಿದ್ದನು. ಒಂದು ದೊಡ್ಡ ದಂಡಿನೊಡನೆ ಅವನು ಪುಲಿಕೇಶಿಯ ಮೇಲೆ ಸಾಗಿಬಂದನು. ಗಂಡುಗಲಿಯಾದ ಪುಲಿಕೇಶಿಯು ಈ ದೊಡ್ಡ ದಂಡನ್ನು ನರ್ಮದಾ ನದಿಯ ದಂಡೆಯ ಮೇಲೆ ತರುಬಿದನು. ಅಲ್ಲಿ ಎರಡೂ ದಂಡುಗಳ ನಡುವೆ ಭೀಕರವಾದ ಯುದ್ಧವಾಯಿತು. ಪುಲಿಕೇಶಿಯ 'ಕರ್ನಾಟಕದ ಬಲ'ದ ಹೊಡೆತಕ್ಕೆ ಹರ್ಷವರ್ಧನನ ಸೈನಿಕರು ರಣದಲ್ಲಿ ಪಟಪಟನೆ ಬಿದ್ದರು. ಆಗ ಹರ್ಷವರ್ಧನನು ಸೋತು ಓಡಿಹೋದನು. ಮುಂದೆ ಅವನು ಪುಲಿಕೇಶಿಯ ಮೇಲೆ ದಂಡೆತ್ತಿ ಬರಲು ಎಂದೂ ಹವಣಿಸಲಿಲ್ಲ. ಹರ್ಷವರ್ಧನನೊಡನೆ ಯುದ್ಧಮಾಡಿ ಜಯಸಂಪಾದಿಸಿದುದಕ್ಕಾಗಿ, ಪುಲಿಕೇಶಿಯು 'ಪರಮೇಶ್ವರ' ಎಂಬ ಬಿರುದನ್ನು ಧರಿಸಿದನು. 'ಸತ್ಯಾಶ್ರಯ' ಎಂಬ ಮತ್ತೊಂದು ಬಿರುದೂ ಆತನಿಗೆ ಇತ್ತು. ಆ ಕಾಲದಲ್ಲಿ ಇಡಿ ಭಾರತದಲ್ಲಿ ಪುಲಿಕೇಶಿಯನ್ನು ಎದುರಿಸುವವರು ಯಾರೂ ಇರಲಿಲ್ಲ.

ಪುಲಿಕೇಶಿಯ ಕಾಲದಲ್ಲಿ ಕರ್ನಾಟಕದ ಕೀರ್ತಿಯು ಭಾರತದಲ್ಲಿ ಅಷ್ಟೇ ಅಲ್ಲದೆ ಬೇರೆ ದೇಶಗಳಲ್ಲಿಯೂ ಹಬ್ಬಿತು. ಇವನ ಪರಾಕ್ರಮವನ್ನು ಕೇಳಿ ಇರಾಣದ ಅರಸನಾದ ಖುಸ್ರುವು ತನ್ನ ರಾಯಭಾರಿಯನ್ನು ಇವನಲ್ಲಿಗೆ ಕಳುಹಿದನು. ಕಾಣಿಕೆಯನ್ನು ಕೊಟ್ಟು ಆತನು ಪುಲಿಕೇಶಿಯ ಸ್ನೇಹವನ್ನು ಸಂಪಾದಿಸಿದನು.

ಪುಲಿಕೇಶಿಯ ಕಾಲವೆಂದರೆ 'ಕರ್ನಾಟಕದ ಸುವರ್ಣಕಾಲ' ಎಂದು ಹೇಳಬಹುದು. ಇವನ ಆಳಿಕೆಯಲ್ಲಿ ಚೀನದ ಪ್ರವಾಸಿಯಾದ ಹುವೆನ್ ತ್ಸಾಂಗನು (ಇವನಿಗೆ ಯವನ್‌ಚಂಗ್ ಎಂದೂ ಕರೆಯುವರು) ಬಾದಾಮಿಗೆ ಬಂದಿದ್ದನು. ಇವನು ಆಗಿನ ಕರ್ನಾಟಕದ ಸ್ಥಿತಿಯನ್ನು ಕಣ್ಣಾರೆ ಕಂಡು ಹೀಗೆ ಬರೆದಿದ್ದಾನೆ:—"ಈ ರಾಜಧಾನಿಯ ಸುತ್ತಳತೆ ಆರು ಮೈಲು. ಇಲ್ಲಿಯ ಭೂಮಿಯು ಬೆಳೆಯುಳ್ಳದ್ದು. ಹವೆಯು ಸೆಕೆಯುಳ್ಳದ್ದು. ಜನರು ಪ್ರಾಮಾಣಿಕರು, ಸ್ವಾಭಿಮಾನಿಗಳು; ಮುಯ್ಯಕ್ಕೆ ಮುಯ್ಯ ತೀರಿಸಿಕೊಳ್ಳುವವರು.

ಅಪಮಾನವಾದರೆ ಪ್ರಾಣದ ಹಂಗು ಬಿಡುವವರು. ಮಾನವೇ ಇವರ ಧನ. ಸಂಕಟಕಾಲದಲ್ಲಿ ಇವರು ಒಬ್ಬರಿಗೊಬ್ಬರು ನೆರವಾಗುವರು. ಓಡಿಹೋಗುವ ಶತ್ರುಗಳನ್ನು ಇವರು ಎಂದೂ ಕೊಲ್ಲರು. ನಿಲುವಿಕೆಯಲ್ಲಿ ಜನರು ಎತ್ತರ ವಾದವರು. ಇಲ್ಲಿಯ ಅರಸನ ಹತ್ತಿರ ಸಾವಿರಾರು ಆನೆಗಳೂ ಲಕ್ಷಾವಧಿ ಶೂರ ದಂಡಾಳುಗಳೂ ಇರುವರು."

ಹೀಗೆ ವೈಭವದಿಂದ ಪುಲಿಕೇಶಿಯು ಮೂವತ್ತು ಮೂರು ವರುಷಗಳವರೆಗೆ ರಾಜ್ಯವನ್ನು ಆಳಿದನು. ಮೊದಲಿನಿಂದಲೂ ಚಾಲುಕ್ಯರ ವೈರಿಯಾಗಿದ್ದ ಪಲ್ಲವರಾಜ ನರಸಿಂಹವರ್ಮನು, ದೊಡ್ಡದಂಡಿನೊಡನೆ ಬಾದಾಮಿಯನ್ನು ಮುತ್ತಿದನು. ಈ ಯುದ್ಧದಲ್ಲಿ ಪುಲಿಕೇಶಿಯು ಕ್ರಿ. ಶ. ೬೪೨ರಲ್ಲಿ ಮಡಿದನು.

ಪುಲಿಕೇಶಿಯು ಸತ್ತುಹೋಗಿದ್ದರೂ ಅವನ ಕೀರ್ತಿಯು ಅಳಿದಿಲ್ಲ. ಅವನು ಅಜಂತೆಯ ಗವಿಗಳಲ್ಲಿ ಕೊರೆಸಿದ ತರತರದ ಚಿತ್ರಗಳು ಇನ್ನೂ ಅಚ್ಚಳಿಯದೆ ಉಳಿದಿರುವವು. ದೇಶ-ವಿದೇಶಗಳಪ್ರವಾಸಿಕರು ಬಂದು ಅವುಗಳನ್ನು ನೋಡಿ ಆಶ್ಚರ್ಯಪಡುತ್ತಾರೆ. ಪುಲಿಕೇಶಿಯ ಕೀರ್ತಿಯನ್ನು ಬೆಳಗಿಸುವ ಶಿಲಾಲೇಖಗಳು ಐಹೊಳೆ-ಪಟ್ಟದಕಲ್ಲುಗಳಲ್ಲಿ ಈಗಲೂ ಇವೆ.

## ಅಭ್ಯಸನಗಳು

೧. ಪುಲಿಕೇಶಿಯ ತಂದೆ ಯಾರು? ತಂದೆಯು ತೀರಿಕೊಂಡನಂತರ ರಾಜ್ಯಭಾರ ವನ್ನು ಯಾರು ನೋಡುತ್ತಿದ್ದರು?

೨. ಪುಲಿಕೇಶಿಯು ತನ್ನ ಕಕ್ಕನಾದ ಮಂಗಳೇಶನ ಕೂಡ ಪಟ್ಟಕ್ಕಾಗಿ ಯುದ್ಧ ವನ್ನು ಏಕೆ ಮಾಬೇಕಾಯಿತು?

೩. ಪುಲಿಕೇಶಿಯು ಅರಸನಾದ ಮೇಲೆ ಯಾವ ಯಾವ ರಾಜರನ್ನು ಗೆದ್ದನು?

೪. ಪುಲಿಕೇಶಿಯು ಧರಿಸಿದ ಬಿರುದುಗಳು ಯಾವುವು?

೫. ಹುವೆನ್‌ತ್ಸಾಂಗನು ಬರೆದಿಟ್ಟ ಕರ್ನಾಟಕದ ವೃತ್ತಾಂತವನ್ನು ನಿಮ್ಮ ಮಾತು ಗಳಲ್ಲಿ ಬರೆಯಿರಿ.

೬. ಕೆಳಗೆ ಕೆಲವು ವ್ಯಕ್ತಿಗಳನ್ನೂ ಮತ್ತು ಅವರಿಗೆ ಸಂಬಂಧಿಸಿದ ಸಂಗತಿಗಳನ್ನೂ ಕೊಟ್ಟಿದೆ. ಅವುಗಳನ್ನು ಹೊಂದಿಸಿ ಬರೆಯಿರಿ.

| ವ್ಯಕ್ತಿಗಳು | ಸಂಗತಿಗಳು |
|---|---|
| ೧. ಹರ್ಷವರ್ಧನ | ೧. ಚಾಲುಕ್ಯರ ಮೂಲಪುರುಷ |
| ೨. ಜಯಸಿಂಹ | ೨. ಬಾದಾಮಿಯ ಗುಡ್ಡದಲ್ಲಿ ಬಸದಿಗಳನ್ನು ಕೊರೆಸಿದನು. |
| ೩. ಹುವೆನ್‌ತ್ಸಾಂಗ | ೩. ಪುಲಿಕೇಶಿಯ ಸ್ನೇಹಬಯಸಿದ ಅರಸು |
| ೪. ಮಂಗಳೇಶ | ೪. ಚೀನದೇಶದ ಪ್ರವಾಸಿಯು. |
| ೫. ಖುಸ್ರು | ೫. ಪುಲಿಕೇಶಿಗೆ ಸೋತ ಉತ್ತರದೇಶದ ಪ್ರಸಿದ್ಧ ಅರಸನು. |

# ೧೧. ವನರಾಜ

ಸುಮಾರು ೧೨೦೦ ವರ್ಷಗಳ ಹಿಂದಿನ ಮಾತು. ಸೌರಾಷ್ಟ್ರದಲ್ಲಿ ಈಗಿನ ರಾಧನಪುರ ಎಂಬ ಪಟ್ಟಣದ ನೆರೆಯಲ್ಲಿ ಆಗ ಚಂಪಾಸರ ಎಂಬುದೊಂದು ರಾಜಧಾನಿ ಇತ್ತು. ಅಲ್ಲಿ "ಜಯಶಿಖರಿ" ಎಂಬ ಶೂರನಾದ ಅರಸನು ರಾಜ್ಯವಾಳುತ್ತಿದ್ದನು. ಆಗ ಕಲ್ಯಾಣದಲ್ಲಿ ಭುವಡ ಎಂಬ ರಾಜನು ಆಳುತ್ತಿದ್ದನು. ಗುಜರಾತ ದೇಶದ ಒಬ್ಬ ಭಟ್ಟಂಗಿಯು ಒಮ್ಮೆ ಭುವಡನ ಓಲಗಕ್ಕೆ ಹೋಗಿದ್ದನು; ಅಲ್ಲಿ ಅವನು ಜಯಶಿಖರಿಯ ಶೌರ್ಯವನ್ನೂ ಗುಜರಾತದ ಸಂಪತ್ತನ್ನೂ ಹೊಗಳಿ ಕವನಗಳನ್ನು ಹಾಡಿದನು. ಅವುಗಳನ್ನು ಕೇಳಿ ಭುವಡನಿಗೆ ಗುಜರಾತದ ಮೇಲೆ ಆಶೆ ಹುಟ್ಟಿತು. ಜಯಶಿಖರಿಯನ್ನು ಸೋಲಿಸಿ ಗುಜರಾತವನ್ನು ಲೂಟಿ ಮಾಡಲು, ಮಿಹಿರ ಎಂಬ ತನ್ನ ಒಬ್ಬ ಸರದಾರನನ್ನು ಅವನು ಕಳುಹಿದನು.



ಮಿಹಿರನು ದೊಡ್ಡ ಸೈನ್ಯದೊಡನೆ ಗುಜರಾತದ ಕಡೆಗೆ ಹೊರಟನು. ಹಾದಿಯಲ್ಲಿ ಸಿಕ್ಕ ಊರುಗಳನ್ನು ಸುಲಿದನು. ಹೆಂಗಸರು-ಮಕ್ಕಳನ್ನು ಸೆರೆ ಹಿಡಿದನು. ಜನರಿಗೆ ನಾನಾಬಗೆಯ ತೊಂದರೆಗಳನ್ನು ಕೊಟ್ಟನು. ಇದನ್ನು ಕೇಳಿ ಜಯಶಿಖರಿಯು ಕಿಡಿಕಿಡಿಯಾದನು. ಮಿಹಿರನನ್ನು ಎದುರಿಸಲು ಅವನು

ಸುರಪಾಲ ಎಂಬ ತನ್ನ ಆಪ್ತಬಂಧುವನ್ನು ಕಳುಹಿದನು. ಸುರಪಾಲನು ಮಿಹಿರನನ್ನು ಸೋಲಿಸಿ ಓಡಿಸಿದನು.

ಭುವಡರಾಜನಿಗೆ ಈ ಸಂಗತಿಯು ತಿಳಿಯುತ್ತಲೆ, ಅವನು ದೊಡ್ಡ ಸೈನ್ಯದೊಡನೆ ತಾನೇ ಚಂಪಾಸರದ ಮೇಲೆ ದಂಡೆತ್ತಿ ಬಂದನು. ಆದರೂ ಶೂರನಾದ ಜಯಶಿಖರಿಯು ಇವನಿಗೆ ಮಣಿಯಲಿಲ್ಲ. ಆಗ ಭುವಡನು "ಯುದ್ಧದಲ್ಲಿ ಮಡಿಯುವೆ, ಇಲ್ಲವೆ ಜಯಶಾಲಿಯಾಗುವೆ" ಎಂದು ಪಣತೊಟ್ಟು ಚಂಪಾಸರದ ಮುತ್ತಿಗೆಯನ್ನು ಮುಂದುವರಿಸಿದನು. ಜಯಶಿಖರಿಗೆ ಬೇರೆ ಗತಿಯಿಲ್ಲದಾಯಿತು. ಅವನು ಗರ್ಭವತಿಯಾದ ತನ್ನ ಹೆಂಡತಿ ರೂಪಸುಂದರಿಯನ್ನು, ಆಕೆಯ ಅಣ್ಣನಾದ ಸುರಪಾಲನೊಡನೆ ಗುಪ್ತವಾಗಿ ಅಡವಿಗೆ ಕಳುಹಿದನು. ತಾನು ತನ್ನ ಶೂರಸೈನಿಕರೊಂದಿಗೆ ಕೋಟೆಯಿಂದ ಹೊರಬಿದ್ದು ಯುದ್ಧಮಾಡಲಾರಂಭಿಸಿದನು. ಆದರೆ ಯುದ್ಧದಲ್ಲಿ ಜಯಶಿಖರಿಯು ಮಡಿದನು. ಚಂಪಾಸರವು ಭುವಡನ ಕೈವಶವಾಯಿತು.

ಅತ್ತ ಸುರಪಾಲ ಮತ್ತು ರೂಪಸುಂದರಿಯರು ಅಡವಿಯಲ್ಲಿ ಅಲೆಯುತ್ತಿರುವಾಗ, ಭಿಲ್ಲಜನರು ಅವರನ್ನು ಕಂಡು ಆಶ್ರಯಕೊಟ್ಟರು. ಕೆಲವು ದಿನಗಳಲ್ಲಿಯೇ ರೂಪಸುಂದರಿಯು ಒಂದು ಗಂಡುಮಗುವನ್ನು ಹೆತ್ತಳು. ಕೂಸು ಎಲ್ಲ ರಾಜಲಕ್ಷಣಗಳಿಂದ ಶೋಭಿಸುತ್ತಿತ್ತು. ಆ ಕೂಸೇ ವನರಾಜ.

ಬಾಲಕ ವನರಾಜನು ಬೆಳೆದು ದೊಡ್ಡವನಾದಂತೆ, ಶೌರ್ಯ-ಸಾಹಸದ ಕೆಲಸಗಳಲ್ಲಿ ಹೆಚ್ಚು ಮನಸ್ಸುಹಾಕಿದನು. ಭಿಲ್ಲಜನರಿಂದ ಬಿಲ್ಲುವಿದ್ಯೆಯನ್ನು ಕಲಿತುಕೊಂಡನು. ಅವನ ಮಾವನಾದ ಸುರಪಾಲನು ಯುದ್ಧದ ಕಥೆಗಳನ್ನು ವಿವರಿಸಿ ಅವನನ್ನು ಹುರಿದುಂಬಿಸುತ್ತಿದ್ದನು.

ಒಮ್ಮೆ ಶೀಲಗುಣಸೂರಿ ಎಂಬ ಜೈನಸಾಧುವು ಬಾಲಕ ವನರಾಜನನ್ನು ಕಂಡನು. ಬಾಲಕನು ರಾಜಲಕ್ಷಣ ಉಳ್ಳವನಾಗಿದ್ದುದನ್ನು ನೋಡಿ, ಅವನನ್ನೂ ಅವನ ತಾಯಿ ರೂಪಸುಂದರಿಯನ್ನೂ ತನ್ನ ಸಂಗಡ ಕರೆದುಕೊಂಡು ಹೋಗಿ ಜೋಪಾನ ಮಾಡಿದನು.

ವನರಾಜನು ಹರಯಕ್ಕೆ ಬರುತ್ತಲೆ, ತನ್ನ ತಂದೆಯ ರಾಜ್ಯವನ್ನು ತಿರುಗಿ ಸಂಪಾದಿಸಲು ಯತ್ನಿಸತೊಡಗಿದನು. ಆದರೆ ಅವನಲ್ಲಿ ಹಣವಿರಲಿಲ್ಲ. ಅವನ ಜೊತೆಗೆ ಜನರಿರಲಿಲ್ಲ. ಹಣವಿಲ್ಲದೆ ದೊಡ್ಡ ಸೈನ್ಯವನ್ನು ಸಿದ್ಧಪಡಿಸುವುದು ಹೇಗೆ? ಆದುದರಿಂದ ಅವನು ಚಿಕ್ಕಪುಟ್ಟ ಕಳವು-ಸುಲಿಗೆಗಳಿಂದ ಹಣ ಕೂಡಹಾಕಲು ಪ್ರಾರಂಭಿಸಿದನು. ಬರುಬರುತ್ತ ಅಮೀರ-ಉಮರಾವರ ಖಜಾನೆಗಳನ್ನೂ ಸುಲಿಯ ಹತ್ತಿದನು. ಒಮ್ಮೆ, ಭುವಡನ ಖಜಾನೆಯನ್ನು ಕಲ್ಯಾಣದ ಕಡೆಗೆ ಒಯ್ಯುತ್ತಿದ್ದ ಸುದ್ದಿಯು ವನರಾಜನಿಗೆ ತಿಳಿಯಿತು. ಕೂಡಲೆ ಅವನು

ತನ್ನ ಸಂಗಡಿಗರನ್ನು ಕೂಡಿಕೊಂಡು ಹೊಗಿ, ಆ ಖಜಾನೆಯನ್ನು ಪೂರ್ಣವಾಗಿ ಸುಲಿದುಬಿಟ್ಟನು. ಇದರಿಂದ ಇವನಿಗೆ ಅಪಾರವಾದ ಸಂಪತ್ತು ದೊರೆಯಿತು.

ಹೀಗೆ ವನರಾಜನು ದ್ರವ್ಯಸಂಗ್ರಹಮಾಡಿ, ಅವರ ನೆರವಿನಿಂದ ದೊಡ್ಡ ಸೈನ್ಯವನ್ನು ಸಿದ್ಧಗೊಳಿಸಿದನು. ಇವನಿಗೆ ಅಣಹಿಲ ಎಂಬ ಒಬ್ಬ ಚತುರನಾದ ಕುರುಬನೂ ಚಾಪಾ ಎಂಬ ಶ್ರೀಮಂತ ವ್ಯಾಪಾರಿಯೂ ತುಂಬ ಸಹಾಯಕ ರಾಗಿದ್ದರು. ಅಣಹಿಲನು ಅಡವಿಯಲ್ಲಿ ತಿರುಗಿ ಒಂದು ಒಳ್ಳೆಯ ಸ್ಥಳವನ್ನು ಹುಡುಕಿದನು. ಅಲ್ಲಿಯೆ ವನರಾಜನು ಹೊಸದೊಂದು ರಾಜಧಾನಿಯನ್ನು ಕಟ್ಟಿಸಿದನು. ಚಾಪಾನು ಹಣದ ಸಹಾಯ ಮಾಡಿದನು. ಸುರಪಾಲನಂತೂ ಯಾವಾಗಲೂ ಬೆಂಬಲಿಗನಾಗಿದ್ದನು.

ವನರಾಜನು ಕ್ರಮೇಣ ಗುಜರಾತದ ಎಲ್ಲ ಭಾಗಗಳನ್ನೂ ಮರಳಿ ಗೆದ್ದು ಕೊಂಡನು. ತಾನು ಕಟ್ಟಿಸಿದ ರಾಜಧಾನಿಗೆ "ಅಣಹಿಲವಾಡ" ಎಂದು ತನ್ನ ಗೆಳೆಯನ ಹೆಸರನ್ನೇ ಇಟ್ಟನು. ಅದೇ "ಪಾಟಣ" ಎಂದು ಈಗ ಹೆಸರನ್ನು ಪಡೆದಿದೆ. ತನ್ನ ಇನ್ನೊಬ್ಬ ಗೆಳೆಯನಾದ ಚಾಪಾನ ಹೆಸರಿನಿಂದ "ಚಾಪಾನೇರ" ಎಂಬ ಮತ್ತೊಂದು ಹೊಸ ನಗರವನ್ನು ಕಟ್ಟಿಸಿದನು. ಬಾಲ್ಯದಲ್ಲಿ ತನಗೂ ತನ್ನ ತಾಯಿಗೂ ನೆರವು ಕೊಟ್ಟ ಶೀಲಗುಣಸೂರಿಸಾಧುವಿನ ಸ್ಮರಣಾರ್ಥವಾಗಿ, ಚಂಪಾಸರಾ ಎಂಬಲ್ಲಿ ಪಾರಸನಾಥನ ಬಸದಿಯನ್ನು ಕಟ್ಟಿಸಿದನು.

ವನರಾಜನು ಪ್ರಜೆಗಳಿಗೆ ಬಹಳ ಪ್ರೀತಿಯವನಾಗಿದ್ದನು. ಆದುದರಿಂದ ಅವರು ವನರಾಜನ ಮೂರ್ತಿಯನ್ನು ಮಾಡಿಸಿ ಪಾರಸನಾಥನ ಬಸದಿಯಲ್ಲಿ ಇರಿಸಿದನು. ಅದು ಈಗಲೂ ನೋಡಲು ಸಿಗುವುದು.

## ಅಭ್ಯಾಸನಗಳು

೧. 'ಜಯಶಿಖರಿ' ಎಂಬ ಅರಸನು ಎಲ್ಲಿ ರಾಜ್ಯವಾಳುತ್ತಿದ್ದನು?
೨. ಕಲ್ಯಾಣದ ಅರಸನಾದ ಭುವಡನಿಗೆ ಗುಜರಾತನ್ನು ಗೆಲ್ಲಬೇಕೆಂಬ ಆಸೆಯು ಏಕೆ ಹುಟ್ಟಿತು?
೩. ವನರಾಜನು ಎಲ್ಲಿ ಹುಟ್ಟಿದನು?
೪. ವನರಾಜನು ತನ್ನ ತಂದೆಯ ರಾಜ್ಯವನ್ನು ತಿರುಗಿ ಗಳಿಸಲು ಯಾವ ಯಾವ ಪ್ರಯತ್ನಗಳನ್ನು ಮಾಡಿದನು?
೫. ವನರಾಜನಿಗೆ ಈ ಕೆಲಸದಲ್ಲಿ ಸಹಾಯಕರು ಯಾರಾಗಿದ್ದರು?
೬. ವನರಾಜನು ಕಟ್ಟಿಸಿದ ರಾಜಧಾನಿಯು ಯಾವುದು?
೭. ವನರಾಜನು ತನಗೆ ಸಹಾಯ ಮಾಡಿದ ಗುಣಸೂರಿ ಸಾಧುವಿನ ಸ್ಮರಣಾರ್ಥ ವಾಗಿ ಏನು ಮಾಡಿದನು?
೮. ವನರಾಜನ ಮೂರ್ತಿಯನ್ನು ಪ್ರಜೆಗಳು ಏಕೆ ಪೂಜಿಸುತ್ತಿದ್ದರು?

# ೧೨. ಸಿದ್ಧರಾಜ ಜಯಸಿಂಹ

(ಸುಮಾರು ೮೦೦ ವರ್ಷಗಳ ಹಿಂದೆ)

ಪಾಟಣವು ಸೌರಾಷ್ಟ್ರದಲ್ಲಿಯ ಒಂದು ಪಟ್ಟಣ. ಅದನ್ನೇ ಮೊದಲು "ಅಣಹಿಲವಾಡ" ಎಂದು ಕರೆಯುತ್ತಿದ್ದರು. ಇಲ್ಲಿ ಸುಮಾರು ೮೦೦ ವರ್ಷಗಳ ಹಿಂದೆ ಕರ್ಣದೇವ ಎಂಬ ಅರಸನು ಆಳುತ್ತಿದ್ದನು. ಅವನದು ಸೋಲಂಕಿ ಮನೆತನ. ಅವನಿಗೆ ಮಿನಲದೇವಿ ಎಂಬ ರಾಣಿಯಿದ್ದಳು. ಅವಳು ಒಳ್ಳೆಯ



ಸಿದ್ಧರಾಜ ಜಯಸಿಂಹ

ಚತುರಳು, ನ್ಯಾಯ-ನೀತಿಗಳನ್ನು ಬಲ್ಲವಳು. ಆಕೆ ತುಂಬ ಧರ್ಮಿಷ್ಠಳೂ ಅಹುದು. ಅವಳ ಹೊಟ್ಟೆಯಿಂದ ಒಬ್ಬ ವೀರಪುತ್ರನು ಜನಿಸಿದನು. ಅವನೇ "ಸಿದ್ಧರಾಜ ಜಯಸಿಂಹ" ಎಂದು ಪ್ರಸಿದ್ಧ ಅರಸನಾದನು.

ಒಂದು ದಿನ ಕರ್ಣದೇವನಿಗೆ ತನ್ನ ಒಡ್ಡೋಲಗಕ್ಕೆ ಹೋಗಲು ಸ್ವಲ್ಪ ತಡವಾಯಿತು. ಆಸ್ಥಾನದೊಳಗಿನ ಎಲ್ಲ ಜನರೂ ಅರಸನ ಬರುವಿಕೆಯನ್ನು ನಿರೀಕ್ಷಿಸುತ್ತ ಕುಳಿತಿದ್ದರು. ಆಗ ಕುಮಾರ ಸಿದ್ಧರಾಜನು ತಾನೇ ಸಿಂಹಾಸನದ

ಮೇಲೆ ಕುಳಿತುಬಿಟ್ಟನು. ಅಷ್ಟರಲ್ಲಿಯೇ ಕರ್ಣದೇವನು ಬಂದನು. ಮಗನು ಸಿಂಹಾಸನದ ಮೇಲೆ ಕುಳಿತುದನ್ನು ಕಂಡು ಅವನಿಗೆ ಅಚ್ಚರಿಯಾಯಿತು. ಕೂಡಲೆ ಅವನು ಜ್ಯೋತಿಷಿಗಳನ್ನು ಕರೆಸಿ ಮಗನ ಸಿಂಹಾಸನಾರೋಹಣದ ಶುಭಮುಹೂರ್ತವನ್ನು ಕೇಳಿದನು. "ರಾಜಕುಮಾರನು ಈಗ ಸಿಂಹಾಸನವನ್ನು ಏರಿದುದೇ ಒಳ್ಳೆಯ ಮುಹೂರ್ತವಾಗಿರುತ್ತದೆ" ಎಂದು ಜ್ಯೋತಿಷಿಗಳು ಹೇಳಿದರು. ಆದುದರಿಂದ ಅರಸನು ಅಂದಿನಿಂದಲೇ ಸಿದ್ಧರಾಜನನ್ನು ಪಟ್ಟದಮೇಲೆ ಕುಳ್ಳಿರಿಸಿ, ಅವನ ಹೆಸರಿನಿಂದ ತಾನು ಕಾರಭಾರ ನಡೆಸಿದನು.

ಮುಂದೆ ತುಸು ದಿನಗಳಲ್ಲಿಯೇ ಕರ್ಣದೇವನು ತೀರಿಕೊಂಡನು. ಆಗ ರಾಣಿ ಮೀನಲದೇವಿಯೆ ಮಗನ ಸಂರಕ್ಷಣೆಯನ್ನೂ ರಾಜ್ಯದ ಕಾರಭಾರವನ್ನೂ ನೋಡುತ್ತಿದ್ದಳು. ಆ ಸಂಧಿಯನ್ನು ಸಾಧಿಸಿ ಮಾಳವದೇಶದ ರಾಜ ಯಶೋವರ್ಮನು, ಪಾಟಣದ ಮೇಲೆ ದಂಡೆತ್ತಿ ಬಂದನು. ಆಗ ಮಂತ್ರಿಗಳು ಕುಮಾರ ಸಿದ್ಧರಾಜನನ್ನೂ ಅವನ ತಾಯಿ ಮೀನಲದೇವಿಯನ್ನೂ ಬೇರೆ ಕಡೆಗೆ ಕಳುಹಿದರು; ಯಶೋವರ್ಮನನ್ನು ಪಾಟಣದಲ್ಲಿ ಬರಮಾಡಿಕೊಂಡರು. ಅವನಿಗೆ ಹೇರಳ ಹಣವನ್ನೂ ಕಾಣಿಕೆಗಳನ್ನೂ ಕೊಟ್ಟು, ಅವನ ಸಂಗಡ ಒಪ್ಪಂದಮಾಡಿಕೊಂಡರು.

ಈ ಅಪಮಾನದ ಸುದ್ದಿಯನ್ನು ಕೇಳಿ ಸಿದ್ಧರಾಜನ ಸ್ವಾಭಿಮಾನವು ಕೆರಳಿನಿಂತಿತು. ಅವನು ಯಶೋವರ್ಮನನ್ನು ಸೋಲಿಸಿ, ತನ್ನ ಅಪಮಾನದ ಸೇಡು ತೀರಿಸಿಕೊಳ್ಳಬೇಕೆಂದು ನಿರ್ಧರಿಸಿದನು. ದೊಡ್ಡ ಸೈನ್ಯವನ್ನು ಕಟ್ಟಿಕೊಂಡು ಯಶೋವರ್ಮನ ರಾಜಧಾನಿಯಾದ ಉಜ್ಜಯಿನಿಯ ಮೇಲೆ ಏರಿಹೋದನು. ಹನ್ನೆರಡು ವರುಷಗಳ ವರೆಗೆ ಇಬ್ಬರಿಗೂ ಯುದ್ಧವಾಯಿತು. ಕಡೆಗೆ ಯಶೋವರ್ಮನು ಸೋತು ಸಿದ್ಧರಾಜನಿಗೆ ಶರಣುಬಂದನು. ಅವನನ್ನು ಕಟ್ಟಿಗೆಯ ಒಂದು ಪಂಜರದಲ್ಲಿ ಹಾಕಿ, ಆನೆಯ ಮೇಲೆ ಹೇರಿಸಿಕೊಂಡು ಸಿದ್ಧರಾಜನು ತನ್ನ ರಾಜಧಾನಿಗೆ ಹಿಂದಿರುಗಿದನು. ಸಂಗಡ ಉಜ್ಜಯಿನಿಯ ಮಹಾ ಮಹಾ ಪಂಡಿತರನ್ನೂ ಕರೆದುಕೊಂಡು ಬಂದನು. ಅವರೆಲ್ಲರನ್ನೂ ರಾಜ್ಯದಲ್ಲಿ ಒಳ್ಳೆಯ ರೀತಿಯಿಂದ ಪಾಟಣದಲ್ಲಿ ಇಟ್ಟುಕೊಂಡು, ಸಿದ್ಧರಾಜನು ಅವರಿಂದ ಒಳ್ಳೊಳ್ಳೆಯ ಗ್ರಂಥಗಳನ್ನು ಬರೆಸಿದನು.

ಪಾಟಣದಲ್ಲಿ ಸಿದ್ಧರಾಜನು ಆಳುತ್ತಿರುವಾಗ, ಜುನಾಗಡದಲ್ಲಿ ರಾಖೇಂಗಾರನು ರಾಜ್ಯವಾಳುತ್ತಿದ್ದನು. ಇವರಿಬ್ಬರ ಮನೆತನದವರಿಗೆ ಮುಂಚಿನಿಂದಲೂ ವೈರತ್ವವಿತ್ತು. ಸಿದ್ಧರಾಜನು ಮಾಳವದೇಶಕ್ಕೆ ಹೋದಾಗ ಸಂಧಿಸಾಧಿಸಿ ರಾ-ಖೇಂಗಾರನು ಪಾಟಣದ ಮೇಲೆ ದಾಳಿ ಮಾಡಿದನು; ಪಾಟಣದ ಕೋಟೆಯ ಒಂದು ಬಾಗಿಲನ್ನು ತಂದು ತನ್ನ ರಾಜಧಾನಿಯಲ್ಲಿ ಇಟ್ಟನು.

ಈ ಸುದ್ದಿಯು ಸಿದ್ಧರಾಜನಿಗೆ ತಿಳಿಯಿತು. ಕೂಡಲೆ ಅವನು ಮಾಳವದೇಶದಿಂದ ತಿರುಗಿ ಬಂದನು. ದೊಡ್ಡದಾದ ದಂಡನ್ನು ಕೂಡಿಸಿಕೊಂಡು ರಾ-ಖೇಂಗಾರನ ಮೇಲೆ ದಂಡೆತ್ತಿ ಹೋದನು. ಇಬ್ಬರಿಗೂ ಜುನಾಗಡ ಬಳಿ ಘೋರ ಕಾಳಗವಾಯಿತು. ರಾ-ಖೇಂಗಾರನು ಸೋತು ಮಡಿದನು.

ಸಿದ್ಧರಾಜ ಜಯಸಿಂಹನು ಅನಂತರ ತನ್ನ ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆಗಳು ನೆಲೆಸುವಂತೆ ಪ್ರಯತ್ನ ಮಾಡಿದನು. ಆಗಿನ ಕಾಲದಲ್ಲಿ ಸೌರಾಷ್ಟ್ರದಲ್ಲಿ ಆಳುತ್ತಿದ್ದ ಬೇರೆ ಅರಸರನ್ನು ಒಂದುಗೂಡಿಸಿ, ರಜಪೂತರಲ್ಲಿ ಒಕ್ಕಟ್ಟನ್ನು ಹುಟ್ಟಿಸಲು ಸಾಕಷ್ಟು ಶ್ರಮಬಟ್ಟನು. ಸೋಮನಾಥ ದೇವಾಲಯವನ್ನು ಕೆತ್ತನೆಯ ಹಾಗು ಕುಸುರಿನ ಕೆಲಸದಿಂದ ಸುಂದರಗೊಳಿಸಿದನು. ಅನ್ಯಧರ್ಮದವರನ್ನೂ ಅವನು ಪ್ರೇಮದಿಂದ ನೋಡುತ್ತಿದ್ದನು. ಜೈನರಿಗಾಗಿ ಗಿರಿನಾರದಲ್ಲಿ ಮಂದಿರ ಕಟ್ಟಿಸಿಕೊಟ್ಟನು. ಹೀಗೆ ಸಿದ್ಧರಾಜ ಜಯಸಿಂಹನು ಕೀರ್ತಿಯನ್ನು ಸಂಪಾದಿಸಿ, ಕ್ರಿ. ಶ. ೧೧೪೩ರಲ್ಲಿ ಮರಣಹೊಂದಿದನು.

## ಅಭ್ಯಸನಗಳು

೧. ಸಿದ್ಧರಾಮ ಜಯಸಿಂಹನ ತಂದೆ-ತಾಯಿಗಳು ಯಾರು?

೨. ಸಿದ್ಧರಾಮನು ಅರಸನಾದಮೇಲೆ ಉಜ್ಜಯಿನಿಯ ಮೇಲೆ ಏಕೆ ಏರಿಹೋದನು?

೩. ಸಿದ್ಧರಾಜನು ಯಶೋವರ್ಮನ ಕೂಡ ಎಷ್ಟು ವರುಷ ಯುದ್ಧಮಾಡಿದನು? ಮತ್ತು ಕೊನೆಗೆ ಯಾರಿಗೆ ಜಯವಾಯಿತು?

೪. ಸಿದ್ಧರಾಜನಿಗೂ ಜುನಾಗಡದ ಅರಸನಿಗೂ ಯುದ್ಧವು ಏಕೆ ಆಯಿತು?

೫. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿ ವಾಕ್ಯಗಳನ್ನು ಪೂರ್ತಿಗೊಳಿಸಿರಿ.

(ಅ) .........ವು ಸೋಲಂಕಿ ಅರಸರ ರಾಜಧಾನಿಯು.

(ಬ) ರಾಣಾ......ನಿಗೂ......ನಿಗೂ ಜುನಾಗಡದ ಬಳಿ ಘನಘೋರ ಕಾಳಗವಾಯಿತು.

(ಕ) ಸಿದ್ಧರಾಜನು......ದೇವಾಲಯವನ್ನು......ಕೆಲಸದಿಂದ ಸುಂದರಗೊಳಿಸಿದನು.

(ಡ) ಸಿದ್ಧರಾಜನು......ಗಾಗಿ......ದಲ್ಲಿ ಮಂದಿರ ಕಟ್ಟಿಸಿಕೊಟ್ಟನು.

ಮಲಪ್ರಭಾನದಿಯು ಕೃಷ್ಣಾನದಿಯನ್ನು ಕೂಡುವ ಸ್ಥಳದಲ್ಲಿ ಸಂಗಮೇಶ್ವರನ ಪವಿತ್ರವಾದ ದೇವಸ್ಥಾನವಿದೆ. ಅಲ್ಲಿ ಸಂಗಮನಾಥರೆಂಬ ಶಿವಯೋಗಿಗಳು ವಾಸಿಸುತ್ತಿದ್ದರು. ಆ ಕಾಲದಲ್ಲಿ ಅವರ ಹೆಸರು ಎಲ್ಲರ ಬಾಯಲ್ಲಿಯೂ ಇತ್ತು. ಮನೆಯನ್ನು ಬಿಟ್ಟ ಬಸವರಸ, ನೇರವಾಗಿ ಸಂಗಮನಾಥರ ಆಶ್ರಮಕ್ಕೆ ಬಂದನು. ಅವರಿಂದ ವೀರಶೈವದೀಕ್ಷೆಯನ್ನು ಪಡೆದು ಅವರ ಆಶ್ರಯದಲ್ಲಿಯೆ ನಿಂತುಕೊಂಡನು. ಅಲ್ಲಿಯೆ ಇದ್ದು ಅನೇಕ ವಿದ್ಯೆಗಳಲ್ಲಿ ಪಾರಂಗತನಾದನು. ಬಸವರಸನ ಜಾಣ್ಮೆಯನ್ನೂ ಶಿವಭಕ್ತಿಯನ್ನೂ ಕಂಡು ಅವನ ಗುರುಗಳಿಗೆ ಬಹಳ ಆನಂದವಾಯಿತು. 'ಬಸವಣ್ಣಾ, ನಿನ್ನಿಂದ ಬಹಳ ಕೆಲಸವಾಗಬೇಕಾಗಿದೆ' ಎಂದು ಅವರು ಮೆಚ್ಚಿ ಬಸವರಸನನ್ನು ಹರಿಸಿದರು.

ಮುಂದೆ ಕೆಲವು ದಿವಸಗಳಾದ ಮೇಲೆ, ಬಸವರಸನ ಸೋದರಮಾವನಾದ ಬಲದೇವನು ಅವನನ್ನು ಕಲ್ಯಾಣಪಟ್ಟಣಕ್ಕೆ ಕರೆದುಕೊಂಡು ಹೋದನು. ಬಲದೇವನು ಬಿಜ್ಜಳರಾಜನಲ್ಲಿ ಮಂತ್ರಿಯಾಗಿದ್ದನು. ಅವನು ಬಸವಣ್ಣನನ್ನು ತನ್ನ ಕೈಕೆಳಗೆ ಕರಣಿಕನನ್ನಾಗಿ ನೇಮಿಸಿಕೊಂಡನು. ಅಲ್ಲದೆ ತನ್ನ ಮಗಳಾದ ಗಂಗಾಂಬಿಕೆಯನ್ನು ಕೊಟ್ಟು ಅವನಿಗೆ ಮದುವೆ ಮಾಡಿದನು. ಬಸವಣ್ಣನು ಕುಶಲತನದಿಂದ ತನ್ನ ಕಾರ್ಯವನ್ನು ಸಾಗಿಸಹತ್ತಿದನು. ಇವನ ಶುದ್ಧವಾದ ಆಚರಣೆ-ಸತ್ಯನಿಷ್ಠೆಗಳಿಗೆ ಮೆಚ್ಚಿ, ಸಿದ್ದಣ್ಣನೆಂಬ ಮತ್ತೊಬ್ಬ ಮಂತ್ರಿಯು ತನ್ನ ಮಗಳಾದ ನೀಲಾಂಬಿಕೆಯನ್ನೂ ಇವನಿಗೆ ಧಾರೆಯೆರೆದು ಕೊಟ್ಟನು. ಬಿಜ್ಜಳ ರಾಜನೂ ಬಸವಣ್ಣನ ಕೆಲಸಕ್ಕೆ ಮೆಚ್ಚಿದನು.

ಚಾಲುಕ್ಯರ ಕಾಲದ ಒಂದು ಲಿಪಿಯು ಬಿಜ್ಜಳನ ಬಳಿಯಲ್ಲಿ ಇತ್ತು. ಅದನ್ನು ಓದಿ ಸರಿಯಾಗಿ ಅರ್ಥಮಾಡಲಿಕ್ಕೆ ಯಾರಿಗೂ ಆಗಿರಲಿಲ್ಲ. ಬಸವಣ್ಣನು ಅದನ್ನು ಸಹಜವಾಗಿ ಓದಿ, ಚಾಲುಕ್ಯರ ಸಿಂಹಾಸನದ ಬುಡದಲ್ಲಿ ದ್ರವ್ಯವು ಇರುತ್ತದೆಂದು ಅರ್ಥಮಾಡಿ ಹೇಳಿದನು. ಅದರಂತೆ ಅಗಿದು ನೋಡಲು, ಬಿಜ್ಜಳನಿಗೆ ಅಪಾರ ದ್ರವ್ಯವು ಸಿಕ್ಕಿತು. ಇದರಿಂದಂತೂ ಅವನಿಗೆ ಬಸವಣ್ಣನಲ್ಲಿ ತುಂಬ ಗೌರವ ಹುಟ್ಟಿತು. ಮುಂದೆ ಬಲದೇವಮಂತ್ರಿಯು ಸಾಯಲು, ಬಿಜ್ಜಳರಾಜನು ಬಸವಣ್ಣನನ್ನೇ ಮಂತ್ರಿಯನ್ನಾಗಿ ನೇಮಿಸಿಕೊಂಡನು.

ಬಸವಣ್ಣನವರು ಮಂತ್ರಿಗಳಾದಮೇಲೆ, ರಾಜ್ಯಾಡಳಿತದ ಕಾರ್ಯವನ್ನು ಒಳ್ಳೆಯ ದಕ್ಷತೆಯಿಂದ ಸಾಗಿಸಿದರು. ಆದುದರಿಂದ ರಾಜನಿಗೆ ಯಾವ ತರದ ಚಿಂತೆಯೂ ಇರಲಿಲ್ಲ. ತಮ್ಮ ನಿತ್ಯದ ಕೆಲಸಗಳನ್ನು ಮುಗಿಸಿ ಬಸವಣ್ಣನವರು ಉಳಿದ ಸಮಯವನ್ನು ಸಮಾಜಸುಧಾರಣೆಯ ಕಾರ್ಯಗಳಲ್ಲಿಯೂ ಧಾರ್ಮಿಕ ಚರ್ಚೆಗಳಲ್ಲಿಯೂ ಕಳೆಯುತ್ತಿದ್ದರು. ಆದುದರಿಂದ ಅವರ ಕೀರ್ತಿಯು ದೇಶದ

ತುಂಬ ಹಬ್ಬಿತು. ಅವರ ದರ್ಶನಕ್ಕೆಂದು, ದೂರ-ದೂರದ ನಾಡುಗಳಿಂದ ದಿನಾಲು ಸಾವಿರಾರು ಜನರು ಕಲ್ಯಾಣಕ್ಕೆ ಬರತೊಡಗಿದರು. ಕಲ್ಯಾಣವು ಶಿವಶರಣರ ತವರುಮನೆಯಾಯಿತು.

ಬಸವಣ್ಣನವರು ಕಲ್ಯಾಣಪಟ್ಟಣದಲ್ಲಿ 'ಅನುಭವಮಂಟಪ' ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದರು. ಅದಕ್ಕೆ ವೈರಾಗ್ಯಮೂರ್ತಿಗಳಾದ ಅಲ್ಲಮ ಪ್ರಭು ಎಂಬವರು ಅಧ್ಯಕ್ಷರಾಗಿದ್ದರು. ಅಲ್ಲಿ ದಿನಾಲು ಧರ್ಮ, ತತ್ತ್ವಜ್ಞಾನ ಮುಂತಾದುವುಗಳ ಬಗೆಗೆ ಚರ್ಚೆ ನಡೆಯುತ್ತಿದ್ದುವು. ಈ ಚರ್ಚೆಯಲ್ಲಿ ಪುರುಷ ರಂತೆ ಸ್ತ್ರೀಯರೂ ಭಾಗವಹಿಸುತ್ತಿದ್ದರು. ಅವರಲ್ಲಿ ಅಕ್ಕಮಹಾದೇವಿ, ಚೆನ್ನ-ಬಸವೇಶ್ವರ, ಸಿದ್ಧರಾಮ, ಮಡಿವಳಮಾಚಿದೇವ, ಹಡಪದ ಅಪ್ಪಣ, ಡೋಹರ ಕಕ್ಕಯ್ಯ ಮುಂತಾದವರು ಪ್ರಮುಖರು. ಇವರೆಲ್ಲರೂ ತಮ್ಮ ತಮ್ಮ ಉಪ-ಜೀವನದ ಸಲುವಾಗಿ ಬೇರೆ ಬೇರೆ ಉದ್ಯೋಗಗಳನ್ನು ಮಾಡಿಕೊಂಡು ಇದ್ದರು. ಜಾತಿ-ಮತ, ಪಕ್ಷ-ಪಂಗಡ, ಬಡವ-ಬಲ್ಲಿದ ಎಂಬ ಭೇದವಿಲ್ಲದೆ 'ಲಿಂಗಧರಿಸಿ-ದವರೆಲ್ಲ ಒಂದೆ' ಎಂದು ಎಲ್ಲರೂ ಸಮಾನರಾಗಿ ನಡೆಯುತ್ತಿದ್ದರು; ಅದರಂತೆ ನಡೆಯಲು ಜನರಿಗೆ ಬೋಧಿಸುತ್ತಿದ್ದರು. ಇದರಿಂದ ವೀರಶೈವಮತವು ಏಳ್ಗೆ ಹೊಂದಹತ್ತಿತು.

ಅನ್ಯಮತದ ಕೆಲವು ಜನರಿಗೆ ಬಸವಣ್ಣನವರ ಈ ನಡೆವಳಿಕೆ ಸೇರಲಿಲ್ಲ. ಅವರು ಅರಸನೆದುರು ಬಸವಣ್ಣನವರ ಬಗೆಗೆ ಅಲ್ಲದ ಸಲ್ಲದ ಚಾಡಿಯನ್ನು ಹೇಳಹತ್ತಿದರು. ಅವರಲ್ಲಿ 'ಕೊಂಡೆಯ ಮಂಚಣ್ಣ' ಎಂಬವನು ಮುಖ್ಯ-ನಾಗಿದ್ದನು. ಒಮ್ಮೆ ಅವನು 'ಬಸವಣ್ಣನು ಭಾಂಡಾರದೊಳಗಿನ ಹಣವನ್ನೆಲ್ಲ ಬಳಸಿರುವನು' ಎಂದು ಬಿಜ್ಜಳನಿಗೆ ಹೇಳಿದನು. ಅರಸನು ಬಸವಣ್ಣನನ್ನು ಕೇಳಿದನು. ಆಗ ಬಸವಣ್ಣನು ಖಜಾನೆಯ ಲೆಕ್ಕಾಚಾರವನ್ನೆಲ್ಲ ಒಪ್ಪಿಸಿದನು. ಏನೂ ತಪ್ಪಾಗಿರಲಿಲ್ಲ.

ಜಾತಿಭೇದಗಳನ್ನು ಇಲ್ಲದಂತೆ ಮಾಡಬೇಕೆಂಬುದು ಬಸವಣ್ಣನವರ ಅಪೇಕ್ಷೆಯಾಗಿದ್ದಿತು. ಅದಕ್ಕಾಗಿಯೆ ಅವರು ಹೊಲೆಯನಾದ ಹರಳಯ್ಯ ಮತ್ತು ಬ್ರಾಹ್ಮಣನಾದ ಮಧುವಯ್ಯ ಇವರಿಬ್ಬರಲ್ಲಿ ಶರೀರಸಂಬಂಧ ಮಾಡಿ ಸಿದರು. ಇದರಿಂದ ಹಳೆಯ ಸಂಪ್ರದಾಯದ ಜನರಿಗೆ ಅವಮಾನವೆನಿಸಿತು. ಅವರು ಬಿಜ್ಜಳ ರಾಜನ ಮನಸ್ಸನ್ನು ಕೆಡಿಸಿ ಅವನನ್ನು ಸಿಟ್ಟಿಗೆಬ್ಬಿಸಿದರು. ಅವನು ಹರಳಯ್ಯ-ಮಧುವಯ್ಯರ ಕಣ್ಣುಗಳನ್ನು ತೆಗೆಸಿದನು. ಇದನ್ನು ಕಂಡು ಸಾಮಾನ್ಯ ಸ್ವಭಾವದ ಕೆಲವು ಜನರು ಕಿಡಿಕಿಡಿಯಾದರು. ಅವರ-ಲ್ಲಿಯ ಜಗದೇವ, ಮಲ್ಲಿಬೊಮ್ಮಣ್ಣ ಎಂಬವರಿಬ್ಬರು ಬಿಜ್ಜಳರಾಜನನ್ನು ಕೊಂದರು. ರಾಜನ ಕೊಲೆಯಾದುದನ್ನು ಕೇಳಿ ಬಸವಣ್ಣನವರು ಬಹಳ

ದುಃಖಬಟ್ಟರು. ಅವರಿಗೆ ಜೀವನವೇ ಬೇಸರವಾಯಿತು. ಆಗ ಅವರು ಕೆಲವುಜನ ಶರಣರನ್ನು ಕೂಡಿಕೊಂಡು ಕಲ್ಯಾಣಪಟ್ಟಣವನ್ನು ಬಿಟ್ಟು ಹೊರಟರು. ಸಂಗಮೇಶ್ವರ ಕ್ಷೇತ್ರಕ್ಕೆ ಬಂದುನಿಂತರು. ಸಂಗಮೇಶ್ವರನನ್ನು ಭಕ್ತಿಯಿಂದ ಪೂಜಿಸುತ್ತಾ ಕೆಲವು ದಿನಗಳನ್ನು ಕಳೆದರು. ಮುಂದೆ ದೇವರ ಧ್ಯಾನದಲ್ಲಿ ಮಗ್ನರಾಗಿ ಸಂಗಮೇಶ್ವರನಲ್ಲಿಯೇ ಐಕ್ಯರಾದರಂತೆ. ಆಗ ಅವರಿಗೆ ಮೂವತ್ತೈದು ವರುಷಗಳಾಗಿದ್ದುವು.

ಬಸವಣ್ಣನವರು ವೀರಶೈವಮತದ ಪ್ರಸಾರ ಮಾಡಿದರು. ಇವರ ಚಳವಳಿಯಿಂದ ಕನ್ನಡಭಾಷೆಗೆ ಶಿವಶರಣರ ವಚನಗಳ ರಾಶಿ ದೊರೆಯಿತು. "ಆಚಾರವೇ ಸ್ವರ್ಗ, ಅನಾಚಾರವೇ ನರಕ; ದಯವಿಲ್ಲದ ಧರ್ಮವು ಏವುದಯ್ಯ; ದಯವೇ ಧರ್ಮದ ಮೂಲವಯ್ಯ; ಕಾಯಕವೇ ಕೈಲಾಸ" ಮುಂತಾದ ಮುತ್ತಿನಂತಹ ವಚನಗಳು ಅವರ ಅಮರವಾಣಿಯಿಂದ ಹೊರಟಿರುವುವು. ಅವು ಈಗಲೂ ನಮ್ಮ ಜೀವನಕ್ಕೆ ಬೆಳಕನ್ನು ಕೊಡುವಂತಹವಿರುವುವು.

## ಅಭ್ಯಾಸನಗಳು

೧. ಕೆಳಗೆ ಕೆಲವು ಅಪೂರ್ಣ ವಾಕ್ಯಗಳನ್ನು ಕೊಟ್ಟಿದೆ. ಪ್ರತಿಯೊಂದು ವಾಕ್ಯದ ಕೊನೆಗೆ ಕಂಸದಲ್ಲಿ ಕೆಲವು ಶಬ್ದಗಳನ್ನು ಕೊಟ್ಟಿದೆ. ಅವುಗಳಲ್ಲಿ ಯೋಗ್ಯ-ವಾದುವುಗಳನ್ನು ಸೇರಿಸಿ, ವಾಕ್ಯಗಳನ್ನು ಪೂರ್ತಿಗೊಳಿಸಿರಿ.

ಅ) ಬಸವಣ್ಣನವರ ತಂದೆಯ ಹೆಸರು......(ಚಟ್ಟರಸ, ಮಾದರಸ, ಮಧುವಯ್ಯ, ಮಾಧವ) ಮತ್ತು ಅವರ ತಾಯಿಯ ಹೆಸರು......(ನೀಲಾಂಬಿಕೆ, ಗಂಗಾಂಬಿಕೆ, ಮಾದಲಾಂಬಿಕೆ).

ಬ) ಇವರು (ಕ್ರಿ. ಶ. ೧೧೩೨ರಲ್ಲಿ...ಯಲ್ಲಿ ಜನಿಸಿದರು. (ಶಮನೇವಾಡಿ, ಬಾಗೇವಾಡಿ, ಕಲ್ಯಾಣ).

ಕ) ಇವರ ಗುರುಗಳು...(ಶಾಂತಿನಾಥರು, ಸಂಗಮನಾಥರು, ಪಾರ್ಶ್ವನಾಥರು).

ಡ) ಬಸವಣ್ಣನವರು......ದಲ್ಲಿ (ವಿಜಾಪುರ, ಕಲ್ಯಾಣ, ಕೂಡಲಸಂಗಮ) ಅನುಭವಮಂಟಪವನ್ನು ಸ್ಥಾಪಿಸಿದರು.

ಇ) ಬಸವಣ್ಣನವರ ವಿರುದ್ಧ ಚಾಡಿಹೇಳುವವರಲ್ಲಿ......ಇವನು ಮುಖ್ಯನಾಗಿದ್ದನು (ಮಧುವಯ್ಯ, ಕೊಂಡೆಯ ಮಂಚಣ್ಣ, ಮಲ್ಲಿಬೊಮ್ಮಣ್ಣ)

೨. ಬಸವಣ್ಣನವರು ಚಿಕ್ಕಂದಿನಲ್ಲಿ ಮನೆಬಿಟ್ಟು, ಸಂಗಮನಾಥ ಗುರುಗಳ ಹತ್ತಿರ ಏಕೆ ಹೋದರು?

೩. ಬಸವಣ್ಣನವರು ಮಂತ್ರಿಗಳು ಹೇಗೆ ಆದರು?

೪. ಬಸವಣ್ಣನವರು ಸ್ಥಾಪಿಸಿದ 'ಅನುಭವಮಂಟಪದ' ಬಗ್ಗೆ ನಾಲ್ಕಾರು ಮಾತುಗಳನ್ನು ಬರೆಯಿರಿ.

೫. ಬಸವಣ್ಣನವರು ಕಲ್ಯಾಣವನ್ನು ಬಿಟ್ಟು, ಸಂಗಮಕ್ಕೆ ಏಕೆ ಹೋದರು?

೬. ಬಸವಣ್ಣನವರ ಕಾಲಕ್ಕೆ ಇದ್ದ ನಾಲ್ಕಾರು ಜನ ಶಿವಶರಣರ ಹೆಸರುಗಳನ್ನು ಹೇಳಿರಿ.

೭. ಬಸವಣ್ಣನವರು ಹೇಳುವ ಮುತ್ತಿನಂತಹ ವಚನಗಳು ಯಾವುವು?

೮. ಬಸವಣ್ಣನವರು ಕೊನೆಗೆ ಎಲ್ಲಿ ಐಕ್ಯರಾದರು?

# ೧೪. ಪೃಥ್ವೀರಾಜ ಚವ್ಹಾಣ

ಸುಮಾರು ೮೦೦ ವರುಷಗಳ ಹಿಂದೆ, ದಿಲ್ಲಿಯ ಸಿಂಹಾಸನಕ್ಕೆ ಅನಂಗಪಾಲನೆಂಬ ರಜಪೂತ ಅರಸನು ಅಧಿಕಾರಿಯಾಗಿದ್ದನು. ಆತನಿಗೆ ಇಬ್ಬರು ಹೆಣ್ಣುಮಕ್ಕಳಿದ್ದರು. ಅವರಲ್ಲಿ ಒಬ್ಬಳನ್ನು ಅಜಮೀರದ ಚವ್ಹಾಣ ಮನೆತನಕ್ಕೂ, ಇನ್ನೊಬ್ಬಳನ್ನು ಕನೋಜದ ರಾಠೋಡ ಮನೆತನಕ್ಕೂ ಕೊಟ್ಟಿತ್ತು. ಚವ್ಹಾಣ ಮನೆತನಕ್ಕೆ ಕೊಟ್ಟವಳ ಮಗನೇ ಪೃಥ್ವೀರಾಜನು. ರಾಠೋಡ ಮನೆತನಕ್ಕೆ ಕೊಟ್ಟವಳಿಗೂ ಒಬ್ಬ ಮಗನು ಇದ್ದನು. ಅವನ ಹೆಸರು ಜಯಚಂದ. ಪೃಥ್ವೀರಾಜನು ಸುಂದರನೂ ವೀರನೂ ಧೀರನೂ ಆಗಿದ್ದನು. ಆದುದರಿಂದ ಅನಂಗಪಾಲನು ತನ್ನ ತರುವಾಯ ಪೃಥ್ವೀರಾಜನೇ ದಿಲ್ಲಿಯ ಅರಸನಾಗಬೇಕೆಂದು ಅಪೇಕ್ಷಿಸುತ್ತಿದ್ದನು. ಆದುದರಿಂದ ಅವನು ಪೃಥ್ವೀರಾಜನನ್ನು ತನ್ನ ಬಳಿಯಲ್ಲಿಯೇ ಇಟ್ಟುಕೊಂಡಿದ್ದನು.

ಇದರಿಂದ ಜಯಚಂದನಿಗೆ ತುಂಬ ಹೊಟ್ಟೆಯುರಿ. 'ನಾನೂ ಪೃಥ್ವೀರಾಜನಷ್ಟೇ ಹಕ್ಕುದಾರನಾಗಿದ್ದರೂ ಅಜ್ಜನು ನನ್ನನ್ನು ಪ್ರೀತಿಸುವುದಿಲ್ಲವಲ್ಲ!' ಎಂದು ಒಳಗೊಳಗೇ ಕುದಿಯುತ್ತಿದ್ದನು. ಆದುದರಿಂದ ಅವನು ಹೆಚ್ಚು ಕಾಲ ಅಜ್ಜನ ಮನೆಯಲ್ಲಿ ಇರದೆ, ಕನೋಜದಲ್ಲಿಯೆ ಇರುತ್ತಿದ್ದನು. ಮುಂದೆ ತನ್ನ ತಂದೆಯ ತರುವಾಯ ಜಯಚಂದನೇ ಕನೋಜದ ಅರಸನಾದನು.

ಇತ್ತ ಅನಂಗಪಾಲನ ಮರಣದನಂತರ ಪೃಥ್ವೀರಾಜನು ದಿಲ್ಲಿಯ ಅರಸನಾದನು. ಅಜಮೀರ ರಾಜ್ಯವಂತೂ ಅವನದೇ ಇದ್ದಿತು. ಜಯಚಂದನಿಗೆ ಇದು ಸರಿಬರಲಿಲ್ಲ. 'ದಿಲ್ಲಿಯ ರಾಜ್ಯದಲ್ಲಿ ನಾನೂ ಅರ್ಧ ಹಕ್ಕುದಾರನು. ನನಗೂ ಅರ್ಧರಾಜ್ಯ ಕೊಡಬೇಕು' ಎಂದು ಕೇಳಿದನು. ಅದಕ್ಕೆ ಪೃಥ್ವೀ-

ರಾಜನು, ಒಪ್ಪಲಿಲ್ಲ. ಇದರಿಂದ ಚಿಕ್ಕಂದಿನಿಂದಲೂ ಇದ್ದ ಅವರ ವೈರವು ಮತ್ತಷ್ಟು ಹೆಚ್ಚಾಯಿತು.

ಪೃಥ್ವೀರಾಜನು ಆಗಿನ ಕಾಲದ ಉಳಿದ ಎಲ್ಲ ಅರಸರಿಗಿಂತ ಶೂರನೂ ಬಲಿಷ್ಠನೂ ಎಂದು ಎಲ್ಲರೂ ಹೊಗಳುತ್ತಿದ್ದರು. ಅವನು ದಿಲ್ಲಿಯ ಪಟ್ಟಕ್ಕೆ ಅರಸನಾದ ಮೇಲೆ, ದೊಡ್ಡದೊಂದು ಯಜ್ಞವನ್ನು ಮಾಡಿ ತನ್ನ ಪರಾಕ್ರಮವನ್ನು ತೋರಿಸಿದನು. ಆದರೆ ಜಯಚಂದನಿಗೆ ಇದು ಸೇರಲಿಲ್ಲ. ಒಮ್ಮೆಯಾದರೂ ಪೃಥ್ವೀರಾಜನನ್ನು ಅವಮಾನಗೊಳಿಸಬೇಕೆಂದು ಸಮಯ ಕಾಯುತ್ತಿದ್ದನು.

ಜಯಚಂದನಿಗೆ ಸಂಯುಕ್ತೆಯೆಂಬ ಚೆಲುವೆಯಾದ ಮಗಳಿದ್ದಳು. ಪೃಥ್ವೀರಾಜನ ಸಾಹಸಕಾರ್ಯಗಳನ್ನು ಕೇಳಿ, ಅವನನ್ನು ಮದುವೆಯಾಗ



ಪೃಥ್ವೀರಾಜನಿಗೆ ಸಂಯುಕ್ತೆಯು ಹೂಮಾಲೆಯನ್ನು ಹಾಕುವುದು

ಬೇಕೆಂದು ಅವಳು ನಿಶ್ಚಯಿಸಿದ್ದಳು. ಆದರೆ ತಂದೆಗೆ ಇದನ್ನು ಹೇಳಲಿಕ್ಕೆ ಹೆದರುತ್ತಿದ್ದಳು. ಪೃಥ್ವೀರಾಜನೂ ಸಂಯುಕ್ತೆಯ ಗುಣ-ರೂಪಗಳನ್ನು ಕೇಳಿದ್ದನು; ಅವಳು ತನ್ನ ಹೆಂಡತಿಯಾಗಬೇಕೆಂದೂ ಬಯಸಿದ್ದನು. ಇವರಿಬ್ಬರೊಳಗೆ ಪ್ರೇಮವಿದ್ದುದು ಬೇರೆ ಯಾರಿಗೂ ತಿಳಿದಿರಲಿಲ್ಲ.

ಸಂಯುಕ್ತೆಗೆ ಮದುವೆಯ ವಯಸ್ಸಾಯಿತು. ಜಯಚಂದನು ಅವಳ ಸ್ವಯಂವರದ ಸಿದ್ಧತೆಯನ್ನು ಮಾಡಿದನು. ಪೃಥ್ವೀರಾಜನನ್ನು ಬಿಟ್ಟು ಉಳಿದೆಲ್ಲ ರಾಜರಿಗೂ ಅವನು, ಸ್ವಯಂವರಕ್ಕೆ ಬರಲು ಆಮಂತ್ರಣ ಕಳುಹಿದನು.

ಎಲ್ಲರೂ ಆಮಂತ್ರಣ ಸ್ವೀಕರಿಸಿ ಕನೋಜಕ್ಕೆ ಬಂದರು. ಶುಭಮುಹೂರ್ತದಲ್ಲಿ ಸ್ವಯಂವರ ನಡೆಯಿತು. ಪೃಥ್ವೀರಾಜನನ್ನು ಅವಮಾನಿಸಲು ಇದೊಂದು ತಕ್ಕ ಸಮಯವೆಂದು ತಿಳಿದು ಜಯಚಂದನು, ಪೃಥ್ವೀರಾಜನ ಮೂರ್ತಿಯೊಂದನ್ನು ಮಾಡಿಸಿ ಅದಕ್ಕೆ ದ್ವಾರಪಾಲಕನ ಉಡುಪನ್ನು ತೊಡಿಸಿ ಮಂಟಪದ ಹೆಬ್ಬಾಗಿಲ ಎದುರು ಇಡಿಸಿದ್ದನು. ಎಲ್ಲ ಅರಸರೂ ಸ್ವಯಂವರ ಮಂಟಪದಲ್ಲಿ ಆಸನಗಳ ಮೇಲೆ ಕುಳಿತಿದ್ದರು. ಸಂಯುಕ್ತೆಯು ಕೈಯಲ್ಲಿ




ಪೃಥ್ವೀರಾಜನು ಸಂಯುಕ್ತೆಯನ್ನು ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ಹೋಗುವುದು

ಹೂಮಾಲೆಯನ್ನು ಹಿಡಿದು ಮಂಟಪದಲ್ಲಿ ಬಂದಳು. ಅಲ್ಲಿ ಎಲ್ಲಿಯೂ ಪೃಥ್ವೀರಾಜನು ಕಾಣಲಿಲ್ಲ. ಆಗ ಅವಳು ಬಾಗಿಲ ಬಳಿಯಲ್ಲಿ ಇದ್ದ ಪೃಥ್ವೀ-ರಾಜನ ಮೂರ್ತಿಗೆ ಹೂಮಾಲೆಯನ್ನು ಹಾಕಿದಳು. ಅಷ್ಟರಲ್ಲಿ ಅಲ್ಲಿಯೇ ನಿಂತಿದ್ದ ಕುದುರೆಯ ಸವಾರನೊಬ್ಬನು ಅವಳನ್ನು ಎತ್ತಿಕೊಂಡು ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ಓಡಿಹೋದನು. ಅವನು ಸಾಮಾನ್ಯ ಸವಾರನಾಗಿ-ರಲಿಲ್ಲ; ವೇಷ ಬದಲಾಯಿಸಿಕೊಂಡು ಬಂದಿದ್ದ ಪೃಥ್ವೀರಾಜನೇ ಅವನು. ಜಯಚಂದನ ಕಡೆಯವರು ಅವನನ್ನು ಹಿಂಬಾಲಿಸಿದರು. ಆದರೂ ಅವನು ಸುರಕ್ಷಿತವಾಗಿ ದಿಲ್ಲಿಯನ್ನು ಸೇರಿದನು. ಮುಂದೆ ಸಂಯುಕ್ತೆಯನ್ನು ಲಗ್ನವಾಗಿ ಸುಖದಿಂದ ಕಾಲಕಳೆಯಹತ್ತಿದನು.

ಆಗ ಅಫಗಾಣಿಸ್ತಾನದಲ್ಲಿ ಮಹಮ್ಮದ ಘೋರಿ ಎಂಬವನು ರಾಜ್ಯ-ವಾಳುತ್ತಿದ್ದನು. ಅವನಿಗೆ ಭಾರತವನ್ನು ಗೆದ್ದು ಆಳಬೇಕೆಂದು ಆಶೆಯಿದ್ದಿತು.

ಉತ್ತರಭಾರತದಲ್ಲಿಯ ರಜಪೂತ ಅರಸರು ತಮ್ಮ-ತಮ್ಮೊಳಗೆ ಬಡಿದಾಡು-ತ್ತಿರುವುದನ್ನು ಕಂಡು ಅವನು ಸಂತೋಷಪಟ್ಟನು. ಇಬ್ಬರ ಜಗಳದೊಳಗೆ ಮೂರನೆಯವನಾದ ತನಗೆ ಲಾಭವಾಗುವುದೆಂದು ನಂಬಿ ಭಾರತದ ಮೇಲೆ ದಾಳಿಮಾಡಿದನು. ಆದರೆ ವೀರನಾದ ಪೃಥ್ವೀರಾಜನ ಮುಂದೆ ಅವನ ಆಟ ನಡೆಯಲಿಲ್ಲ. ರಣಶೂರರಾದ ರಜಪೂತರ ಹೊಡೆತಕ್ಕೆ ಮಹಮ್ಮದ ಘೋರಿಯ ಸೈನಿಕರು ಪಟಪಟನೆ ಬಿದ್ದರು. ಮಹಮ್ಮದನು ಸೋತು, ಜೀವಉಳಿದರೆ ಸಾಕೆಂದು ಓಡಿಹೋದನು. ಆದರೂ ಅವನು ಪೃಥ್ವೀರಾಜನ ಮೇಲಿನ ವೈರವನ್ನು ಬಿಡಲಿಲ್ಲ. ಮತ್ತೆ ಮತ್ತೆ ಅವನು ದಿಲ್ಲಿಯ ಮೇಲೆ ದಂಡೆತ್ತಿ ಬಂದನು; ಮತ್ತೆ ಮತ್ತೆ ಸೋತು ಹಿಂದಿರುಗಿದನು. ಹೀಗೆ ಏಳು ಸಲ ಪೃಥ್ವೀರಾಜನು ಅವನನ್ನು ಸೋಲಿಸಿದನು.

ಇಷ್ಟಾದರೂ ಘೋರಿಯು ಭಾರತದ ಆಶೆಯನ್ನು ಬಿಡಲಿಲ್ಲ. ಹೇಗಾದರೂ ಮಾಡಿ ಪೃಥ್ವೀರಾಜನನ್ನು ಸೋಲಿಸಿ, ದಿಲ್ಲಿಯನ್ನು ಗೆದ್ದುಕೊಳ್ಳಬೇಕೆಂದು ಯೋಚಿಸುತ್ತಲೇ ಇದ್ದನು. ಅಷ್ಟರಲ್ಲಿ ಜಯಚಂದನಿಂದ ಅವನಿಗೆ ಒಂದು ಕಾಗದ ಬಂದಿತು. ಅದರಲ್ಲಿ "ಈ ಸಲ ನೀನು ದಿಲ್ಲಿಯ ಮೇಲೆ ದಾಳಿ ಮಾಡಿದರೆ ನಾನು ನಿನಗೆ ಸಹಾಯ ಮಾಡುವೆ. ಇಬ್ಬರೂ ಕೂಡಿ ಪೃಥ್ವೀ-ರಾಜನನ್ನು ಮಣ್ಣುಗೂಡಿಸಿಬಿಡೋಣ" ಎಂದು ಬರೆದಿತ್ತು. ಅದನ್ನು ಓದಿ ಘೋರಿಯು ಹಿರಿಹಿರಿ ಹಿಗ್ಗಿದ; ದೊಡ್ಡ ದಂಡಿನೊಡನೆ ದಿಲ್ಲಿಯ ಮೇಲೆ ದಾಳಿ ಮಾಡಿದ. ಜಯಚಂದನು ತನ್ನ ದಂಡಿನೊಡನೆ ಬಂದು ಮಹಮ್ಮದ ಘೋರಿಯ ಕಡೆಗೆ ಕೂಡಿದನು. ಪೃಥ್ವೀರಾಜನ ಸೈನಿಕರೂ ಸಜ್ಜಾಗಿಯೇ ಇದ್ದರು. ಎರಡೂ ದಂಡಿನವರ ನಡುವೆ, ಸ್ಥಾನೇಶ್ವರ (ಠಾಣೇಶ್ವರ)ದ ಬಳಿ-ಯಲ್ಲಿ ಘನಘೋರ ಸಂಗ್ರಾಮ ನಡೆಯಿತು. ಈ ಸಲ ಪೃಥ್ವೀರಾಜನು ಸೋತು ಸೆರೆಸಿಕ್ಕನು. ಘೋರಿಯು ಅವನನ್ನು ಗಝನಿಗೆ ಒಯ್ದು ಕಣ್ಣು ಕೀಳಿಸಿದನು. ಮುಂದೆ ಅಲ್ಲಿಯೇ ಅವನ ಅಂತ್ಯವಾಯಿತು. ಪತಿಯ ಮರಣದ ಸುದ್ದಿಯನ್ನು ಕೇಳಿ ಸಂಯುಕ್ತೆಯು ಸತಿಹೋದಳು.

ದಿಲ್ಲಿಯ ಪಟ್ಟವು ಅಫಗಾನ ಅರಸರ ವಶವಾಯಿತು. ಅಂದಿನಿಂದಲೇ ಭಾರತದಲ್ಲಿ ಪರಕೀಯರ ಆಳಿಕೆ ಪ್ರಾರಂಭವಾಯಿತು. ಪೃಥ್ವೀರಾಜನಿಗೆ ಕೇಡು ಬಗೆಯಲು ಹೋದ ಜಯಚಂದನೂ ಮರುವರುಷ ಘೋರಿಯ ಶಸ್ತ್ರಕ್ಕೆ ಬಲಿಯಾದನು. ತಮ್ಮ-ತಮ್ಮೊಳಗೆ ಜಗಳವಾಡಿದರೆ ಹಾನಿಯಾಗದೆ ಬಿಟ್ಟೀತೆ?

### ಅಭ್ಯಾಸನಗಳು

೧. ಪೃಥ್ವೀರಾಜನೇ ಅರಸನಾಗಬೇಕೆಂದು ಅನಂಗಪಾಲನು ಏಕೆ ಬಯಸುತ್ತಿದ್ದನು?
೨. ದಿಲ್ಲಿಯ ರಾಜ್ಯದಲ್ಲಿ ಮತ್ತೆ ಯಾರ ಹಕ್ಕು ಇತ್ತು?
೩. ಅನಂಗಪಾಲನ ಮರಣದನಂತರ ಯಾರು ದಿಲ್ಲಿಯ ಅರಸರಾದರು?
೪. ಜಯಚಂದನು ಪೃಥ್ವೀರಾಜನನ್ನು ಹೇಗೆ ಅವಮಾನಗೊಳಿಸಿದನು?
೫. ಪೃಥ್ವೀರಾಜನು ಸಂಯುಕ್ತೆಯನ್ನು ಹೇಗೆ ಲಗ್ನವಾದನು?
೬. ಮಹಮ್ಮದ ಘೋರಿಯು ಯಾರು? ಅವನು ದಿಲ್ಲಿಯ ಪಟ್ಟವನ್ನು ಹೇಗೆ ದೊರಕಿಸಿದನು?
೭. ಪೃಥ್ವೀರಾಜನ ಮರಣವು ಹೇಗಾಯಿತು?
೮. ಈ ಕಥೆಯಿಂದ ನೀವು ಕಲಿಯತಕ್ಕ ಮಹತ್ತ್ವದ ಮಾತು ಯಾವುದು?

## ೧೫. ವಸ್ತುಪಾಲ ಮತ್ತು ತೇಜಪಾಲ

(ಸುಮಾರು ೭೦೦ ವರ್ಷ ಪೂರ್ವದಲ್ಲಿ)

ಇವರು ಗುಜರಾತ ಪ್ರಾಂತದವರು. ಈ ಅಣ್ಣ-ತಮ್ಮಂದಿರಿಬ್ಬರೂ ತಮ್ಮ ಶಕ್ತಿ, ಸಾಮರ್ಥ್ಯ ಹಾಗು ಚುರುಕುಬುದ್ಧಿಯಿಂದ ಮುಂದೆ ಬಂದರು. ಇವರು ಒಂದು ಸಾಮಾನ್ಯ ಜೈನ ಕುಟುಂಬದಲ್ಲಿ ಜನಿಸಿದರು. ಇವರ ತಾಯಿಯು ಪುನರ್ವಿವಾಹವನ್ನು ಮಾಡಿಕೊಂಡವಳೆಂದು ತಿಳಿದು, ಜನರು ಇವರನ್ನು ಕುಲದಿಂದ ಹೊರಗೆ ತೆಗೆದರು. ಆದರೆ ಇವರು ಎದೆಗುಂದದೆ ಆ ಊರನ್ನು ಬಿಟ್ಟು ಬೇರೊಂದು ಊರಿಗೆ ಬಂದು ನಿಂತರು.

ವಸ್ತುಪಾಲ ತೇಜಪಾಲರಿಬ್ಬರೂ ಬೆಳೆದು ದೊಡ್ಡವರಾದರು. ಅವರ ಪರಾಕ್ರಮ ಹಾಗೂ ಕುಶಲಬುದ್ಧಿಯನ್ನು ಕಂಡು ಜನರು ಅವರನ್ನು ಪ್ರೀತಿಸ ಹತ್ತಿದರು. ಅವರು ಯಾವಾಗಲೂ ಬಡಬಗ್ಗರಿಗೆ ಸಹಾಯಮಾಡುತ್ತಿದ್ದರು. ಒಬ್ಬರನ್ನು ಸುಮ್ಮ-ಸುಮ್ಮನೆ ಎಂದೂ ನೋಯಿಸುತಿದ್ದಿಲ್ಲ. 'ಧೋಲಕ' ರಾಜ್ಯದ ಒಡೆಯನಾದ ವೀರಧವಲ ಎಂಬವನು ಇವರ ಕೀರ್ತಿಯನ್ನು ಕೇಳಿ, ಇವರನ್ನು ತನ್ನಲ್ಲಿಗೆ ಬರಮಾಡಿಕೊಂಡನು. ವಸ್ತುಪಾಲನನ್ನು ಮಂತ್ರಿಯನ್ನಾಗಿಯೂ ತೇಜಪಾಲನನ್ನು ಸೇನಾಪತಿಯನ್ನಾಗಿಯೂ ನೇಮಿಸಿಕೊಂಡನು.

ಆ ಕಾಲದಲ್ಲಿ ದಿಲ್ಲಿಯಲ್ಲಿ.........ಸುಲ್ತಾನನು ಆಳುತ್ತಿದ್ದನು. ಅವನು ಮೇಲಿಂದ ಮೇಲೆ ತನ್ನ ದಂಡು ಕಳುಹಿ ಗುಜರಾತವನ್ನು ಸುಲಿಯುತ್ತಿದ್ದನು ಯಾವಾಗ ಸುಲ್ತಾನನ ದಂಡು ಬಂದೀತು ನಿಯಮವಿರಲಿಲ್ಲ. ವೀರಧವಲ ರಾಜನಿಗೆ ಈ ಕುರಿತು ಬಹಳ ಚಿಂತೆಯೆನಿಸುತಿತ್ತು. ಒಮ್ಮೆ ಸುಲ್ತಾನನ

ತಾಯಿಯು ಮಕ್ಕಾಯಾತ್ರೆಗೆ ಹೊರಟಳು. ಆಗ ದಿಲ್ಲಿಯಿಂದ ಮೊದಲು ಗುಜರಾತದ ಬಂದರಗಳಿಗೆ ಬಂದು ಅಲ್ಲಿಂದ ಹಡಗಿನಲ್ಲಿ ಕುಳಿತು ಮಕ್ಕಾ ಪಟ್ಟಣಕ್ಕೆ ಹೋಗಬೇಕಾಗುತ್ತಿತ್ತು. ಸುಲ್ತಾನನ ತಾಯಿಯನ್ನು ಒಯ್ಯುತ್ತಿದ್ದ ಹಡಗನ್ನು ಸಮುದ್ರಗಳ್ಳರು ಮುತ್ತಿ ಸುಲಿದುಬಿಟ್ಟರು. ಸುಲ್ತಾನನ ತಾಯಿಯ ಎಲ್ಲ ವಸ್ತು-ಒಡವೆಗಳೂ ಕಳವಾದುವು. ಬರಿಗೈಯಿಂದ ಮುಂದೆ ಸಾಗುವುದು ಹೇಗೆ? ಆಕೆ ತಿರುಗಿ ಗುಜರಾತದ ಬಂದರಕ್ಕೆ ಬಂದಳು. ಈ ಸುದ್ದಿಯು ವಸ್ತುಪಾಲನಿಗೆ ತಿಳಿಯಿತು. ಅವನು ಪ್ರಯತ್ನಪಟ್ಟು ಬೇಗಮಳ ಎಲ್ಲ ವಸ್ತು



ವಸ್ತುಪಾಲ ಮತ್ತು ತೇಜಪಾಲ

ಗಳನ್ನೂ ತಿರುಗಿ ದೊರಕಿಸಿಕೊಟ್ಟನು. ಮಾನ-ಸನ್ಮಾನಗಳನ್ನು ಮಾಡಿ ಆಕೆಗೆ ಮಕ್ಕಾಯಾತ್ರೆಗೆ ಹೋಗಲು ಅನುಕೂಲಮಾಡಿಕೊಟ್ಟನು.

ಸುಲ್ತಾನನ ತಾಯಿಯು ಯಾತ್ರೆಯನ್ನು ಮುಗಿಸಿಕೊಂಡು ತಿರುಗಿ ದಿಲ್ಲಿಯನ್ನು ಮುಟ್ಟಿದಳು. ದಾರಿಯಲ್ಲಿ ತನಗಾದ ಅನುಭವವನ್ನು ಮಗನಿಗೆ ಹೇಳಿದಳು. ಸುಲ್ತಾನನು ಸಂತುಷ್ಟನಾಗಿ ವಸ್ತುಪಾಲನನ್ನು ಕರೆಕಳುಹಿದನು. 'ನಾನು ನಿನಗೆ ಬಹಳಷ್ಟು ಕೊಡಬೇಕಾಗಿದೆ, ಏನು ಬೇಕು ಬೇಡು' ಎಂದು

ವಸ್ತುಪಾಲನಿಗೆ ಹೇಳಿದನು. ಅವನು ಕೂಡಲೇ 'ಶಹಾನಶಹಾ, ನನ್ನ ಒಂದು ಮಾತನ್ನು ನಡೆಸಿಕೊಡುವಂತೆ ವಚನಕೊಡಬೇಕು' ಎಂದು ಕೇಳಿಕೊಂಡನು. ಸುಲ್ತಾನನು ಅದಕ್ಕೆ ಸಮ್ಮತಿಸಲು ವಸ್ತುಪಾಲ ಹೇಳಿದನು: 'ನನಗೆ ಹೆಚ್ಚಿನದೇನೂ ಬೇಡ. ಗುಜರಾತಕ್ಕೆ ನಿನ್ನ ಸೈನ್ಯದಿಂದ ತೊಂದರೆಯಾಗಬಾರದು, ಇದೇ ನನ್ನ ಬೇಡಿಕೆ!' ಅದರಂತೆ ಮುಂದೆ ಎಷ್ಟೋ ವರುಷಗಳ ವರೆಗೆ ಸುಲ್ತಾನನ ಸೈನ್ಯವು ಗುಜರಾತದ ಮೇಲೆ ದಂಡೆತ್ತಿ ಬರಲಿಲ್ಲ. ಇದರಿಂದ ವೀರಧವಲನ ಪ್ರಜೆಗಳು ವಸ್ತುಪಾಲನನ್ನು ಬಾಯತುಂಬ ಹೊಗಳಿದರು.

ಆ ಅಣ್ಣ-ತಮ್ಮಂದಿರ ಕೀರ್ತಿಯು ಸುತ್ತಲೂ ಹಬ್ಬಿತು. ಅವರಲ್ಲಿ ಬೇಕಾ-ದಷ್ಟು ದ್ರವ್ಯವೂ ಇತ್ತು. ಇನ್ನು ತಾವು ಪುಣ್ಯವನ್ನು ಗಳಿಸಬೇಕೆಂದು ಅವರಿಗೆ ಆಶೆಯಾಯಿತು. ಆದುದರಿಂದ ಅವರು ತಮ್ಮ ಹೆಂಡಿರು-ಮಕ್ಕಳನ್ನೂ ಧನ-ಸಂಪತ್ತನ್ನೂ ಕಟ್ಟಿಕೊಂಡು ಗಿರಿನಾರದ ಯಾತ್ರೆಗೆ ಹೊರಟರು. ನಡುದಾರಿಗೆ ಹೋಗಲು ಅಲ್ಲಿ-ಕಳ್ಳಕಾಕರಿಂದ ಬಹಳ ಭಯ ಉಂಟೆಂದು ಅವರಿಗೆ ತಿಳಿ-ಯಿತು. ಯಾತ್ರೆಯನ್ನು ಮುಗಿಸಿಕೊಂಡು ತಿರುಗಿ ಬರುವ ವರೆಗೆ, ಮಾರ್ಗದಲ್ಲಿಯೇ ಒಂದು ಕಡೆ ತಮ್ಮ ದ್ರವ್ಯವನ್ನು ಹೂಳಿಡಬೇಕೆಂದು ಅವರು ಯೋಚಿಸಿದರು. ಒಂದು ರಾತ್ರಿ ನೆಲವನ್ನು ಅಗಿಯತೊಡಗಿದರು. ಏನು ಆಶ್ಚರ್ಯ! ಸ್ವಲ್ಪ ಭೂಮಿಯನ್ನು ಅಗಿಯುತ್ತಲೇ ಹೊನ್ನು-ಮುತ್ತು-ರತ್ನಗಳಿಂದ ತುಂಬಿದ ಕೊಡಗಳು ಅವರಿಗೆ ಸಿಕ್ಕುವು.

'ಇಷ್ಟೆಲ್ಲ ದ್ರವ್ಯವನ್ನು ಎಲ್ಲಿ ಬಚ್ಚಿ ಇಡಬೇಕು?' ಎಂದು ಅವರು ವಿಚಾರ ಮಾಡತೊಡಗಿದರು. ಆಗ ತೇಜಪಾಲನ ಕುಶಲಹೆಂಡತಿಯಾದ ಅನುಪಮಾ ದೇವಿ ಹೇಳಿದಳು: 'ದೈವಯೋಗದಿಂದ ನಮಗೆ ದೊರೆತ ದ್ರವ್ಯವನ್ನು ಮತ್ತೆ ಭೂಮಿಯಲ್ಲಿ ಅಡಗಿಸಿ ಇಟ್ಟರೆ ಏನು ಪ್ರಯೋಜನ? ಅದನ್ನು ಎಲ್ಲರೂ ಕಣ್ತುಂಬ ನೋಡುತ್ತಿರಬೇಕು; ಆದರೆ ಯಾರಿಗೂ ಕೈಹಚ್ಚಲಿಕ್ಕೆ ಬಂದಿರಬಾರದು. ಹೀಗೆ ಒಂದು ಎತ್ತರ ಸ್ಥಳದಲ್ಲಿ ಅದನ್ನು ಇಡಿರಿ!' ಬುದ್ಧಿವಂತ ವಸ್ತುಪಾಲನು ಕೂಡಲೆ ಅವಳ ಮಾತಿನ ಅರ್ಥವನ್ನು ತಿಳಿದುಕೊಂಡ; ಅತಿ ಎತ್ತರವಾದ ಅಬೂ ಪರ್ವತದಲ್ಲಿ ತಮ್ಮ ಹಣದಿಂದ ಸುಂದರ ಮಂದಿರವನ್ನು ಕಟ್ಟಿಸಬೇಕೆಂದು ಗೊತ್ತುಮಾಡಿದ.

ವಸ್ತುಪಾಲ-ತೇಜಪಾಲರು ಮೊದಲು ಅಬೂಪರ್ವತದಲ್ಲಿಯೂ ಅನಂತರ ಶತ್ರುಂಜಯ ಪರ್ವತದಲ್ಲಿಯೂ ಜೈನಮಂದಿರಗಳನ್ನು ಕಟ್ಟಿಸಿದರು. ಅಬೂ ಬೆಟ್ಟದ ಮೇಲಿನ ದೇವಾಲಯವು ಜಗತ್ಪ್ರಸಿದ್ಧವಾಗಿದೆ. ಎಲ್ಲ ಕಟ್ಟಡವನ್ನೂ ಸಂಗಮರವರಿ ಕಲ್ಲುಗಳಿಂದ ತಯಾರಿಸಿದ್ದಾರೆ. ಕಲ್ಲಿನಲ್ಲಿ ಎಲ್ಲೆಲ್ಲಿಯೂ ನಕ್ಷೆಯ ಕೆಲಸವನ್ನು ಒಳ್ಳೆಯ ಕುಶಲತೆಯಿಂದ ಮಾಡಿದ್ದಾರೆ. ಭಾರತೀಯರ

ಕೈಕುಸುರಿನ ಕಲೆಯು ಅಲ್ಲಿ ಎದ್ದು ಕಾಣುತ್ತದೆ. ಅದನ್ನು ಕಟ್ಟಿಸಲು ೧೨ ಕೋಟಿ ೫೩ ಲಕ್ಷ ರೂಪಾಯಿಗಳು ವೆಚ್ಚವಾದುವೆಂದು ಹೇಳುತ್ತಾರೆ. ವಸ್ತುಪಾಲ ಹಾಗು ತೇಜಪಾಲರ ಹೆಂಡಂದಿರು ಸಹ, ತಮ್ಮ ಹೆಸರು ಉಳಿಯ ಬೇಕೆಂದು ಆ ಮಂದಿರದಲ್ಲಿ ಎರಡು ಗವಾಕ್ಷರಗಳನ್ನು ಮಾಡಿಸಿದ್ದಾರೆ. ಅವುಗಳಿಗೆ ೧೮ ಲಕ್ಷ ರೂಪಾಯಿಗಳು ವೆಚ್ಚವಾಗಿವೆ ಎಂದು ಹೇಳುವರು. ಅಬೂಬೆಟ್ಟದ ನಿಸರ್ಗ ಸೌಂದರ್ಯದ ಮಧ್ಯದಲ್ಲಿ ಇರುವ ಈ ದೇವಾಲಯ ಗಳನ್ನು ನೋಡಲು ದೇಶದ ಮೂಲೆ-ಮೂಲೆಗಳಿಂದಲೂ ಜನರು ಬರುತ್ತಾರೆ.

## ಅಭ್ಯಸನಗಳು

೧. ವೀರಧವಲ ದೊರೆಯು ವಸ್ತುಪಾಲ-ತೇಜಪಾಲರನ್ನು ಏಕೆ ಬರಮಾಡಿ ಕೊಂಡನು?

೨. ದಿಲ್ಲಿಯ ಸುಲ್ತಾನನ ತಾಯಿಗೆ ವಸ್ತುಪಾಲನು ಯಾವ ರೀತಿಯಿಂದ ಸಹಾಯ ಮಾಡಿದನು?

೩. ದಿಲ್ಲಿಯ ಸುಲ್ತಾನನು ಗುಜರಾತಪ್ರಾಂತದ ಮೇಲೆ ಕೊನೆಯವರೆಗೆ ದಾಳಿ ಯನ್ನು ಏಕೆ ಮಾಡಲಿಲ್ಲ?

೪. ವಸ್ತುಪಾಲ-ತೇಜಪಾಲರು ಗಿರಿನಾರ ಯಾತ್ರೆಗೆ ಹೋದಾಗ ಹಾದಿಯಲ್ಲಿ ಏನಾಯಿತು?

೫. ಇವರು ಅಬೂಬೆಟ್ಟದ ಮೇಲೆ ಏನು ಕಟ್ಟಿಸಿದರು?

೬. ಇವರಲ್ಲಿ ಕಂಡುಬರುವ ಮಹತ್ತ್ವದ ಗುಣಗಳನ್ನು ನಿಮ್ಮ ಮಾತುಗಳಲ್ಲಿ ಬರೆಯಿರಿ.

# ೧೬. ಸಂತ ಜ್ಞಾನದೇವ

ಮಹಾರಾಷ್ಟ್ರದಲ್ಲಿ ಹಲವುಜನ ಸಾಧು-ಸಂತರು ಆಗಿಹೋಗಿದ್ದಾರೆ. ಅವರಲ್ಲಿ ಸಂತ ಜ್ಞಾನದೇವನು ಇಡಿಯ ಭಾರತದ ತುಂಬ ಪ್ರಸಿದ್ಧಿಯನ್ನು ಪಡೆದಿದ್ದಾನೆ.

ಹೈದರಾಬಾದ ರಾಜ್ಯದಲ್ಲಿ ಪೈಠಣದ ಹತ್ತಿರ ಆಪೇಗಾಂವ ಎಂದೊಂದು ಹಳ್ಳಿ ಇದೆ. ಅಲ್ಲಿ ವಿಟ್ಠಲಪಂತನೆಂಬ ಒಬ್ಬ ಬ್ರಾಹ್ಮಣನಿದ್ದನು. ಚಿಕ್ಕಂದಿನಿಂದಲೆ ಅವನಿಗೆ ದೇವ-ಧರ್ಮಗಳ ಕಡೆಗೆ ಹೆಚ್ಚು ಒಲವು. ಲಗ್ನವನ್ನು ಮಾಡಿಕೊಳ್ಳದೆ ಸಂನ್ಯಾಸಿಯಾಗಬೇಕೆಂದು ಅವನ ಮನಸ್ಸು. ಆದರೆ ಹಿರಿಯರ



ಜ್ಞಾನದೇವ

ಒತ್ತಾಯಕ್ಕೆ ಒಪ್ಪಿಕೊಂಡು ಲಗ್ನವಾದನು. 'ಆಳಂದಿ' ಗ್ರಾಮದ ಕುಲಕರಣಿಯ ಮಗಳು ರುಕ್ಮಿಣಿಬಾಯಿ ಎಂಬಾಕೆಯೆ ಅವನ ಹೆಂಡತಿ. ಲಗ್ನವಾದ ತುಸುದಿನಗಳಲ್ಲಿಯೆ ವಿಟ್ಠಲಪಂತನ ತಂದೆ-ತಾಯಿಗಳು ತೀರಿಕೊಂಡರು. ಮೊದಲೇ ಪ್ರಪಂಚದ ಕಡೆಗೆ ಲಕ್ಷ್ಯವಿಲ್ಲದ ಪಂತನಿಗೆ ಈಗ ಜೀವನವೇ ಬೇಡವಾಯಿತು. ಒಂದುದಿನ ಅವನು ಯಾರಿಗೂ ಹೇಳದೆ ಮನೆಬಿಟ್ಟು ಹೊರಟನು. ಕಾಶಿಗೆ ಹೋಗಿ ಅಲ್ಲಿ ರಾಮಾನಂದಸ್ವಾಮಿ ಎಂಬವರಿಂದ ದೀಕ್ಷೆಯನ್ನು ಪಡೆದನು; ಅಲ್ಲಿಯೇ ಇರಹತ್ತಿದನು.

ಒಮ್ಮೆ ರಾಮಾನಂದ ಸ್ವಾಮಿಗಳು ತೀರ್ಥಯಾತ್ರೆ ಮಾಡುತ್ತ ಆಳಂದಿಗೆ ಬಂದರು. ಆಳಂದಿಯಲ್ಲಿ ರುಕ್ಮಿಣಿಬಾಯಿಯು ಸ್ವಾಮಿಗಳ ದರ್ಶನವನ್ನು ಪಡೆದು ಭಕ್ತಿಭಾವದಿಂದ ಅವರಿಗೆ ನಮಸ್ಕಾರ ಮಾಡಿದಳು. ಸ್ವಾಮಿಗಳು

'ಪುತ್ರವತೀಭವ' ಎಂದು ಆಶೀರ್ವಾದ ಮಾಡಿದರು. ಆಗ ರುಕ್ಮಿಣಿಬಾಯಿಯ ಚಿತ್ತವು ಒಂದು ವಿಚಿತ್ರ ಬಗೆಯದಾಯಿತು. ಇದಕ್ಕೆ ಕಾರಣವೇನೆಂದು ಸ್ವಾಮಿಗಳು ಕೇಳಿದರು. ಆಗ ರುಕ್ಮಿಣಿಬಾಯಿಯು ತನ್ನ ಗಂಡನ ವೃತ್ತಾಂತ ವನ್ನು ಹೇಳಿದಳು. ಸ್ವಾಮಿಗಳು ಆಕೆಯನ್ನು ಸಮಾಧಾನಮಾಡಿ ಮನೆಗೆ ಕಳುಹಿದರು. ಮುಂದೆ ಕಾಶಿಗೆ ಹೋದಬಳಿಕ ಸ್ವಾಮಿಗಳು, ವಿಟ್ಠಲಪಂತನಿಗೆ ಸಂನ್ಯಾಸವನ್ನು ಬಿಟ್ಟು ಮನೆಗೆ ಹೋಗಿ ಸಂಸಾರಮಾಡಲು ಅಪ್ಪಣೆ ಮಾಡಿದರು.

ಗುರುಗಳ ಅಪ್ಪಣೆಯ ಮೇರೆಗೆ ವಿಟ್ಠಲಪಂತನು ಹನ್ನೆರಡು ವರುಷಗಳ ತರುವಾಯ ತಿರುಗಿ ಆಪೇಗಾಂವಕ್ಕೆ ಬಂದನು. ರುಕ್ಮಿಣಿಬಾಯಿಯ ಕೂಡ ಸಂಸಾರವನ್ನು ಪ್ರಾರಂಭಿಸಿದನು. ಒಮ್ಮೆ ಸಂನ್ಯಾಸಿಯಾದವನು ಮತ್ತೆ ಪ್ರಪಂಚವನ್ನು ಮಾಡಬಾರದೆಂದು ಸ್ಮೃತಿಯ ನಿಯಮವಿದೆ. ಅದಕ್ಕೆ ವಿರುದ್ಧ ವಾಗಿ ನಡೆದುದರಿಂದ, ವಿಟ್ಠಲಪಂತನನ್ನು ಜನರು ಸಮಾಜದ ಹೊರಗೆ ಇಟ್ಟರು. ಇದಕ್ಕೆ ಹೆದರದೆ, ದೇವರಪೂಜೆ-ದೇವರ ಧ್ಯಾನದಲ್ಲಿ ಮಗ್ನರಾಗಿ ಆ ಗಂಡ-ಹೆಂಡಿರು ದಿನಗಳನ್ನು ಕಳೆಯತೊಡಗಿದರು. ಅವರಿಗೆ ಕಾಲಾನುಸಾರವಾಗಿ ನಾಲ್ಕುಜನ ಮಕ್ಕಳಾದರು. ನಿವೃತ್ತಿ, ಜ್ಞಾನದೇವ, ಸೋಪಾನ ಮತ್ತು ಮುಕ್ತಾಬಾಯಿ ಈ ನಾಲ್ವರು ಮಕ್ಕಳು, ತಂದೆ-ತಾಯಿಗಳ ಸಹವಾಸದ ಲ್ಲಿಯೇ ಬೆಳೆಯತೊಡಗಿದರು. ಅವರು ಸಮಾಜದಿಂದ ಹೊರಗೆ ಇರುವ ರೆಂದು ಬೇರೆ ಬ್ರಾಹ್ಮಣರ ಮಕ್ಕಳು ಅವರ ಜೊತೆಗೆ ಆಡಲು ಬರುತ್ತಿರಲಿಲ್ಲ.

ಹಿರಿಯಮಗ ನಿವೃತ್ತಿಯು ಏಳು ವರುಷದವನಾಗಲು, ವಿಟ್ಠಲಪಂತನು ಮಗನ ಮುಂಜಿಯನ್ನು ಮಾಡಲು ಬಯಸಿದನು. ಆದರೆ ಊರಲ್ಲಿಯ ಎಲ್ಲ ಬ್ರಾಹ್ಮಣರೂ ಇದಕ್ಕೆ ಒಪ್ಪಲಿಲ್ಲ. 'ಸಂನ್ಯಾಸಿಯ ಮಕ್ಕಳಿಗೆ ಮುಂಜಿಯೆ?' ಎಂದು ಹೀಯಾಳಿಸಿದರು. ತನ್ನಿಂದಾದ ತಪ್ಪಿಗೆ ಪ್ರಾಯಶ್ಚಿತ್ತವನ್ನು ಪಡೆಯ ಲಿಕ್ಕೂ ವಿಟ್ಠಲಪಂತನು ಸಿದ್ಧನಾದನು. ಆದರೆ ಈ ತಪ್ಪಿಗೆ ಜೀವತ್ಯಾಗವೇ ತಕ್ಕ ಪ್ರಾಯಶ್ಚಿತ್ತವೆಂದು ಪಂಡಿತರು ಹೇಳಿದರು. ತಮ್ಮ ಪ್ರಾಣಹೋದರೂ ಅಡ್ಡಿಯಿಲ್ಲ. ಮಕ್ಕಳಿಗೆ ಮುಂಜಿಯಾಗಲಿ ಎಂದು ಭಾವಿಸಿ, ವಿಟ್ಠಲಪಂತ-ರುಕ್ಮಿಣಿಬಾಯಿಯವರು, ಗಂಗಾನದಿಯಲ್ಲಿ ಹಾರಿಕೊಂಡು ಪ್ರಾಣಬಿಟ್ಟರು. ನಾಲ್ಕೂ ಚಿಕ್ಕಮಕ್ಕಳು ಪರದೇಶಿಗಳಾದುವು.

ನಿವೃತ್ತಿ ಮತ್ತು ಜ್ಞಾನದೇವರು ವಯಸ್ಸಿನಿಂದ ಚಿಕ್ಕವರಾದರೂ ಅವರಲ್ಲಿ ಅಗಾಧವಾದ ಜ್ಞಾನಶಕ್ತಿಯು ಇತ್ತು. ಅವರು ತಮ್ಮ ಮುಂಜಿ ಆಗಲೇ-ಬೇಕೆಂದು ನಿರ್ಧರಿಸಿದರು. ಅದರಂತೆ ಊರ ಬ್ರಾಹ್ಮಣರನ್ನು ಕೂಡಿಸಿ ಗಟ್ಟಿ-ಯಾಗಿ ಕೇಳಿದರು. ಆಗ ಜನರು 'ಪೈಠಣದಲ್ಲಿ ವಿದ್ವಾಂಸರಾದ ಬ್ರಾಹ್ಮಣರಿರು

ವರು. ಅವರು ಒಪ್ಪಿಗೆಕೊಟ್ಟರೆ ನಮ್ಮದೇನು ವಿರೋಧವಿಲ್ಲ' ಎಂದು ಹೇಳಿದರು. ಆ ವಿದ್ವಾಂಸರ ಒಪ್ಪಿಗೆಯನ್ನು ಕೇಳಲು ಆ ನಾಲ್ವರೂ ಮಕ್ಕಳು ಪೈಠಣಕ್ಕೆ ಹೋದರು. ಮೊದ-ಮೊದಲು ಪೈಠಣದ ಬ್ರಾಹ್ಮಣರು ಈ ಚಿಕ್ಕ ಬಾಲಕರ ಕಡೆಗೆ ಲಕ್ಷ್ಯಕೊಡಲಿಲ್ಲ. ಆದರೆ ಜ್ಞಾನೇಶ್ವರನು ಅವರನ್ನು ಸುಮ್ಮನೆ ಬಿಡಲಿಲ್ಲ. ಎಲ್ಲ ಬ್ರಾಹ್ಮಣರನ್ನು ಕೂಡಿಸಿದನು. ತಮ್ಮ ಮುಂಜಿಯ ವಿಚಾರವನ್ನು ಅವರ ಮುಂದೆ ಇಟ್ಟನು. 'ಸಂನ್ಯಾಸಿಯ ಮಕ್ಕಳಿಗೆ ಮುಂಜಿ ಹೇಗೆ ಸಾಧ್ಯ?' ಎಂದು ಕೂಡಿದ ಪಂಡಿತರಲ್ಲಿ ತಲೆಗೊಂದು ಮಾತಾಡಲಾರಂಭಿಸಿದರು. ವೇದದಲ್ಲಿಯ ವಾಕ್ಯಗಳನ್ನು ಆಧಾರವಾಗಿ ಉಸುರತೊಡಗಿದರು. ಆಗ ಜ್ಞಾನದೇವನು 'ಅರ್ಥ ತಿಳಿಯದೆ ಕೋಣವು ಸಹ ವೇದವಾಕ್ಯಗಳನ್ನು ಹೇಳುವುದು' ಎಂದು ಅಂದನು; ಅಲ್ಲಿಯೇ ನಿಂತಿದ್ದ ಒಂದು ಕೋಣನ ಬಾಯಿಂದ ವೇದವಾಕ್ಯಗಳನ್ನು ಹೇಳಿಸಿದನಂತೆ. ನೆರೆದ ಪಂಡಿತರು ಇದನ್ನು ಕಂಡು ಬೆರಗಾದರು; 'ಇವನೊಬ್ಬ ದೇವತಾಪುರುಷನಿರಬೇಕು' ಎಂದು ಜ್ಞಾನದೇವನನ್ನು ಮನ್ನಿಸಿದರು. ಪೈಠಣದ ಬ್ರಾಹ್ಮಣರು ಆ ನಾಲ್ಕೂ ಮಕ್ಕಳಿಗೆ ದೀಕ್ಷೆಯನ್ನು ಕೊಟ್ಟು, ಮರಳಿ ತಮ್ಮ ಸಮಾಜದಲ್ಲಿ ಸೇರಿಸಿಕೊಂಡರು. ಬಳಿಕ ಮೂವರು ಗಂಡುಮಕ್ಕಳ ಮುಂಜಿಯೂ ಆಯಿತು.

ಕೆಲವು ದಿನಗಳ ತರುವಾಯ ಜ್ಞಾನದೇವನು ತನ್ನ ಅಣ್ಣ-ತಮ್ಮಂದಿರನ್ನೂ ತಂಗಿಯನ್ನೂ ಕರೆದುಕೊಂಡು ತೀರ್ಥಯಾತ್ರೆಗೆ ಹೊರಟನು. ದಾರಿಯಲ್ಲಿ ವಿಸೋಬಾ ಖೇಚರ, ಗೋರಾ ಕುಂಬಾರ, ಚೋಖಾಮೇಳ, ನರಹರಿ ಸೋನಾರ ಮುಂತಾದ ಬೇರೆ ಸಂತರೂ ಬಂದು ಕೂಡಿದರು. ಜ್ಞಾನದೇವನು ಮೊದಲು ಪಂಢರಪುರಕ್ಕೆ ಹೋದನು. ಅಲ್ಲಿ ಪಂಢರೀನಾಥ (ವಿಠೋಬಾ)ನ ದರ್ಶನವಾಯಿತು. ವಿಠೋಬಾನ ಪರಮಭಕ್ತನಾದ ನಾಮದೇವನ ದರ್ಶನವೂ ಆಯಿತು. ಮುಂದೆ ನಾಮದೇವನನ್ನೂ ಸಂಗಡ ಕರೆದುಕೊಂಡು ಜ್ಞಾನದೇವನು ಉಜ್ಜಯಿನಿ, ಪ್ರಯಾಗ, ಕಾಶಿ, ಗಯಾ, ಅಯೋಧ್ಯಾ, ಗೋಕುಲ, ವೃಂದಾವನ ದ್ವಾರಕಾ ಮತ್ತು ಗಿರಿನಾರ ಮುಂತಾದ ಪವಿತ್ರಕ್ಷೇತ್ರಗಳಲ್ಲಿ ಸಂಚರಿಸಿ ತಿರುಗಿ ಎಲ್ಲರೊಡನೆ ಪಂಢರಪುರಕ್ಕೆ ಬಂದನು.

ಜ್ಞಾನದೇವ ಹಾಗು ಅವನ ಬಂಧು-ಭಗಿನಿಯರ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು. ಪಂಡಿತರು, ಪಾಮರರು, ಭಕ್ತರು, ಯೋಗಿಗಳು ಇವರ ದರ್ಶನಕ್ಕೆ ಬರಹತ್ತಿದರು. ಈ ಹೊತ್ತಿನಲ್ಲಿ ಚಾಂಗದೇವನೆಂಬ ಒಬ್ಬ ಯೋಗಿಯು ಪ್ರಸಿದ್ಧನಾಗಿದ್ದನು. ಅವನು ಜ್ಞಾನದೇವನನ್ನು ಕಾಣಲು ಬಯಸಿದನು. ಅವನ ಮುಂದೆ ತನ್ನ ಪಾಂಡಿತ್ಯವನ್ನು ತೋರಿಸಬೇಕೆಂದು, ಚಾಂಗದೇವನು ಉಗ್ರವಾದ ಒಂದು ಹುಲಿಯ ಮೇಲೆ ಹತ್ತಿದನು. ಕೈಯಲ್ಲಿ ಚಾಬೂಕಿನಂತೆ

ಹಾವನ್ನು ಹಿಡಿದುಕೊಂಡು, ಜ್ಞಾನದೇವನ ದರ್ಶನಕ್ಕೆ ಬಂದನು. ಆಗ ಜ್ಞಾನದೇವನು ತನ್ನ ಬಂಧು-ಭಗಿನಿಯರೊಂದಿಗೆ ಒಂದು ಗೀಳುಗೋಡೆಯು ಮೇಲೆ ಕುಳಿತಿದ್ದನಂತೆ. ಚಾಂಗದೇವನು ಬರುವ ಸುದ್ದಿಯನ್ನು ಕೇಳಿ ಜ್ಞಾನ ದೇವನು ಗೋಡೆಯನ್ನೇ ನಡೆಸಿಕೊಂಡು ಹೋಗಿ ಇದಿರಾದನಂತೆ. ಇದನ್ನು ಕಂಡು ಚಾಂಗದೇವನು ತಲೆಬಾಗಿ ಜ್ಞಾನದೇವನಿಗೆ ಶರಣಾಗತನಾದನು. ಹೀಗೆ ಚಿಕ್ಕವಯಸ್ಸಿನಲ್ಲಿಯೇ ಕೀರ್ತಿಪಡೆದು ಜ್ಞಾನದೇವನು, ತನ್ನ ೨೨ನೆಯ ವಯಸ್ಸಿನಲ್ಲಿ ಆಳಂದಿಯಲ್ಲಿ ಜೀವಂತಸಮಾಧಿಯನ್ನು ಹೊಂದಿದನು.

ಸಂತ ಜ್ಞಾನದೇವನು ಇನ್ನೂ ೧೫ ವರುಷದವನಿರುವಾಗಲೇ 'ಭಾವಾರ್ಥ ದೀಪಿಕಾ' ಎಂಬ ಪ್ರಸಿದ್ಧವಾದ ಗ್ರಂಥವನ್ನು ಬರೆದನು. ಇದು 'ಜ್ಞಾನೇಶ್ವರಿ' ಎಂದು ಹೆಸರನ್ನು ಪಡೆದಿದೆ. ಇದು ಮರಾಠೀ ಭಾಷೆಯಲ್ಲಿ ಇದೆ. ಇದನ್ನು ಓದಿ ಸಾಮಾನ್ಯ ಜನರೂ ಭಗವದ್ಗೀತೆಯ ಜ್ಞಾನವನ್ನು ಮಾಡಿಕೊಳ್ಳಬಲ್ಲರು. ಜ್ಞಾನದೇವನು ಭಕ್ತಿಮಾರ್ಗವನ್ನು ಪ್ರಚಾರಮಾಡಿದನು. ಅವನು ಪ್ರಾರಂಭಿಸಿದ 'ವಾರಕರಿ' ಪಂಥವು ಇಂದಿಗೂ ಪ್ರಸಿದ್ಧವಿದೆ. ಈ ಪಂಥದವರು ಜಾತಿಭೇದ-ಲಿಂಗಭೇದಗಳನ್ನು ಎಣಿಸುವುದಿಲ್ಲ. 'ಎಲ್ಲರೂ ಸದಾಚಾರದಿಂದ ನಡೆದು ಅನನ್ಯಭಾವದಿಂದ ದೇವರನ್ನು ಭಜಿಸಿದರೆ ಮುಕ್ತಿ ಸಿಗುವುದು' ಎಂಬುದು ಈ ಪಂಥದ ತತ್ತ್ವವಾಗಿದೆ.

## ಅಭ್ಯಾಸನಗಳು

೧. ಜ್ಞಾನದೇವನ ತಂದೆ-ತಾಯಿಗಳಾರು?

೨. ಇವನ ತಂದೆ-ತಾಯಿಗಳು ಗಂಗಾನದಿಯಲ್ಲಿ ಹಾರಿ ಪ್ರಾಣವನ್ನು ಏಕೆ ಬಿಟ್ಟರು?

೩. ನಿವೃತ್ತಿ, ಜ್ಞಾನದೇವ ಮತ್ತು ಸೋಪಾನ ಇವರ ಮುಂಜಿಯನ್ನು ಮಾಡಲು ಜನರು ಒಪ್ಪಿಗೆಯನ್ನು ಏಕೆ ಕೊಡಲಿಲ್ಲ?

೪. ಪೈಠಣದ ಬ್ರಾಹ್ಮಣರು ಈ ಮೂವರೂ ಅಣ್ಣ-ತಮ್ಮಂದಿರ ಮುಂಜಿಗೆ ಮುಂದೆ ಒಪ್ಪಿಗೆಯನ್ನು ಏಕೆ ಕೊಡಲಿಲ್ಲ?

೫. ಜ್ಞಾನದೇವನು ಯಾವ ಯಾವ ಪವಿತ್ರಕ್ಷೇತ್ರಗಳ ಯಾತ್ರೆಯನ್ನು ಮಾಡಿದನು?

೬. ಇವನು ಮರಾಠೀ ಭಾಷೆಯಲ್ಲಿ ಬರೆದ ಪವಿತ್ರಗ್ರಂಥವು ಯಾವುದು?

೭. ಚಾಂಗದೇವನೆಂಬ ಯೋಗಿಯು ಜ್ಞಾನದೇವನಿಗೆ ಏಕೆ ಶರಣಾಗತನಾದನು?

೮. ಜ್ಞಾನದೇವನ ಕಥೆಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೧೭. ವಿದ್ಯಾರಣ್ಯರು

ತುಂಗಭದ್ರಾ ನದಿಯ ದಂಡೆಯ ಮೇಲೆ, ಆನೆಗೊಂದೆ ಎಂಬ ಊರು ಇದೆ. ಅದು ಮೊದಲು ಒಂದು ಚಿಕ್ಕ ರಾಜಧಾನಿಯಾಗಿತ್ತು. ಹಿಂದೆ ಅಲ್ಲಿ, ಮಾಯಣ್ಣಭಟ್ಟನೆಂಬ ವಿದ್ವಾಂಸನೂ ಸಾತ್ತ್ವಿಕನೂ ಆದ ಒಬ್ಬ ಬ್ರಾಹ್ಮಣನು ಇರುತ್ತಿದ್ದನು. ಶ್ರೀಮತಿ ಎಂಬವಳು ಆತನ ಪತ್ನಿ. ಭಟ್ಟನು ಬಡತನದಿಂದಲೆ ಬಾಳುವೆಯನ್ನು ಸಾಗಿಸುತ್ತಿದ್ದನು. ಅವನಿಗೆ ಮಾಧವ, ಸಾಯಣ, ಭೋಗ-ನಾಥ (ಇವನಿಗೆ ಸೋಮನಾಥನೆಂಬ ಹೆಸರು ಇತ್ತು) ಎಂದು ಮೂವರು




ಹುಕ್ಕಬುಕ್ಕರಿಗೆ ವಿದ್ಯಾರಣ್ಯರ ಹರಕೆ

ಮಕ್ಕಳು ಹುಟ್ಟಿದರು. ಅವರಲ್ಲಿ ಹಿರಿಯವನಾದ ಮಾಧವನೇ "ವಿದ್ಯಾರಣ್ಯ" ಎಂಬ ಹೆಸರನ್ನು ಪಡೆದು, ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಕಾರಣನಾದನು.

ಮಾಧವನ ಬುದ್ಧಿ ಬಲು ಹರಿತವಾದುದು. ಅವನ ದೊಡ್ಡ ಗುಣಗಳು ಅವನ ಬಾಲ್ಯದಲ್ಲಿಯೇ ಕಂಡುಬಂದುವು. ಚಿಕ್ಕತನದ ವಿದ್ಯಾಭ್ಯಾಸ ಮನೆಯಲ್ಲಿ ತಂದೆಯ ಬಳಿಯಲ್ಲಿಯೆ ಆಯಿತು. ಅವನು ಅಲ್ಲಿ ಕನ್ನಡ-ಸಂಸ್ಕೃತ ಭಾಷೆಗಳನ್ನು ಕಲಿತನು. ಬಳಿಕ ಸರ್ವಜ್ಞ ವಿಷ್ಣುಶರ್ಮರೆಂಬ ಗುರುಗಳ ಬಳಿ-ಯಲ್ಲಿದ್ದುಕೊಂಡು ಸಂಸ್ಕೃತಸಾಹಿತ್ಯ, ವ್ಯಾಕರಣ, ನ್ಯಾಯ ಮೊದಲಾದುವುಗಳನ್ನು ಓದಿಕೊಂಡನು. ಗುರುಗಳು ಅವನನ್ನು ಬಲು ಪ್ರೀತಿಸುತ್ತಿದ್ದರು.

ಅವನ ಬುದ್ಧಿವಂತಿಕೆಯನ್ನು ಕಂಡು ಗುರುಗಳು ಅವನಿಗೆ "ಸರ್ವಜ್ಞ" ಎಂಬ ಬಿರುದನ್ನು ಕೊಟ್ಟರು. ಮಾಧವನು ಅಷ್ಟಕ್ಕೆ ವಿದ್ಯಾಭ್ಯಾಸವನ್ನು ಮುಗಿಸಲಿಲ್ಲ. ತನ್ನ ತಮ್ಮನಾದ ಸಾಯಣನನ್ನು ಕರೆದುಕೊಂಡು ಕಂಚಿಗೆ ಹೋದನು. ಆಗಿನ ಕಾಲದಲ್ಲಿ ಕಂಚಿಯು ವಿದ್ಯಾಭ್ಯಾಸಕ್ಕೆ ಹೆಸರಾದ ಪಟ್ಟಣವಾಗಿತ್ತು. ಅಲ್ಲಿ ವಿದ್ಯಾತೀರ್ಥಸ್ವಾಮಿಗಳೆಂಬವರು ಪ್ರಸಿದ್ಧ ಪಂಡಿತರಿದ್ದರು. ಮಾಧವ, ಸಾಯಣ, ಇಬ್ಬರೂ ಸ್ವಾಮಿಗಳ ಬಳಿಯಲ್ಲಿಯೆ ಇದ್ದುಕೊಂಡು, ಅವರ ಸೇವೆಮಾಡುತ್ತ ವೇದ-ಶಾಸ್ತ್ರಗಳನ್ನು ಅಭ್ಯಾಸಮಾಡಿದರು. ಮಾಧವನ ಪಾಂಡಿತ್ಯವನ್ನು ಕಂಡು ಗುರುಗಳು ಅವನನ್ನು "ವಿದ್ಯಾರಣ್ಯ" ಎಂದು ಕರೆಯಹತ್ತಿದರು. ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಅಣ್ಣ, ತಮ್ಮ ಇಬ್ಬರೂ ಊರಿಗೆ ಬಂದರು.

ಮುಂದೆ ಕೆಲವೇ ದಿನಗಳಲ್ಲಿ ಮಾಧವನ ತಂದೆಯು ತೀರಿಹೋದನು. ಹಿರಿಯವನಾದುದರಿಂದ ಮನೆತನದ ಭಾರವೆಲ್ಲ ಮಾಧವನ ಮೇಲೆಯೇ ಬಿದ್ದಿತು. ಬಡತನದ ಭವಣೆಯನ್ನು ಹಿಂಗಿಸುವ ಮಾರ್ಗವು ಅವನಿಗೆ ತೋಚ-ದಾಯಿತು. ಆಗ ಮಾಧವನು ಪಾಠಶಾಲೆಯನ್ನು ತೆರೆದು ತಾನೇ ಆಚಾರ್ಯನಾದನು. ಅವನ ಬಳಿ ನೂರಾರು ಜನ ವಿದ್ಯಾರ್ಥಿಗಳು ನಾನಾ ಶಾಸ್ತ್ರಗಳನ್ನು ಕಲಿಯಲು ಬರಹತ್ತಿದರು. ಇದರಿಂದ ಅವನ ಖ್ಯಾತಿ ಕರ್ನಾಟಕದ ತುಂಬ ಹಬ್ಬಿತು. ಮಾಧವಾಚಾರ್ಯನು ಸಂಸ್ಕೃತ ಭಾಷೆಯಲ್ಲಿ ಅನೇಕ ಗ್ರಂಥಗಳನ್ನು ಬರೆದನು. ಅಲ್ಲದೆ ತನ್ನ ತಮ್ಮನಾದ ಸಾಯಣನಿಂದ ವೇದಕ್ಕೆ ಭಾಷ್ಯ-ಬರೆಸಿದನು.

ಆ ಕಾಲದಲ್ಲಿ ಕರ್ನಾಟಕವು ಬಹಳ ಹೀನಸ್ಥಿತಿಗೆ ಬಂದಿತ್ತು. ಉತ್ತರದಿಂದ ಆಗಾಗ ನುಗ್ಗಿಬರುತ್ತಿರುವ ಮುಸಲ್ಮಾನರ ದಾಳಿಯಿಂದ ಜನರು ಬೇಸತ್ತು ಹೋಗಿದ್ದರು. ದಕ್ಷಿಣಭಾರತದಲ್ಲಿ ಪಲ್ಲವರ ಮತ್ತು ಹೊಯ್ಸಳರ ರಾಜ್ಯಗಳು ಹಾಳಾಗಿ ಹೋಗಿದ್ದುವು. ಆನೆಗೊಂದೆಯ ರಾಜನಾದ ಜಂಬುಕೇಶ್ವರನು, ಮುಸಲ್ಮಾನರ ಕಾಟಕ್ಕೆ ಬೇಸತ್ತು ಹೆಂಡತಿ-ಮಕ್ಕಳೊಡನೆ ಬೆಂಕಿಯಲ್ಲಿ ಹಾರಿ-ಕೊಂಡು ಸತ್ತನು. ಇವೆಲ್ಲವುಗಳನ್ನು ಕಂಡು ವಿದ್ಯಾರಣ್ಯರು ಮರುಗಿದರು. "ಕನ್ನಡನಾಡಿಗೆ ಎಂತಹ ದುಃಸ್ಥಿತಿ ಬಂದಿತಲ್ಲ!" ಎಂದು ಯೋಚಿಸಿದರು. ಆನೆಗೊಂದೆಯ ಬಳಿಯಲ್ಲಿಯೇ ಇರುವ ಪಂಪಾಕ್ಷೇತ್ರಕ್ಕೆ ಬಂದರು. ಅಲ್ಲಿ ತುಂಗಭದ್ರಾನದಿಯ ದಂಡೆಯಲ್ಲಿ ಗುಡಿಸಿಲನ್ನು ಕಟ್ಟಿಕೊಂಡರು. ಅಲ್ಲಿಯೆ ಇದ್ದು ಹನ್ನೆರಡು ವರುಷಗಳ ಕಾಲ ತಪಸ್ಸನ್ನು ಮಾಡಿದರು. ಶ್ರೀಭುವನೇಶ್ವರಿಯನ್ನು ಪ್ರಾರ್ಥಿಸಿ ಮೆಚ್ಚಿಸಿಕೊಂಡರು. ಒಂದು ದಿನ ಅವರು ದೇವಿಯ ಧ್ಯಾನದಲ್ಲಿ ಮಗ್ನರಾಗಿರಲು "ಕರ್ನಾಟಕವನ್ನು ಉದ್ಧರಿಸಲು ಎದ್ದೇಳು" ಎಂದು

ದೇವಿಯು ಅಪ್ಪಣೆಮಾಡಿದಂತೆ ಎನಿಸಿತು. ಅವರು ತಪಶ್ಚರ್ಯವನ್ನು ಬಿಟ್ಟು ಎದ್ದರು; ಸ್ವರಾಜ್ಯಸ್ಥಾಪನೆಗೆ ಟೊಂಕಕಟ್ಟಿ ಸಿದ್ಧರಾದರು.

ಮುಸಲ್ಮಾನರು ಹೊಯ್ಸಳ ರಾಜ್ಯದ ಮೇಲೆ ಏರಿಬಂದರು; ಆಗ ನಡೆದ ಯುದ್ಧದಲ್ಲಿ ಹೊಯ್ಸಳ ಸೇನಾಪತಿಯಾಗಿದ್ದ ಸಂಗಮರಾಜನು ಮಡಿದನು. ಅವನ ಮಕ್ಕಳಾದ ಹುಕ್ಕ-ಬುಕ್ಕರೆಂಬ ವೀರ ಸಹೋದರರು, ಗತಿಯಿಲ್ಲದವರಾಗಿ ಅತ್ತಿತ್ತ ಅಲೆದಾಡುತ್ತಿದ್ದರು. ಘಟ್ಟದ ಮೇಲಿನ ಕುರುಬರ ಬಳಿಯಲ್ಲಿ ಇವರು ಆಶ್ರಯಹೊಂದಿದರು. ಒಂದು ದಿನ ಇವರಿಬ್ಬರೂ ಬೇಟೆಯಾಡುತ್ತ ಅತ್ತಿತ್ತ ಅಡ್ಡಾಡಿದರು. ಬಿಸಲಿನ ತಾಪಕ್ಕೆ ಬೇಸತ್ತು ಒಂದು ದೊಡ್ಡ ಮರದ ಕೆಳಗೆ ಹಾಸುಗಲ್ಲಿನ ಮೇಲೆ ಮಲಗಿದ್ದರು. ಆಗ ಒಂದು ನಾಗರಹಾವು ಬಂದು ಇವರ ತಲೆಯ ಹತ್ತಿರ ಹೆಡೆತೆಗೆದು ಆಡುತ್ತಿದ್ದಿತಂತೆ. ವಿದ್ಯಾರಣ್ಯರು ಈ ಚಮತ್ಕಾರವನ್ನು ಕಂಡರು. ಕೂಡಲೆ ಹಾವು ಸೆರೆಯಲ್ಲಿದ್ದ ಹೋರಿನಲ್ಲಿ ಹೋಯಿತು. ಅರಸುಮಕ್ಕಳಂತೆ ಶೋಭಿಸುತ್ತಿದ್ದ ಆ ಇಬ್ಬರೂ ಅಣ್ಣ-ತಮ್ಮಂದಿರನ್ನು ವಿದ್ಯಾರಣ್ಯರು ಎಬ್ಬಿಸಿದರು; ಅವರ ಸಮಾಚಾರವನ್ನು ಕೇಳಿಕೊಂಡರು. ಬಳಿಕ ಅವರನ್ನು ಕರೆದುಕೊಂಡು ತಮ್ಮ ಆಶ್ರಮಕ್ಕೆ ಹೋದರು. ಅಲ್ಲಿ ಅವರಿಗೆ ರಾಜನೀತಿಯನ್ನು ಚೆನ್ನಾಗಿ ಬೋಧಿಸಿ, ರಾಜ್ಯಸ್ಥಾಪನೆಯ ಉಪಾಯಗಳನ್ನೆಲ್ಲ ತಿಳಿಸಿದರಂತೆ.

ಬಳಿಕ ಹುಕ್ಕ-ಬುಕ್ಕರು ಸುತ್ತು-ಮುತ್ತಲಿನ ಕಾಡು-ನಾಡುಗಳಲ್ಲಿ ಸುತ್ತಾಡಿದರು. ಮುಸಲ್ಮಾನರ ದಾಳಿಯಿಂದ ಧೈರ್ಯಗುಂದಿ ದಿಕ್ಕೋಪಾಲಾಗಿದ್ದ ಜನರನ್ನು ಒಟ್ಟುಗೂಡಿಸಿದರು. ಅವರಲ್ಲಿ ಧೈರ್ಯವನ್ನು ತಂದುಕೊಟ್ಟರು. ಅವರ ಪ್ರೀತಿ-ವಿಶ್ವಾಸಗಳನ್ನು ಸಂಪಾದಿಸಿದರು. ಸೈನ್ಯವನ್ನು ಕೂಡಿಸಿದರು. ಆ ಸೈನಿಕರಿಗೆ ಸರಿಯಾದ ಶಿಕ್ಷಣವನ್ನು ಕೊಡಿಸಿದರು. ವಿದ್ಯಾರಣ್ಯರು ಅತ್ತಿತ್ತ ತಿರುಗಾಡಿ ಇವರಿಗೆ ಬೇಕಾದಷ್ಟು ದ್ರವ್ಯವನ್ನು ಕೂಡಿಸಿಕೊಟ್ಟರು. ಭುವನೇಶ್ವರೀ ದೇವಿಯು ಹೊನ್ನಿನ ಮಳೆಗರೆದಂತೆ ಆಯಿತು. ಇಡೀ ದೇಶವೇ ಅವರಿಗೆ ಸಹಾಯ ಮಾಡಿತು. ಕೊನೆಗೆ ಅವರು ಕನ್ನಡಿಗರದೊಂದು ಸ್ವತಂತ್ರ ರಾಜ್ಯವನ್ನು ಕಟ್ಟಿದರು. ಹಂಪೆಯ ಬಳಿ ಇರುವ ಬೆಟ್ಟದ ಸಾಲುಗಳ ನಡುವಿನ ದೊಡ್ಡ ಪ್ರದೇಶದಲ್ಲಿ, ಹೊಸದೊಂದು ಪಟ್ಟಣವನ್ನು ಕಟ್ಟಿದರು. ಅದಕ್ಕೆ ವಿಜಯನಗರವೆಂದು ಹೆಸರಿಟ್ಟರು. ಅದನ್ನೇ ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡರು. ಹುಕ್ಕನೇ ಹರಿಹರನೆಂಬ ಹೆಸರಿನಿಂದ ಮೊದಲನೆಯ ಅರಸನಾದನು. ವಿದ್ಯಾರಣ್ಯರು ರಾಜಗುರುಗಳೂ ಮಂತ್ರಿಯೂ ಆದರು. ಬಳಿಕ ವಿಜಯನಗರ ರಾಜ್ಯವು ದೊಡ್ಡ ಸಾಮ್ರಾಜ್ಯವಾಗಿ, ಸುಮಾರು ೨೫೦ ವರುಷಗಳ ವರೆಗೆ ತನ್ನ ವೈಭವವನ್ನು ಮೆರೆಸಿತು.

ವಿಜಯನಗರದ ಮೊದಲಿನ ರಾಜರಾದ ಹರಿಹರ, ಬುಕ್ಕರಾಜ ಇವರಿಬ್ಬರಿಗೂ ವಿದ್ಯಾರಣ್ಯರು ಮಂತ್ರಿಗಳಾಗಿದ್ದರು; ಇಬ್ಬರಿಂದಲೂ ರಾಜ್ಯವನ್ನು ಉತ್ತಮವಾದ ರೀತಿಯಲ್ಲಿ ಆಳಿದರು. ಅವರ ಆಳಿಕೆಯಲ್ಲಿ ಪ್ರಜೆಗಳು ಬಹಳ ಸುಖವಾಗಿ ಇದ್ದರು. ನಾಡು ಸುಖಸಂಪತ್ತಿನ ಬೀಡಾಗಿತ್ತು. ಜನರು ಧರ್ಮದಿಂದ ನಡೆಯುತ್ತಿದ್ದರು. ಬಳಿಕ ವಿದ್ಯಾರಣ್ಯರು ಸಂನ್ಯಾಸವನ್ನು ಸ್ವೀಕರಿಸಿದರು. ಶೃಂಗೇರಿಯ ಗುರುಪೀಠವನ್ನು ಏರಿ ಸದ್ಧರ್ಮವನ್ನು ಪ್ರಚಾರಗೊಳಿಸಿದರು.

ಹೀಗೆ ವಿದ್ಯಾರಣ್ಯರು ಮಹಾಪಂಡಿತರಾಗಿ, ರಾಜನೀತಿಕುಶಲರಾಗಿ, ಬ್ರಹ್ಮಜ್ಞಾನಿಗಳಾಗಿ "ಕರ್ನಾಟಕಸಿಂಹಾಸನ ಪ್ರತಿಷ್ಠಾಪನಾಚಾರ್ಯ" ಎಂಬ ಬಿರುದನ್ನು ಪಡೆದು, ೧೧೮ ವರುಷಗಳವರೆಗೆ ಬಾಳಿದರು. ವೇದಾಂತ, ವೈದ್ಯಕ, ಜ್ಯೋತಿಷ್ಯ, ಸಂಗೀತ, ರಾಜಕಾರಣ, ಧರ್ಮಶಾಸ್ತ್ರ ಮೊದಲಾದ ಅನೇಕ ವಿಷಯಗಳನ್ನು ಕುರಿತು ಅವರು ಗ್ರಂಥಗಳನ್ನು ಬರೆದಿದ್ದಾರೆ. ಬದುಕಿರುವ ವರೆಗೂ ಅವರಿಗೆ ವಿಜಯನಗರ ಸಾಮ್ರಾಜ್ಯದ ಸಂಬಂಧವಿತ್ತು; ಕ್ರಿ. ಶ. ೧೩೮೬ರಲ್ಲಿ ಅವರು ಸಮಾಧಿಯನ್ನು ಪಡೆದರು. ಆಗಿನ ಕಾಲದಲ್ಲಿ ವಿದ್ಯಾರಣ್ಯರು ಹುಟ್ಟಿರದಿದ್ದರೆ, ದಕ್ಷಿಣಭಾರತವೆಲ್ಲವೂ ಆಗಲೇ ಪರಕೀಯರ ಕೈಗೆ ಹೋಗುತ್ತಿತ್ತು.

## ಅಭ್ಯಸನಗಳು

೧. ವಿದ್ಯಾರಣ್ಯರ ತಂದೆ-ತಾಯಿಗಳು ಯಾರು?

೨. ಇವರು ತಮ್ಮ ವಿದ್ಯಾಭ್ಯಾಸವನ್ನು ಯಾವ ಯಾವ ಗುರುಗಳ ಬಳಿಯಲ್ಲಿ ಮಾಡಿದರು?

೩. ವಿದ್ಯಾರಣ್ಯರು ಕರ್ನಾಟಕವನ್ನು ಉದ್ಧರಿಸಲು ಏಕೆ ಟೊಂಕಕಟ್ಟಿದರು?

೪. ಇವರಿಗೆ ಹುಕ್ಕ-ಬುಕ್ಕರ ಭೆಟ್ಟಿಯು ಎಲ್ಲಿ ಆಯಿತು?

೫. ವಿಜಯನಗರ ರಾಜ್ಯಸ್ಥಾಪನೆಗಾಗಿ ಇವರು ಯಾವ ರೀತಿಯಿಂದ ಪ್ರಯತ್ನ ಮಾಡಿದರು?

೬. ಕೆಳಗಿನ ವಾಕ್ಯಗಳಲ್ಲಿ ಬಿಟ್ಟಪದಗಳನ್ನು ತುಂಬಿ ವಾಕ್ಯಗಳನ್ನು ಪೂರ್ತಿಗೊಳಿಸಿರಿ.

(ಅ) ......ಕಾಟಕ್ಕೆ ಬೇಸತ್ತು......ಹೆಂಡತಿ ಮಕ್ಕಳೊಡನೆ ಬೆಂಕಿಯಲ್ಲಿ ಹಾರಿಕೊಂಡು ಸತ್ತನು.

(ಬ) ಇವರು......ಕಾಲ ತಪಶ್ಚರ್ಯ ಮಾಡಿದರು.

(ಕ) .........ಬಳಿಯಲ್ಲಿ ಹೊಸದೊಂದು ನಗರವನ್ನು ಕಟ್ಟಿಸಿ ಅದಕ್ಕೆ ......ಎಂದು ಹೆಸರಿಟ್ಟರು. ಅದನ್ನು ತಮ್ಮ......ಮಾಡಿಕೊಂಡರು.

(ಡ) ಹುಕ್ಕನು......ನೆಂಬ ಹೆಸರಿನಿಂದ ಅರಸನಾದನು.

(ಇ) ವಿದ್ಯಾರಣ್ಯರು......ನೆಂಬ ಬಿರುದನ್ನು ಪಡೆದರು.

(ಫ) ಇವರು.........ಯಲ್ಲಿ.........ನೆಯ ಇಸವಿಯಲ್ಲಿ ದೇಹವನ್ನು ಬಿಟ್ಟರು.

# ೧೮. ಭಕ್ತಕಬೀರ

ಸುಮಾರು ಐದುನೂರು ವರುಷಗಳ ಹಿಂದೆ, ಕಾಶೀಪಟ್ಟಣದಲ್ಲಿ ನೂರಿ ಎಂಬ ನೇಕಾರನಿದ್ದನು. ಆತನ ಹೆಂಡತಿಯ ಹೆಸರು ನೀಮಾ. ಬಹಳ ದಿವಸಗಳ ವರೆಗೂ ಅವರಿಗೆ ಮಕ್ಕಳಾಗಿರಲಿಲ್ಲ. ಒಮ್ಮೆ ಗಂಡ-ಹೆಂಡಿರಿಬ್ಬರೂ ಕೂಡಿಕೊಂಡು ತಮ್ಮ ಗೆಳೆಯನ ಊರಿಗೆ ಹೋಗುತ್ತಿದ್ದರು. ದಾರಿಯಲ್ಲಿ ಲಾಹಿರೀ



ಕಬೀರನು ಉಪದೇಶಿಸುವುದು

ಎಂಬ ಕೆರೆಯ ದಂಡೆಯಲ್ಲಿ, ಕಮಲದ ಎಲೆಗಳ ಮೇಲೆ ಮಲಗಿ ಆಡುತ್ತಿದ್ದ ಒಂದು ಗಂಡುಕೂಸನ್ನು ಅವರು ಕಂಡರು. ಕೂಸು ಬಲು ಮುದ್ದಾಗಿತ್ತು. ಮಕ್ಕಳಿಲ್ಲದ ಅವರಿಗೆ ಬಹಳ ಆನಂದವಾಯಿತು. ಆ ಮಗುವನ್ನು ದೇವರೇ ತಮಗೆ ಕೊಟ್ಟನೆಂದು ಭಾವಿಸಿ ಎತ್ತಿಕೊಂಡರು. ನೀಮಾಳು ಆ ಕೂಸನ್ನು ಮುದ್ದಾಡಿ ಎದೆಗೆ ಅವಚಿಕೊಂಡಳು. ಮುಂದೆ ಅವರು ಗೆಳೆಯನ ಊರಿಗೆ ಹೋಗದೆ, ತಿರುಗಿ ತಮ್ಮ ಊರಿಗೆ ಬಂದರು. ಆ ಕೂಸಿಗೆ ‘ಕಬೀರ್’ ಎಂದು ಹೆಸರಿಟ್ಟು ಜೋಪಾನಮಾಡಹತ್ತಿದರು.

ಬಾಲಕ ಕಬೀರನು ಓರಗೆಯ ಹುಡುಗರೊಂದಿಗೆ ಆಡುವಾಗ ‘ರಾಮ, ರಾಮ’ ಎಂದು ದೇವರನ್ನು ಸ್ಮರಿಸುವನು; ‘ಅಲ್ಲಾ’ ಎಂದೂ ಭಕ್ತಿಯಿಂದ ನೆನೆಯುವನು. ಇದು ಹುಡುಗರಿಗೆಲ್ಲ ವಿಚಿತ್ರವೆನಿಸುತ್ತಿತ್ತು. ಮುಸಲ್ಮಾನ್ ಹುಡುಗರು “ನೀನು ‘ರಾಮ ರಾಮ’ ಎಂದು ಏಕೆ ಹೇಳುತ್ತೀ?” ಎಂದು

ಅವನನ್ನು ಕೇಳುವರು; ಹಿಂದು ಹುಡುಗರು "ನೀನು ಅಲ್ಲಾನನ್ನು ನೆನೆಯುವಿ ನೀನು ಹಿಂದುವಲ್ಲ" ಎಂದು ಅವನನ್ನು ಕೆರಳಿಸುವರು. ಆಗ ಕಬೀರನು ಅವರಿಗೆ ಕೊಡುವ ಉತ್ತರವಿದು:

"ರಾಮನೂ ದೇವರು; ಅಲ್ಲಾನೂ ದೇವರು. ಯಾವ ಹೆಸರಿನಿಂದಲೂ ದೇವರನ್ನು ಸ್ಮರಿಸಬಹುದು. ದೇವರು ಒಬ್ಬನೇ; ಆದರೂ ಅವನಿಗೆ ಹೆಸರುಗಳು ನೂರೆಂಟು!" ಕಬೀರನ ಮಾತುಗಳನ್ನು ಕೇಳಿ ಎಲ್ಲರೂ ಬೆರಗಾಗುವರು.

ಕಬೀರನು ಬೆಳೆದು ತುಸು ದೊಡ್ಡವನಾದನು. ಆಗ ನೂರಿಯು ಮಗ-ನಿಗೆ ನೇಕಾರಿಕೆಯನ್ನು ಕಲಿಸಹತ್ತಿದನು. ಓಣಿಯಲ್ಲಿ ಯಾರಾದರೂ ಸಾಧು-ಸಂತರು ಫಕೀರರು ಹಾಡುತ್ತಬಂದರೆ, ಬಾಲಕ ಕಬೀರನು ಕೆಲಸಬಿಟ್ಟು ಅವರನ್ನು ನೋಡಲು ಓಡಿಹೋಗುತ್ತಿದ್ದನು. ಅವರ ಹಾಡುಗಳನ್ನು ಮನಸ್ಸು ಗೊಟ್ಟು ಕೇಳುತ್ತಿದ್ದನು. ತಾನೂ ದೇವರ ಮಹಿಮೆಯನ್ನು ಕೊಂಡಾಡು-ತ್ತಿದ್ದನು. ದೇವರಧ್ಯಾನ ಮಾಡುತ್ತಲೆ ತಂದೆಯ ಕೆಲಸದಲ್ಲಿ ನೆರವಾಗು-ತ್ತಿದ್ದನು.

ಆ ಕಾಲದಲ್ಲಿ ಕಾಶಿಯಲ್ಲಿ ರಾಮಾನಂದರೆಂಬ ದೊಡ್ಡ ಸಾಧುಗಳಿದ್ದರು. ಅವರ ಕೀರ್ತಿಯು ದೇಶದ ತುಂಬ ಹಬ್ಬಿತ್ತು. ಅನೇಕ ಜನರು ಅವರ ಶಿಷ್ಯ-ರಾಗಿದ್ದರು; ಕಬೀರನೂ ಅವರ ಶಿಷ್ಯನಾಗಬೇಕೆಂದು ಇಚ್ಛಿಸಿದನು. ರಾಮಾ-ನಂದರು ಹಿಂದುಗಳು, ತಾನು ಮುಸಲ್ಮಾನ! 'ಅನ್ಯಧರ್ಮದವರನ್ನು ಅವರು ತಮ್ಮ ಶಿಷ್ಯರನ್ನಾಗಿ ಮಾಡಿಕೊಳ್ಳುವರೋ ಇಲ್ಲವೋ' ಎಂದು ಕಬೀರ ಚಿಂತಿಸ ತೊಡಗಿದನು; ರಾಮಾನಂದರು ನಿತ್ಯವೂ ಬೆಳಗಿನ ೪ ಗಂಟೆಗೆ ಎದ್ದು ಗಂಗಾ ಸ್ನಾನಕ್ಕೆ ಹೋಗುತ್ತಿದ್ದರು. ಒಂದು ದಿನ ಕಬೀರನೂ ನಾಲ್ಕುಗಂಟೆಗೆ ಎದ್ದನು. ನದಿಯ ಘಟ್ಟಕ್ಕೆ ಹೋಗಿ, ಅವರು ಬರುವ ಮಾರ್ಗದಲ್ಲಿ ಮೆಟ್ಟಲುಗಳ ಮೇಲೆ ಮಲಗಿಕೊಂಡನು. ಸ್ವಾಮಿಗಳು ಬಂದರು. ದೇವರನ್ನು ಧ್ಯಾನಿಸುತ್ತಲೆ ಮೆಟ್ಟಲುಗಳನ್ನು ಇಳಿಯತೊಡಗಿದರು. ಕತ್ತಲೆಯಲ್ಲಿ ಕಾಣದ ಕಬೀರನ ಮೇಲೆ ಅವರು ಕಾಲನ್ನು ಇಟ್ಟರು. ಒಮ್ಮೆಲೆ ಅವರಿಗೆ, ಯಾರನ್ನೋ ತುಳಿದೆ ನೆಂಬ ಕಲ್ಪನೆಯಾಯಿತು. 'ಹಾ! ರಾಮ' ಎಂದು ರಾಮನಾಮದ ಉಚ್ಚಾರ ಮಾಡಿದರು. ಕಬೀರನು ತನಗೆ ರಾಮನಾಮದ ಉಪದೇಶವಾಯಿತೆಂದು ಸಂತೋಷದಿಂದ ಎದ್ದನು. ಗುರುಗಳ ಪಾದಗಳಿಗೆ ನಮಸ್ಕಾರಮಾಡಿ, ತನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. "ನಾನು ಮುಸಲ್ಮಾನ; ಜನರು ನನ್ನನ್ನು ತಮ್ಮ ಮಠಕ್ಕೆ ಬರಗೊಡಲಿಕ್ಕಿಲ್ಲವೆಂದು ತಿಳಿದು ಹೀಗೆ ಮಾಡಿದೆನು. ತಮ್ಮ ಅನುಗ್ರಹವನ್ನು ಪಡೆದು ಶಿಷ್ಯನಾಗಲು ಆಶಿಸುತ್ತೇನೆ" ಎಂದು ಹೇಳಿದನು. ಗುರುಗಳು ಅವನ ಭಕ್ತಿಗೆ ಮೆಚ್ಚಿ ಅವನನ್ನು ಆಶೀರ್ವದಿಸಿದರು.

"ಸಮಾಜದ ಜನರು ಏನೆಂದರೂ ಅಡ್ಡಿಯಿಲ್ಲ; ನೀನು ಮಠಕ್ಕೆ ಬರುತ್ತಿರು" ಎಂದು ಕಬೀರನಿಗೆ ಹೇಳಿ ಸ್ನಾನಕ್ಕೆ ಹೋದರು. ಕಬೀರನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು.

ಮುಂದೆ ಕಬೀರನು ಪ್ರತಿದಿನ ರಾಮಾನಂದಸ್ವಾಮಿಗಳ ಮಠಕ್ಕೆ ಹೋಗ ತೊಡಗಿದನು. ಅಲ್ಲಿ ಹರಿಭಜನೆ, ಕೀರ್ತನೆಗಳಲ್ಲಿ ಭಾಗವಹಿಸಹತ್ತಿದನು. ಆಟ-ಊಟ-ನಿದ್ರೆಗಳ ಪರಿವೆ ಕೂಡ ಅವನಿಗೆ ಇರುತ್ತಿದ್ದಿಲ್ಲ. ಅವನ ತಂದೆಯು ಮಠಕ್ಕೆ ಹೋಗಿ ಮಗನನ್ನು ಬೈದು ಕರೆದುಕೊಂಡು ಬರುತ್ತಿದ್ದನು. ಮುಸ-ಲ್ಮಾನರು ಕಬೀರನ ಈ ನಡತೆಯನ್ನು ಸೇರುತ್ತಿರಲಿಲ್ಲ!

ಕಬೀರನು ಪ್ರಾಯಕ್ಕೆ ಬರಲು ಲೋಹಿ ಎಂಬ ಕನ್ಯೆಯ ಸಂಗಡ ಅವನ ಲಗ್ನ ಮಾಡಿದರು. ಲೋಹಿ ಒಳ್ಳೆಯ ಹೆಣ್ಣುಮಗಳು. ಯಾವಾಗಲೂ ಗಂಡನ ಅಪ್ಪಣೆಯಂತೆ ನಡೆಯುತ್ತಿದ್ದಳು. ಹೀಗೆಯೆ ಇರುವಾಗ ಕಬೀರನ ತಂದೆ-ತಾಯಿಗಳು ತೀರಿಕೊಂಡರು. ಇಷ್ಟರಲ್ಲಿ ಅವನಿಗೆ ಒಬ್ಬ ಮಗ ಹಾಗು ಒಬ್ಬ ಮಗಳು ಹುಟ್ಟಿದ್ದರು. ಅವರೆಲ್ಲರೂ ನೇಕಾರಿಕೆಯಿಂದಲೆ ಹೊಟ್ಟೆ ಹೊರ ಕೊಳ್ಳುತ್ತಿದ್ದರು. ಮನೆಗೆ ಬಂದ ಸಾಧು-ಸಂತ-ಫಕೀರರಿಗೆ ಇದ್ದುದರಲ್ಲಿಯೆ ಹೊಟ್ಟೆಗೆ ಹಾಕುತ್ತಿದ್ದರು. ಕಬೀರನ ಭಕ್ತಿ-ಸೇವಾಬುದ್ಧಿಗಳನ್ನು ಕಂಡು, ನಿತ್ಯವೂ ಒಬ್ಬಿಬ್ಬರು ಸಾಧುಗಳು ಅವನ ಮನೆಗೆ ಬರುತ್ತಿದ್ದರು. ತಾನು ಪ್ರತಿದಿನ ನೆಯ್ದ ಬಟ್ಟೆಯನ್ನು ಮಾರಿ ಕಬೀರನು ಅವರಿಗೆ ಊಟಕ್ಕೆ ಹಾಕು ತ್ತಿದ್ದನು. ಅವನು ಹಿಂದೂ ಸಾಧು-ಸಂತರನ್ನು ಉಪಚರಿಸುವುದನ್ನು ಕಂಡು ಮುಸಲ್ಮಾನರು ಬಹಳ ಸಿಟ್ಟಾದರು. ಆಗ ಅರಸನಾಗಿದ್ದ ಸಿಕಂದರ ಲೋದಿಯ ಕಡೆಗೆ ದೂರನ್ನು ಒಯ್ದರು. ಅರಸನು ಕಬೀರನನ್ನು ಹಿಡಿದು ತರಿಸಿ ಕಾರಾಗೃಹದಲ್ಲಿ ಇಡಿಸಿದನು; ಮರಣದಂಡನೆಯ ಶಿಕ್ಷೆಯನ್ನೂ ವಿಧಿ-ಸಿದನು. ಆದರೂ ಕಬೀರನು ರಾಮನಾಮವನ್ನು ಬಿಡಲಿಲ್ಲ. ಆಗ ಅರಸನೇ ಅವನ ದೇವಭಕ್ತಿಗೆ ಮೆಚ್ಚಿ ಅವನನ್ನು ಬಿಟ್ಟುಬಿಟ್ಟನು.

ಕಬೀರನ ಕೀರ್ತಿಯು ಸುತ್ತಲೂ ಹಬ್ಬಿತು. ಅವನ ಮನೆಗೆ ಸಾಧು-ಸಂತರ-ಫಕೀರರ ತಂಡವೇ ಬರಹತ್ತಿತು. ತಾನು ಗಳಿಸಿದ ಹಣವು ಅವನಿಗೆ ಸಾಲದಾಯಿತು. ಚಿಕ್ಕ ಪುಟ್ಟ ಸಾಲಗಳನ್ನು ಮಾಡಿಯಾದರೂ ಬಂದವರಿಗೆ ಅನ್ನವನ್ನು ಹಾಕುತ್ತಿದ್ದನು. ಆತನ ವಿರುದ್ಧಪಕ್ಷದವರು ಅವನಿಗೆ ಆಗಾಗ ತೊಂದರೆಗಳನ್ನು ಕೊಡುತ್ತಲೇ ಇದ್ದರು.

ಒಮ್ಮೆ ಕಬೀರನ ವೈರಿಗಳು, 'ರಾಮನವಮಿಯ ದಿನ ಕಬೀರನ ಮನೆ-ಯಲ್ಲಿ ಪ್ರಸಾದದ ಊಟವಿದೆ' ಎಂದು ನೆರೆಹೊರೆಯ ಊರುಗಳಲ್ಲೆಲ್ಲ ಸುಳ್ಳು ಪ್ರಚಾರ ಮಾಡಿದರು. ಆ ದಿನ ಬೆಳಗಿನಿಂದ, ಸಾಧು-ಸಂತರು ಕಬೀರನ

ಮನೆಗೆ ಬರತೊಡಗಿದರು. ‘ಇಂದು ಇಷ್ಟು ಜನರು ನನ್ನ ಮನೆಗೆ ಹೇಗೆ ಬಂದರು?’ ಎಂದು ಕಬೀರನು ಮನದಲ್ಲಿಯೇ ವಿಚಾರ ಮಾಡಹತ್ತಿದನು. ಕುಹಕಿಗಳಾದ ಜನರು ಹಾಗೆಲ್ಲ ಮಾಡಿದುದು ಅವನಿಗೇನು ಗೊತ್ತು? ಆದರೂ ಅವನು ಧೈರ್ಯ ಬಿಡಲಿಲ್ಲ. ಸಾವುಕಾರನ ಮನೆಗೆ ಹೋಗಿ ಸಾಲತಂದನು; ಅಡಿಗೆಮಾಡಿಸಿ ಎಲ್ಲರಿಗೂ ಊಟಕ್ಕೆ ಹಾಕಿಸಿದನು. ಬಂದವರೆಲ್ಲರೂ ಅವನ ಭಕ್ತಿಯನ್ನು ಮೆಚ್ಚಿ ಕೊಂಡಾಡಿದರು.

ಹೀಗೆ ಕಬೀರನು ಅನೇಕ ಕಷ್ಟಗಳನ್ನು ಎದುರಿಸುತ್ತ ಪರಮಭಕ್ತನಾಗಿ ಬಾಳಿದನು. ಕೊನೆಗೆ ಕಾಶಿಯಲ್ಲಿಯೇ ಪೈಗಂಬರವಾಸಿಯಾದನು. ಹಿಂದು-ಮುಸಲ್ಮಾನರಿಬ್ಬರೂ ಕೂಡಿ ಅವನ ಅಂತ್ಯಕ್ರಿಯೆಯನ್ನು ಮುಗಿಸಿದರು.

ಕಬೀರನು ಕವಿಯಾಗಿದ್ದನು. ಭಕ್ತಿ-ನೀತಿಗಳು ತುಂಬಿದ ಮಧುರವಾದ ಹಾಡುಗಳನ್ನು ಕಟ್ಟಿ ಹಾಡುತ್ತಿದ್ದನು. ‘ದೇವರು ಒಬ್ಬನಿದ್ದು ಅವನನ್ನು ಬೇರೆ ಬೇರೆ ಧರ್ಮದ ಜನರು ಬೇರೆ ಬೇರೆ ಹೆಸರಿನಿಂದ ಕರೆಯುವರು’ ಎಂದು ಅವನು ಹೇಳಿರುವನು. ಜಗತ್ತಿನ ಜನರೆಲ್ಲರು ಅಣ್ಣ-ತಮ್ಮಂದಿರೆಂದೂ ಮನುಷ್ಯನಲ್ಲಿ ಮೇಲು-ಕೀಳು ಇಲ್ಲವೆಂದೂ ಬೋಧಿಸಿರುವನು. ಹಿಂದು-ಮುಸಲ್ಮಾನರಲ್ಲಿ ಐಕ್ಯಹುಟ್ಟಿಸಲು ಕಬೀರನು ಬಹಳ ಪ್ರಯತ್ನಿಸಿದನು.

## ಅಭ್ಯಸನಗಳು

೧. ಕಬೀರನು ಎಲ್ಲಿ ಹುಟ್ಟಿದನು? ಹಾಗೂ ಅವನ ತಂದೆ-ತಾಯಿಗಳು ಯಾರು?

೨. ಕಬೀರನು ಚಿಕ್ಕಂದಿನಿಂದಲೇ ತನ್ನ ಗೆಳೆಯರಿಗೆ ಹೇಳಿದ ಉಪದೇಶದ ಮಾತುಗಳಾವುವು?

೩. ಕಬೀರನು ರಾಮಾನಂದರ ಶಿಷ್ಯನು ಹೇಗೆ ಆದನು?

೪. ಸಿಕಂದರಲೋದಿಯು ಕಬೀರನನ್ನು ಕಾರಾಗೃಹದಲ್ಲಿ ಏಕೆ ಇಟ್ಟನು?

೫. ಕಬೀರನು ಹೇಳುವ ನೀತಿಯ ಮಾತುಗಳು ಯಾವುವು?

೬. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಪದಗಳನ್ನು ತುಂಬಿ ವಾಕ್ಯವನ್ನು ಪೂರ್ಣಮಾಡಿರಿ.

ಅ) ಕಬೀರನ ಸಾಕುತಂದೆ......ಮತ್ತು ನೀಮಾ.........

ಆ) ಕಬೀರನಿಗೆ......ಎಂಬ ಹೆಣ್ಣುಮಗಳನ್ನು ಲಗ್ನ ಮಾಡಿದರು.

ಇ) ಕಬೀರನಿಗೆ ಒಬ್ಬ......ಹಾಗೂ......ಮಗಳು ಇದ್ದರು.

ಈ) ಅವನ ವೈರಿಗಳು......ರಾಮನವಮಿಯ ದಿನ ಕಬೀರನ ಮನೆಯಲ್ಲಿ .........ಎಂದು.........ಪ್ರಚಾರಮಾಡಿದರು.

ಉ) .........ಕೂಡಿ ಅವನ ಅಂತ್ಯ......ಮುಗಿಸಿದರು.

# ೧೯. ನರಸಿಂಹ ಮೆಹತಾ

ಮಹಾತ್ಮಾಗಾಂಧಿಯವರು ನಿತ್ಯವೂ ತಮ್ಮ ಪ್ರಾರ್ಥನೆಯಲ್ಲಿ 'ವೈಷ್ಣವ ಜನತೋ ತೇಣೇ ಕಹಿಯೇ' ಎಂಬ ಹಾಡನ್ನು ಹಾಡುತ್ತಿದ್ದರು. ಆ ಕಾರಣದಿಂದಲೇ ಈ ಹಾಡು ಭಾರತೀಯರೆಲ್ಲರಿಗೂ ಪರಿಚಯದ್ದಾಗಿದೆ. ಈ ಹಾಡು ಗುಜರಾತೀ ಭಾಷೆಯಲ್ಲಿದೆ. ಇದನ್ನು ರಚಿಸಿದವನು 'ನರಸಿಂಹ ಮೆಹತಾ' ಎಂಬ ಭಕ್ತಕವಿಯು. ಇವನು ಬದುಕಿಬಾಳಿದುದು ನಾಲ್ಕುನೂರು ವರ್ಷಗಳ ಹಿಂದೆ.



ಭಕ್ತನರಸಿಂಹ ಮೆಹತಾ

ನರಸಿಂಹನು ಸೌರಾಷ್ಟ್ರದ ಜುನಾಗಡ ಎಂಬ ಪಟ್ಟಣದಲ್ಲಿ, ಒಂದು ಬ್ರಾಹ್ಮಣರ ಮನೆತನದಲ್ಲಿ ಹುಟ್ಟಿದನು. ಚಿಕ್ಕಂದಿನಲ್ಲಿಯೇ ಅವನ ತಂದೆ-ತಾಯಿಗಳು ತೀರಿಕೊಂಡರು. ಆದುದರಿಂದ ದೂರದ ಒಬ್ಬ ಚಿಕ್ಕಪ್ಪನು ಬಾಲಕ ನರಸಿಂಹನನ್ನು ಜೋಪಾನ ಮಾಡಿದನು. ಬಾಲ್ಯದಲ್ಲಿಯೇ ನರಸಿಂಹನಿಗೆ ಕೆಲವು ಸಾಧು-ಸಂತರ ಸಹವಾಸವು ದೊರೆಯಿತು. ಆ ಸಾಧುಗಳ

ಸಂಗಡ ಇದ್ದುಕೊಂಡು ನರಸಿಂಹನು ಶ್ರೀಕೃಷ್ಣಪರಮಾತ್ಮನ ಲೀಲೆಗಳನ್ನು ಹಾಡುತ್ತಿದ್ದನು. ಬರುಬರುತ್ತ ಅವನು ದೇವರ ಭಜನೆ-ಕೀರ್ತನೆಗಳಲ್ಲಿ ಬಹಳ ವೇಳೆಯನ್ನು ಕಳೆಯತೊಡಗಿದನು. 'ದೇವರ ದೃಷ್ಟಿಯಲ್ಲಿ ಎಲ್ಲ ಮಾನವರೂ ಸರಿಸಮಾನರು. ಅವರಲ್ಲಿ ಮೇಲು-ಕೀಳುಗಳಿಲ್ಲ!' ಎಂದು ಅವನು ಬೋಧಿಸ ಹತ್ತಿದನು. ಇದರಿಂದ ಅವನ ಜಾತಿಯ ಜನರು ಅವನ ಮೇಲೆ ಸಿಟ್ಟಾದರು. ಮನೆಯವರೂ ಬೇಸರಗೊಂಡರು. ಲಗ್ನವಾದರೆ ಸಾಧು-ಸಂತರ ಗೆಳೆತನ ಬಿಡಬಹುದೆಂದು ಬಗೆದು, ಮನೆಯವರು ಅವನ ಲಗ್ನವನ್ನು ಮಾಡಿದರು. ಇಷ್ಟಾದರೂ ಅವನು ಸಾಧು-ಸಂತರ ಸಂಗವನ್ನು ಬಿಡಲಿಲ್ಲ. ಅವನ ಮನಸ್ಸು ಯಾವಾಗಲೂ ದೇವರ ಧ್ಯಾನದಲ್ಲಿಯೆ ಇರುತ್ತಿತ್ತು.

ಒಂದು ದಿನ ನರಸಿಂಹನ ಅತ್ತಿಗೆಯು ಅವನಿಗೆ ಬಿರುನುಡಿಗಳನ್ನು ಆಡಿದಳು. ಆಗ ನರಸಿಂಹನು, ಊರ ಹೊರಗೆ ಸ್ವಲ್ಪ ದೂರವಿರುವ ಒಂದು ಈಶ್ವರದೇವಾಲಯಕ್ಕೆ ಹೋದನು. ಅಲ್ಲಿಯೆ ಕೆಲವು ದಿವಸಗಳ ವರೆಗೆ ಅನ್ನನೀರುಗಳಿಲ್ಲದೆ ದೇವರ ಧ್ಯಾನಮಾಡುತ್ತ ಕುಳಿತನು. ಆಗ ಅವನ ಭಕ್ತಿಗೆ ಮೆಚ್ಚಿ ಶ್ರೀಕೃಷ್ಣನು ಪ್ರತ್ಯಕ್ಷನಾದನಂತೆ.

ಬಳಿಕ ನರಸಿಂಹನು ಮನೆಗೆ ಬಂದನು. ತನ್ನ ಹೆಂಡತಿ-ಮಕ್ಕಳನ್ನು ಕಟ್ಟಿಕೊಂಡು ತನ್ನ ಕಕ್ಕನ ಮನೆಬಿಟ್ಟು ಬೇರೆ ಕಡೆಗೆ ಇರಹತ್ತಿದನು. ಆದರೆ ಅವನು ಯಾವಾಗಲೂ ದೇವರ ಭಜನೆ ಹಾಗು ಕೀರ್ತನೆಗಳಲ್ಲಿ ಕಾಲಕಳೆಯುತ್ತಿದ್ದನು. ಆದುದರಿಂದ ಅವರ ಉಪಜೀವನವು ಕಷ್ಟದಿಂದ ಸಾಗಹತ್ತಿತು. ಆತನ ಹೆಂಡತಿಯು ಯಾವುದಾದರೊಂದು ಉದ್ಯೋಗವನ್ನು ಮಾಡಲು ಅವನಿಗೆ ಮೇಲಿಂದ ಮೇಲೆ ಹೇಳುತ್ತಿದ್ದಳು. ಆದರೆ ಯಾವ ಕೆಲಸಗಳೂ ಅವನ ಮನಸ್ಸಿಗೆ ಬರುತ್ತಿದ್ದಿಲ್ಲ. 'ಶ್ರೀಕೃಷ್ಣಪರಮಾತ್ಮನೇ ಎಲ್ಲ ಸಂಕಟ-ಗಳನ್ನು ದೂರಮಾಡಿ ನಮ್ಮೆಲ್ಲರನ್ನು ಸುಖದಿಂದ ಕಾಪಾಡುವನು' ಎಂದು ಹೇಳುತ್ತಿದ್ದನು. ಅದರಂತೆಯೇ ಅವನು ತನ್ನ ಜೀವನವನ್ನು ಸಾಗಿಸಿದನು.

ಜನರು ನರಸಿಂಹ ಮೆಹತಾನ ಬಗೆಗೆ ಕೆಲವು ಆಶ್ಚರ್ಯಕಾರಕ ಕತೆಗಳನ್ನು ಹೇಳುತ್ತಾರೆ. ಮಕ್ಕಳ ಮದುವೆಯ ಕಾಲಕ್ಕೆ ಆತನ ಬಳಿಯಲ್ಲಿ ದುಡ್ಡು ಸ್ವಲ್ಪವೂ ಇರಲಿಲ್ಲವಂತೆ. ಆದರೆ ಎಲ್ಲ ಸಾಧನ-ಸಾಮಗ್ರಿಗಳು ದೇವರ ಕೃಪೆಯಿಂದ ತಾವಾಗಿಯೇ ದೊರೆತುವಂತೆ. ಅದರಿಂದ ಲಗ್ನಸಮಾರಂಭವು ಒಳ್ಳೆಯ ಸಡಗರದಿಂದ ನೆರವೇರಿತಂತೆ. ಇನ್ನೊಂದು ಸಲ ನರಸಿಂಹನ ತಂದೆಯ ಶ್ರಾದ್ಧ ನಡೆದಿತ್ತು. ಆ ಕಾಲಕ್ಕೆ ಊಟಕ್ಕೆ ಬಡಿಸಲು ತುಪ್ಪದ ಕೊರತೆಯಾಗುವ ಹಾಗೆ ಕಂಡುಬಂದಿತು. ಆಗ ನರಸಿಂಹನು ತುಪ್ಪವನ್ನು ತರಲು ಪೇಟೆಗೆ ಹೋದನು. ದಾರಿಯಲ್ಲಿ ಹರಿಭಜನೆ ಒಳ್ಳೆಯ ರಭಸದಿಂದ ಸಾಗಿತ್ತು.

ನರಸಿಂಹನೂ ಅಲ್ಲಿಗೆ ಹೋಗಿ ಭಜನೆಮಾಡಹತ್ತಿದನು; ಭಜನೆಯಲ್ಲಿ ತಲ್ಲೀನನಾಗಿ ತುಪ್ಪದ ವಿಚಾರವನ್ನು ಮರೆತುಬಿಟ್ಟನು. ಅತ್ತ ಭಗವಂತನು ನರಸಿಂಹನ ರೂಪಧರಿಸಿಕೊಂಡು ತುಪ್ಪವನ್ನು ಒಯ್ದುಕೊಟ್ಟು ಪಂಕ್ತಿಯನ್ನು ಸಾಗಿಸಿದನು. ಬ್ರಾಹ್ಮಣರು ಮನದಣಿ ಊಟಮಾಡಿ ತಮ್ಮ ತಮ್ಮ ಮನೆಗಳಿಗೆ ಹೋದರು. ಬಹಳ ಹೊತ್ತಿನ ಮೇಲೆ ಭಜನೆ ಮುಗಿಯಿತು. ಆಗ ನರಸಿಂಹನಿಗೆ ತುಪ್ಪದ ನೆನಪಾಯಿತು. ಅವನು ಲಗುಬಗೆಯಿಂದ ತುಪ್ಪವನ್ನು ತೆಗೆದುಕೊಂಡು ಮನೆಗೆ ಬಂದನು. ಅಷ್ಟರಲ್ಲಿ ಬ್ರಾಹ್ಮಣರೆಲ್ಲರೂ ಊಟಮುಗಿಸಿ ಹೋಗಿದ್ದರು. "ತುಪ್ಪವನ್ನು ಎಲ್ಲಿಂದ ತಂದು ನೀಡಿದೆ?" ಎಂದು ಹೆಂಡತಿಯನ್ನು ಕೇಳಲು ಅವಳು ಆಶ್ಚರ್ಯಚಕಿತಳಾದಳಂತೆ.

ಹೀಗೆ ನರಸಿಂಹ ಮೆಹತಾನು ಅನೇಕ ಅದ್ಭುತಗಳನ್ನು ಮಾಡಿತೋರಿಸಿ ಜನರಿಂದ ಹೊಗಳಿಸಿಕೊಂಡನು. ಅವನು ಜಾತಿ-ಜಾತಿಗಳಲ್ಲಿ ಭೇದಭಾವಗಳನ್ನು ಗಣಿಸಲಿಲ್ಲ. ಎಲ್ಲರೂ ಸರಿಸಮಾನರೆಂದು ತಿಳಿಯುತ್ತಿದ್ದನು. ಮಕ್ಕಳ ಮದುವೆಯಾದ ಕೆಲವು ದಿವಸಗಳ ನಂತರ ಅವನ ಹೆಂಡತಿ ತೀರಿಕೊಂಡಳು. ನರಸಿಂಹನು ಮನೆಬಿಟ್ಟು ದೇವರ ಭಜನೆ-ಕೀರ್ತನೆಗಳನ್ನು ಮಾಡುತ್ತ ಅತ್ತಿತ್ತ ತಿರುಗಾಡಹತ್ತಿದನು. ಒಂದುದಿನ ಜುನಾಗಡದಲ್ಲಿ, ಹರಿಜನರು ತಮ್ಮ ಕೇರಿಯಲ್ಲಿ ಭಜನೆಯನ್ನು ಮಾಡಲು ನರಸಿಂಹನನ್ನು ಕರೆದರು. ಅವನು ಸಂತೋಷದಿಂದ ಒಪ್ಪಿಕೊಂಡು ರಾತ್ರಿಯೆಲ್ಲ ಹರಿಜನರೊಡನೆ ಬೆರೆತು ಭಜನೆ ಮಾಡಿದನು. ಇದರಿಂದ ಅವನ ಜಾತಿಯ ಜನರು ಸಿಟ್ಟಾಗಿ, ಅವನನ್ನು ಜಾತಿಯಿಂದ ಹೊರಗೆ ಹಾಕಿದರು. ತಮ್ಮ ಅರಸನಿಗೂ ಅವನ ಬಗೆಗೆ ದೂರು ಹೇಳಿದರು. ಅರಸನು ಸಿಟ್ಟಾಗಿ ನರಸಿಂಹನನ್ನು ಕೆಲದಿನ ಸೆರೆಮನೆಯಲ್ಲಿ ಇಟ್ಟನು. ಕಡೆಗೆ ಅರಸನು ಆತನ ದೇವಭಕ್ತಿಗೆ ಮೆಚ್ಚಿ, ತಾನೇ ಕ್ಷಮೆ ಬೇಡಿಕೊಂಡು ಅವನನ್ನು ಬಿಟ್ಟುಬಿಟ್ಟನು.

ಹೀಗೆ ನರಸಿಂಹ ಮೆಹತಾ ಶ್ರೇಷ್ಠಭಕ್ತನಾಗಿ ಯಾವಾಗಲೂ ಪರಮಾತ್ಮನ ಧ್ಯಾನಮಾಡುತ್ತ ಕ್ರಿ. ಶ. ೧೫೮೦ರಲ್ಲಿ ಸ್ವರ್ಗಸ್ಥನಾದನು.

## ಅಭ್ಯಸನಗಳು

೧. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಪದಗಳನ್ನು ತುಂಬಿ ವಾಕ್ಯ ಪೂರ್ಣಮಾಡಿರಿ.

(ಅ) ನರಸಿಂಹನು ಸೌರಾಷ್ಟ್ರದ......ಎಂಬ ಪಟ್ಟಣದಲ್ಲಿ ಒಂದು...... ಮನೆತನದಲ್ಲಿ ಹುಟ್ಟಿದನು.

(ಬ) ಅವನಿಗೆ ಚಿಕ್ಕಂದಿನಲ್ಲಿ ಕೆಲವು......ರ ಸಹವಾಸವು ದೊರೆಯಿತು.

(ಕ) ಶ್ರೀಕೃಷ್ಣಪರಮಾತ್ಮನೇ ಎಲ್ಲ.........ದೂರಮಾಡಿ ತಮ್ಮೆಲ್ಲರನ್ನು ......ನೆಂದು ಹೇಳುತ್ತಿದ್ದನು.
(ಡ) ಅವನು ಕ್ರಿ. ಶ.........ಸ್ವರ್ಗಸ್ಥನಾದನು.

೨. ನರಸಿಂಹನು ತೋರಿಸಿದ ಆಶ್ಚರ್ಯಕಾರಕ ಸಂಗತಿಗಳು ಯಾವುವು? ಅವುಗಳನ್ನು ಸಂಕ್ಷಿಪ್ತವಾಗಿ ವಿವರಿಸಿರಿ.
೩. ಅರಸನು ಕೆಲವು ದಿನ ನರಸಿಂಹ ಮೆಹತಾನನ್ನು ಸೆರೆಯಲ್ಲಿ ಏಕೆ ಇಟ್ಟನು?
೪. ಇವನಲ್ಲಿ ಕಂಡುಬರುವ ಮಹತ್ತ್ವದ ಗುಣಗಳಾವುವು?
೫. ನರಸಿಂಹ ಮೆಹತಾನ ಕಥೆಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೨೦. ಚೈತನ್ಯ

ಬಂಗಾಲದಲ್ಲಿ ಗಂಗಾನದಿಯ ದಂಡೆಯ ಮೇಲೆ ನವದ್ವೀಪ ಎಂಬುದೊಂದು ಪಟ್ಟಣ ಇದೆ. ಕ್ರಿ. ಶ. ೧೫ನೆಯ ಶತಮಾನದಲ್ಲಿ ನೀಲಾಂಬರ ಚಕ್ರವರ್ತಿ ಎಂಬ ವಿದ್ವಾಂಸನಾದ ಬ್ರಾಹ್ಮಣನು ಆ ಪಟ್ಟಣದಲ್ಲಿ ಇರುತ್ತಿದ್ದನು. ಆತನ ಮಗಳಾದ ಶಚೀದೇವಿಯನ್ನು ಜಗನ್ನಾಥಮಿಶ್ರ ಎಂಬ ಬ್ರಾಹ್ಮಣನಿಗೆ ಕೊಟ್ಟು ಲಗ್ನಮಾಡಿದ್ದರು. ಜಗನ್ನಾಥಮಿಶ್ರನ ಹುಟ್ಟೂರು ಸಿಲ್ಹೆಟಿನಗರ; ಆದರೂ ಅವನು ನವದ್ವೀಪದಲ್ಲಿಯೆ ಮನೆಮಾಡಿಕೊಂಡು ಇರುತ್ತಿದ್ದನು. ಏಕೆಂದರೆ ನವದ್ವೀಪವು ಆಗ ಸಂಸ್ಕೃತವಿದ್ಯೆಗೆ ಹೆಸರಾದ ಸ್ಥಳವಾಗಿತ್ತು. ಜಗನ್ನಾಥಮಿಶ್ರನೂ ಸಂಸ್ಕೃತದಲ್ಲಿ ಸುಪ್ರಸಿದ್ಧ ಪಂಡಿತನಾಗಿದ್ದನು.

ಜಗನ್ನಾಥಮಿಶ್ರನಿಗೆ ಶಚೀದೇವಿ ಯೋಗ್ಯಳಾದ ಹೆಂಡತಿಯಾಗಿದ್ದಳು. ಈ ದಂಪತಿಗಳ ಹೊಟ್ಟೆಯಿಂದ ಮೊದಲು ಎಂಟುಜನ ಹೆಣ್ಣುಮಕ್ಕಳು ಹುಟ್ಟಿದರು. ಅವರೆಲ್ಲರೂ ಹುಟ್ಟಿದಹಾಗೆಯೆ ಒಬ್ಬರ ಹಿಂದೊಬ್ಬರು ತೀರಿಕೊಂಡರು. ಬಳಿಕ ವಿಶ್ವರೂಪನೆಂಬ ಹೆಸರಿನ ಗಂಡುಮಗನು ಹುಟ್ಟಿದನು. ಮುಂದೆ ಹತ್ತನೆಯ ಮಗುವಾಗಿ ಹುಟ್ಟಿದವನೇ ಚೈತನ್ಯನೆಂದು ಪ್ರಸಿದ್ಧನಾದನು. ಅವನು ಹುಟ್ಟಿದುದು ಕ್ರಿ. ಶ. ೧೪೮೫ರಲ್ಲಿ. ಆ ಮಗುವಿಗೆ ಮೊದಲು ತೊಟ್ಟಿಲಲ್ಲಿಟ್ಟ ಹೆಸರು 'ವಿಶ್ವಂಭರ' ಎಂದು.

ವಿಶ್ವಂಭರನು ಬಲು ಸುಂದರನಾಗಿದ್ದನು. ಆದುದರಿಂದ ನೆರೆಹೊರೆಯವರು ಅವನನ್ನು ಬಹಳ ಪ್ರೀತಿಸುತ್ತಿದ್ದರು. ಚಿಕ್ಕವನಿರುವಾಗ ವಿಶ್ವಂಭರನು ಹಟಮಾರಿಯೂ ಕಿಡಿಗೇಡಿಯೂ ಆಗಿದ್ದನು; ನೆರೆಹೊರೆಯ ಹುಡುಗರೊಡನೆ ಕೆಣಕಿ ಜಗಳತೆಗೆದು, ಅವರನ್ನು ಹೊಡೆದು ಅಳಿಸುತ್ತಿದ್ದನು. ತನಗೆ ಬೇಕಾದ

ಒಡವೆಗಳನ್ನು ಎರಡನೆಯವರ ಮನೆಯಿಂದ ಹೇಳದೆ ಕೇಳದೆ ತರುತ್ತಿದ್ದನು. ಸ್ನಾನಕ್ಕೆಂದು ಗಂಗಾನದಿಗೆ ಬಂದ ಹೆಂಗಸರನ್ನು ಬಹಳ ಕಾಡುತ್ತಿದ್ದನು. ಅವರ ಅರಿವೆಗಳನ್ನು ದೂರ ಒಯ್ದು ಒಗೆಯುತ್ತಿದ್ದನು. ಒಮ್ಮೊಮ್ಮೆ ನೀರಲ್ಲಿ ತೋಯಿಸುತ್ತಿದ್ದನು. ಇದರಿಂದ ಅವರು ಸಿಟ್ಟಾಗಿ ವಿಶ್ವಂಭರನನ್ನು ಬೆನ್ನಟ್ಟಿ ಬರುತ್ತಿದ್ದರು. ಅಣ್ಣನಾದ ವಿಶ್ವರೂಪನಿಗೆ ಅಲ್ಲದೆ, ಅವನು ಉಳಿದವರಿಗೆ ಯಾರಿಗೂ ಹೆದರುತ್ತಿದ್ದಿಲ್ಲ.

ವಿಶ್ವಂಭರನು ಚಿಕ್ಕತನದಲ್ಲಿ ಕೆಲವು ದಿವಸಗಳವರೆಗೆ ಬಂಗಾಲಿಯನ್ನು ಕಲಿತನು. ಬಳಿಕ ಗಂಗಾದಾಸನೆಂಬ ಒಬ್ಬ ಪಂಡಿತನಲ್ಲಿ ಸಂಸ್ಕೃತದ ಅಭ್ಯಾಸವನ್ನು ಮಾಡಲಾರಂಭಿಸಿದನು. ವಿಶ್ವಂಭರನ ಬುದ್ಧಿ ಬಲು ಹರಿತ-ವಾದುದು. ಭಾಗವತ, ಭಗವದ್ಗೀತೆಗಳು ಅವನ ಪ್ರೀತಿಯ ಗ್ರಂಥಗಳಾಗಿದ್ದುವು. ಮೂರು ನಾಲ್ಕು ವರುಷಗಳಲ್ಲಿಯೇ ಅವನು ಅನೇಕ ವಿಷಯಗಳಲ್ಲಿ ಜಾಣ್ಮೆಯನ್ನು ಪಡೆದನು. ಅಣ್ಣನಾದ ವಿಶ್ವರೂಪನು, ಸಂಸ್ಕೃತವನ್ನು ಪೂರ್ಣ ಕಲಿತಮೇಲೆ ಮನೆಮಾರು ಬಿಟ್ಟು ಸಂನ್ಯಾಸಿಯಾಗಿದ್ದನು. ಹೆಚ್ಚು ಕಲಿತರೆ ವಿಶ್ವಂಭರನೂ ಅವನಂತೆಯೆ ಸಂನ್ಯಾಸಿಯಾಗಿ ಹೋದಾನೆಂದು ಅವನ ತಂದೆ ಅಂಜಿದನು. ಮುಂದೆ ಕಲಿಯುವುದನ್ನು ಬಿಡಿಸಿ ಅವನನ್ನು ಮನೆಯಲ್ಲಿಯೆ ಇಟ್ಟುಕೊಂಡನು. ಆದರೆ ವಿಶ್ವಂಭರನು ಮನೆಯಲ್ಲಿ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಪುಂಡನಾಗಿ ಓಣಿಯ ಹುಡುಗರ ಜೊತೆಗೆ ತಿರುಗಾಡಹತ್ತಿದನು. ಎರ-ಡನೆಯವರ ಕೂಡ ಜಗಳತೆಗೆದು ಅವನು ಮನೆಗೆ ನ್ಯಾಯತರಹತ್ತಿದನು. ಇದರಿಂದ ತಂದೆಯು ಬೇಸತ್ತು ಮತ್ತೆ ಅವನನ್ನು ಸಾಲೆಗೆ ಕಳುಹಲಾರಂಭಿ-ಸಿದನು. ಅವನು ಕೆಲವು ದಿವಸಗಳವರೆಗೆ ವಾಸುದೇವ ಸಾರ್ವಭೌಮರೆಂಬ ಪಂಡಿತರ ಬಳಿ ವಿದ್ಯೆ ಕಲಿತನು. ಆಗ ಅವನ ಸ್ವಭಾವದಲ್ಲಿ ಸಂಪೂರ್ಣ ಬದ-ಲಾವಣೆಯಾಯಿತು. ಪುಂಡಾಟವೆಲ್ಲ ಹೋಗಿ ಶಾಂತಸ್ವಭಾವ ಬಂದುಬಿಟ್ಟಿತು.

ಮುಂದೆ ಕೆಲವು ದಿನಗಳಲ್ಲಿಯೆ ವಿಶ್ವಂಭರನ ತಂದೆ ತೀರಿಕೊಂಡನು. ಅವನ ತಾಯಿಗೆ ಅಪಾರ ದುಃಖವಾಯಿತು. ಹಿರಿಯ ಮಗನಂತೆ ವಿಶ್ವಂಭರನೂ ಸಂನ್ಯಾಸಿಯಾದಾನೆಂದು ಹೆದರಿ, ತಾಯಿ ಬೇಗನೆ ಅವನ ಮದುವೆಯನ್ನು ಮಾಡಿದಳು. ಚೈತನ್ಯನು ತಾಯಿಯ ಮಾತನ್ನು ಮೀರದೆ ಆಕೆಯ ಆಜ್ಞೆಯಂತೆ ನಡೆದುಕೊಳ್ಳತೊಡಗಿದನು. ಇದರಿಂದ ಅವಳು ತನ್ನ ದುಃಖವನ್ನು ಮರೆತು, ಆನಂದದಿಂದ ಕಾಲಕಳೆಯಹತ್ತಿದಳು.

ಮದುವೆ ಮಾಡಿಕೊಂಡ ಬಳಿಕ ವಿಶ್ವಂಭರನು ಸುಮ್ಮನೆ ಕುಳಿತುಕೊಳ್ಳಲಿಲ್ಲ; ಅದೇ ಊರಲ್ಲಿ ಒಂದು ಸಂಸ್ಕೃತ ಪಾಠಶಾಲೆಯನ್ನು ತೆರೆದನು. ಅವನು ಸಂಸ್ಕೃತಭಾಷೆಯಲ್ಲಿ ದೊಡ್ಡ ಪಂಡಿತನೆಂದು ಸುತ್ತಲೂ ಹೆಸರು

ಪಡೆದಿದ್ದನು. ಆದುದರಿಂದ ಅವನಲ್ಲಿ ಕಲಿಯಲೆಂದು ನಾಲ್ಕೂ ಕಡೆಯಿಂದಲೂ ಹುಡುಗರು ಬರಲಾರಂಭಿಸಿದರು. ವಿಶ್ವಂಭರನ ಕೀರ್ತಿ ಎಲ್ಲ ಕಡೆಗೂ ಹಬ್ಬಿತು. ಅವನು ಒಳ್ಳೆಯ ಧರ್ಮವಂತನೂ ಪಂಡಿತನೂ ಎಂದು ಜನರು ಅವನಿಗೆ ಮನ್ನಣೆ ಕೊಡಹತ್ತಿದರು. ವಿಶ್ವಂಭರನ ಪಾಂಡಿತ್ಯವನ್ನು ಕಂಡು ಆಗಿನ ಕಾಲದ ವಿದ್ವಾಂಸರೆಲ್ಲರೂ ಅವನಿಗೆ ಹೆದರುತ್ತಿದ್ದರು. ಅವನು ಕಾರಣ ವಿಲ್ಲದೆ ಯಾರಿಗೂ ತೊಂದರೆ ಕೊಡುತ್ತಿದ್ದಿಲ್ಲ. ತಾನು ದೊಡ್ಡ ಪಂಡಿತನೆಂಬ ಹೆಮ್ಮೆಯೂ ಅವನಿಗೆ ಇದ್ದಿಲ್ಲ. ಬಹಳ ಉದಾರಿಯಾಗಿದ್ದನು. ಮನೆಗೆ ಬಂದ ಅತಿಥಿ-ಅಭ್ಯಾಗತರನ್ನು ಅವನು ಆದರದಿಂದ ಸತ್ಕರಿಸುತ್ತಿದ್ದನು; ಭಿಕ್ಷುಕರಿಗೂ ದಾರಿಕಾರರಿಗೂ ಸಹಾಯ ಸಲ್ಲಿಸುತ್ತಿದ್ದನು.

ಒಮ್ಮೆ ವಿಶ್ವಂಭರನು ಕೆಲವು ಜನ ಗೆಳೆಯರೊಡನೆ ತನ್ನ ಪೂರ್ವಜರ ಊರಾದ ಸಿಲ್ಹಟಕ್ಕೆ ಹೊರಟನು. ಅವನು ಹೋದಹೋದಲ್ಲೆಲ್ಲ ಜನರು ಅವನಿಗೆ ಮಾನ-ಮರ್ಯಾದೆ ಮಾಡುತ್ತಿದ್ದರು. ಮತ್ತು ಅವನು ವಿವರಿಸಿ ಹೇಳಿದ ಶಾಸ್ತ್ರದ ತತ್ತ್ವಗಳನ್ನು ಭಕ್ತಿಯಿಂದ ಕೇಳುತ್ತಿದ್ದರು. ಆ ಪ್ರವಾಸದಿಂದ ಮರಳಿ ಬರುವಷ್ಟರಲ್ಲಿಯೆ, ಅವನ ಹೆಂಡತಿ ಹಾವು ಕಡಿದು ಮರಣಹೊಂದಿದ್ದಳು. ಈ ಸುದ್ದಿಯನ್ನು ಕೇಳಿ ವಿಶ್ವಂಭರನು ಬಹಳ ವ್ಯಸನ ಪಟ್ಟನು. ಅವನು ಬಹಳ ತಿಳಿವಳಿಕೆಯವನಿದ್ದ ಕಾರಣ, ಹೆಂಡತಿಯ ಸಾವನ್ನು ಮನಸ್ಸಿಗೆ ಹಚ್ಚಿ-ಕೊಳ್ಳಲಿಲ್ಲ. ಮುಂದೆ ತಾಯಿಯ ಆಗ್ರಹದಿಂದ ಎರಡನೆಯ ಮದುವೆಯನ್ನೂ ಮಾಡಿಕೊಂಡನು.

ಕೆಲವು ಕಾಲದ ತರುವಾಯ ವಿಶ್ವಂಭರನು ಗಯೆಗೆ ಹೋದನು; ಅಲ್ಲಿಯ ವಿಷ್ಣುಮಂದಿರದಲ್ಲಿ 'ಈಶ್ವರಪುರಿ' ಎಂಬ ಯೋಗಿಯ ದರ್ಶನ ವಾಯಿತು. ಅಂದಿನಿಂದಲೂ ಅವನಲ್ಲಿ ವೈರಾಗ್ಯವು ಹುಟ್ಟಿತು. ಮುಂದೆ ಅವನು ತನ್ನ ಆಯುಷ್ಯವನ್ನೆಲ್ಲ ದೇವರ ಧ್ಯಾನದಲ್ಲಿ ಕಳೆಯಬೇಕೆಂದು ನಿಶ್ಚ-ಯಿಸಿ ತಿರುಗಿ ಊರಿಗೆ ಬಂದನು. ತಾಯಿಯ ಅಪ್ಪಣೆಯನ್ನು ಪಡೆದು 'ಕೇಶವ ಭಾರತಿ' ಎಂಬವರಿಂದ ಸಂನ್ಯಾಸದೀಕ್ಷೆಯನ್ನು ಪಡೆದು ಕೆಲವು ದಿವಸ ಅವರ ಬಳಿಯಲ್ಲಿಯೆ ಇದ್ದನು.

ವಿಶ್ವಂಭರನು ಸಂನ್ಯಾಸಿಯಾದಮೇಲೆ 'ಚೈತನ್ಯ ಮಹಾಪ್ರಭು' ಎಂದು ಹೊಸ ನಾಮಕರಣವಾಯಿತು. ಚೈತನ್ಯರು ಮುಂದೆ ಮಥುರಾ, ಶ್ರೀರಂಗ ಮುಂತಾದ ಸ್ಥಳಗಳನ್ನು ನೋಡಿಕೊಂಡು ಜಗನ್ನಾಥಪುರಿಗೆ ಹೋದರು. ಅಲ್ಲಿಯೇ ಇದ್ದುಕೊಂಡು, ತಮ್ಮ ಉಳಿದ ಆಯುಷ್ಯವನ್ನೆಲ್ಲ ಅವರು ಜನರಿಗೆ ಉಪದೇಶ ಮಾಡುವುದರಲ್ಲಿ ಕಳೆದರು. ಕೊನೆಗೆ ಕ್ರಿ. ಶ. ೧೫೩೩ರಲ್ಲಿ, ಸ್ನಾನಮಾಡುವಾಗ ಅವರು ಸಮುದ್ರದಲ್ಲಿಯೆ ಸಮಾಧಿಹೊಂದಿದರು.

ಜನವು ಅವರನ್ನು ಶ್ರೀಕೃಷ್ಣನ ಅವತಾರವೆಂದು ತಿಳಿಯುತ್ತಾರೆ. ಅವರಿಗೆ 'ಗೌರಾಂಗ ಪ್ರಭು,' 'ಕೃಷ್ಣ ಚೈತನ್ಯ' ಹಾಗು 'ಗೌರಚಂದ್ರ' ಮೊದಲಾದ ಬೇರೆ ಹೆಸರುಗಳೂ ಇವೆ. ಚೈತನ್ಯರ ಪಂಥದ ಜನರು ಹೆಚ್ಚಾಗಿ ಬಂಗಾಲದಲ್ಲಿಯೇ ಇರುವರು.

## ಅಭ್ಯಾಸನಗಳು

೧. ಚೈತನ್ಯನ ತಂದೆ-ತಾಯಿಗಳು ಯಾರು?

೨. ಅವನ ತಂದೆಯು ನವದ್ವೀಪದಲ್ಲಿ ಏಕೆ ವಾಸವಾಗಿದ್ದರು?

೩. ಚಿಕ್ಕವನಿದ್ದಾಗ ಚೈತನ್ಯನ ಸ್ವಭಾವವು ಹೇಗೆ ಇತ್ತು?

೪. ತಂದೆಯು ಅವನಿಗೆ ಹೆಚ್ಚಿನ ವಿದ್ಯಾಭ್ಯಾಸವನ್ನು ಏಕೆ ಮಾಡಿಸಲಿಲ್ಲ?

೫. ಮದುವೆಯಾದ ಬಳಿಕ ವಿಶ್ವಂಭರನು ಯಾವ ಕೆಲಸವನ್ನು ಕೈಕೊಂಡನು?

೬. ಚೈತನ್ಯರು ತಮ್ಮ ಕೊನೆಯ ದಿನಗಳನ್ನು ಹೇಗೆ ಕಳೆದರು?

೭. ಕೆಳಗೆ ಕೆಲವು ಹೆಸರುಗಳನ್ನೂ, ಅವುಗಳ ಮುಂದೆ ಸಂಬಂಧಿಸಿದ ಸಂಗತಿಗಳನ್ನೂ ಕೊಟ್ಟಿವೆ. ಅವುಗಳನ್ನು ಹೊಂದಿಸಿ ಬರೆಯಿರಿ.

| | | |
|---|---|---|
| ೧. ಈಶ್ವರಪುರಿ | \| | ಚೈತನ್ಯನು ಹುಟ್ಟಿದ ಊರು. |
| ೨. ಕೇಶವ ಭಾರತಿ | \| | ಚೈತನ್ಯನ ಮೊದಲಿನ ಹೆಸರು. |
| ೩. ನವದ್ವೀಪ | \| | ಚೈತನ್ಯನ ಪೂರ್ವಜರ ಊರು. |
| ೪. ಸಿಲ್ಹೆಟ್ | \| | ಅವರ ಮೊದಲಿನ ಗುರುಗಳು. |
| ೫. ವಿಶ್ವಂಭರ | \| | ಅವರು ಗಯಾದಲ್ಲಿ ಕಂಡ ಯೋಗಿಗಳು. |
| ೬. ಗಂಗಾದಾಸರು | \| | ಸಂನ್ಯಾಸದೀಕ್ಷೆ ಕೊಟ್ಟ ಗುರುಗಳು. |

# ೨೧. ಕೃಷ್ಣದೇವರಾಯ

ವಿಜಯನಗರದಲ್ಲಿ ಆಳಿದ ಅರಸರಲ್ಲಿ ಕೃಷ್ಣದೇವರಾಯನು ಹೆಸರಾದವನು. ಇವನಿಗೆ 'ವೀರನರಪತಿ' ಎಂಬ ಬಿರುದು ಇದ್ದಿತು. ವಿಜಯನಗರದ ವೈಭವವು ಜಗತ್ತಿನ ಮೂಲೆಮೂಲೆಗೂ ಗೊತ್ತಾದುದು ಈತನ ಕಾಲದಲ್ಲಿಯೇ. ಇವನು ತುಳುವ ರಾಜವಂಶಕ್ಕೆ ಸೇರಿದವನು.

ವಿಜಯನಗರದ ಕನ್ನಡ ಸಾಮ್ರಾಜ್ಯವು ಒಂದೇ ಆದರೂ, ಅಲ್ಲಿ ಸಿಂಹಾಸನದ ಮೇಲೆ ಕುಳಿತು ರಾಜ್ಯವಾಳಿದ ರಾಜವಂಶ ಒಂದೇ ಅಲ್ಲ. ಒಂದರ ಹಿಂದೆ ಒಂದು ಬೇರೆಬೇರೆ ನಾಲ್ಕು ರಾಜವಂಶಗಳು ಅಲ್ಲಿ ಆಳಿದವು. ಮೊದಲ



ಕೃಷ್ಣದೇವರಾಯನ ಪಟ್ಟಾಭಿಷೇಕ

ನೆಯ ರಾಜವಂಶ ಸಂಗಮನದು. ಎರಡನೆಯದು ಸಾಳುವರದು. ಮೂರನೆಯದು ತುಳುವರದು. ತುಳುವಂಶದ ನರಸರಾಜನು ಸಾಳುವವಂಶದ ನರಸಿಂಹರಾಜನಲ್ಲಿ ಮುಖ್ಯ ಸೇನಾಪತಿಯಾಗಿದ್ದನು. ಸಾಳುವ ನರಸಿಂಹರಾಜ ಸತ್ತುಹೋದಮೇಲೆ, ಈ ಸೇನಾಪತಿಯೇ ವಿಜಯನಗರದ ಸಿಂಹಾಸನವನ್ನು ಏರಿದನು. ಇವನು ಒಳ್ಳೆಯ ರೀತಿಯಿಂದ ರಾಜ್ಯವನ್ನು ಆಳಿ ಪ್ರಜೆಗಳ ಪ್ರೇಮಕ್ಕೆ ಪಾತ್ರನಾದನು.

ನರಸರಾಜನಿಗೆ ಇಬ್ಬರು ಹೆಂಡಂದಿರು. ಒಬ್ಬಳ ಹೊಟ್ಟೆಯಿಂದ ವೀರನರಸಿಂಹ ಎಂಬ ಮಗನಿದ್ದನು. ಅವನೇ ಹಿರಿಯವ. ಇನ್ನೊಬ್ಬಳ ಹೊಟ್ಟೆ

ಯಿಂದ ಕೃಷ್ಣದೇವರಾಯನೆಂಬ ಮಗನು ಹುಟ್ಟಿದನು. ಚಿಕ್ಕಂದಿನಿಂದಲೂ ಕೃಷ್ಣದೇವರಾಯನು ತನ್ನ ತಂದೆಯ ಪ್ರೇಮಕ್ಕೆ ಪಾತ್ರನಾಗಿದ್ದನು. ಏಕೆಂದರೆ ಅವನ ರಾಜಲಕ್ಷಣಗಳೂ ಚೆಲುವಿಕೆಯೂ ಬುದ್ಧಿವಂತಿಕೆಯೂ ಬಂಟತನವೂ ಸಣ್ಣವನಿರುವಾಗಲೆ ಹೊರಹೊಮ್ಮಿ ತೋರುತ್ತಿದ್ದುವು. ಸದ್ಗುಣಿಯಾದ ಮಗನನ್ನೇ ಅಲ್ಲವೇ ತಂದೆಯು ಹೆಚ್ಚಾಗಿ ಪ್ರೀತಿಸುವುದು? ತಂದೆಯಷ್ಟೇ ಅಲ್ಲ, ರಾಜ್ಯದ ಮುಖ್ಯ ಮುಖ್ಯ ಅಧಿಕಾರಿಗಳೂ ಚಿಕ್ಕ ಕೃಷ್ಣದೇವರಾಯನನ್ನು ಹೆಚ್ಚು ಆದರ-ಪ್ರೀತಿಗಳಿಂದ ನೋಡುತ್ತಿದ್ದರು. ಸಾಮ್ರಾಜ್ಯದ ಮುಖ್ಯ ದಂಡನಾಯಕನಾದ ಸಾಳುವ ತಿಮ್ಮರಸನಂತೂ ಕೃಷ್ಣದೇವರಾಯನನ್ನು ಹೊಟ್ಟೆಯ ಮಗನಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದನು. 'ಕೃಷ್ಣದೇವನು ದೊಡ್ಡವನಾಗಿ ವಿಜಯನಗರದ ಸಿಂಹಾಸನದ ಮೇಲೆ ಬಂದರೆ, ಇವನಿಂದ ವಿಜಯನಗರ ಸಾಮ್ರಾಜ್ಯದ ಕೀರ್ತಿಯು ಹೆಚ್ಚುವುದು'—ಎಂಬುದಾಗಿ ಆ ಜಾಣಮಂತ್ರಿ ಅರಿತುಕೊಂಡಿದ್ದನು; ಆದರಂತೆ ಆಗಾಗ ಹೇಳುತ್ತಿದ್ದನು.

ಕೃಷ್ಣದೇವರಾಯನನ್ನು ದೊರೆಯೂ ಮಂತ್ರಿಯೂ ಇಷ್ಟೊಂದು ಪ್ರೀತಿಸುತ್ತಿರುವುದು, ಅವನ ಮಲತಾಯಿಗೆ ಸರಿಬರಲಿಲ್ಲ. ತನ್ನ ಹೊಟ್ಟೆಯ ಮಗನಾದ ವೀರನರಸಿಂಹನನ್ನು ಬಿಟ್ಟು ಆತನಿಗೇ ವಿಜಯನಗರದ ದೊರೆತನವೆಲ್ಲಿ ದೊರೆಯುವುದೋ—ಎಂಬ ಸಂಶಯಕ್ಕೆ ಒಳಗಾದಳು. ಹೊಟ್ಟೆಕಿಚ್ಚಿನಿಂದ, ಕೃಷ್ಣದೇವರಾಯನನ್ನು ಕೊಲ್ಲಿಸಬೇಕೆಂದು ಹೊಂಚುಹಾಕಿದಳು. ಚತುರನಾದ ತಿಮ್ಮರಸನಿಗೆ ಇದು ಗೊತ್ತಾಯಿತು. ಅವನು ಕೃಷ್ಣದೇವರಾಯನನ್ನು ಒಂದು ಗುಪ್ತಸ್ಥಳದಲ್ಲಿ ಇಟ್ಟು ಆತನ ಸಂರಕ್ಷಣೆಯ ಭಾರವನ್ನು ತಾನೇ ಹೊತ್ತನು. ಕೃಷ್ಣದೇವರಾಯ ಕಣ್ಣುಮರೆಯಾದುದರಿಂದ, ಮಲತಾಯಿಗೆ ಏನು ಮಾಡಲಿಕ್ಕೂ ಬಾರದಂತಾಯಿತು. ತಿಮ್ಮರಸನ ಗುಪ್ತರೀತಿಯ ಮೇಲ್ವಿಚಾರಣೆಯಲ್ಲಿ ಆ ರಾಜಪುತ್ರನು ಬೆಳೆಯುತ್ತಲಿದ್ದನು.

ತುಳುವ ನರಸಿಂಹರಾಜನ ತರುವಾಯ, ಅವನ ಹಿರಿಯಮಗ ವೀರನರಸಿಂಹನೇ ಸಾಮ್ರಾಜ್ಯಕ್ಕೆ ಅಧಿಕಾರಿಯಾದನು. ಆದರೆ ಅವನು ಬಹಳ ದಿನ ಬಾಳಲಿಲ್ಲ, ಪಟ್ಟವನ್ನೇರಿದ ಐದು ವರ್ಷಗಳಲ್ಲಿಯೆ ಮರಣಹೊಂದಿದನು. ತಿಮ್ಮರಸನಿಗೆ ಮೊದಲಿನಿಂದಲೂ, ಕೃಷ್ಣದೇವರಾಯನನ್ನೇ ದೊರೆಯನ್ನಾಗಿ ಮಾಡಬೇಕೆಂದು ಆಶೆಯಿದ್ದಿತು. ವೀರನರಸಿಂಹನು ಬೇಗನೆ ತೀರಿಕೊಂಡುದು ಅನುಕೂಲವೇ ಆಯಿತು, ಸಾಳುವ ತಿಮ್ಮರಸನಲ್ಲಿ ವಿಜಯನಗರದ ಪ್ರಜೆಗಳಿಗೆಲ್ಲ ತುಂಬ ವಿಶ್ವಾಸ. ಆದುದರಿಂದ ಈ ಅನುಕೂಲ ಸಂಧಿಯನ್ನು ಸಾಧಿಸಿ, ಅವನು ೧೫೦೯ರಲ್ಲಿ ಕೃಷ್ಣದೇವರಾಯನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿಸಿದನು; ತಾನೇ ಮುಖ್ಯ ದಂಡನಾಯಕನಾದನು.

ಪ್ರಜೆಗಳಲ್ಲಿ ಇದನ್ನು ಯಾರೂ ವಿರೋಧಿಸಲಿಲ್ಲ. ಆದರೆ ಅರಮನೆಯಲ್ಲಿ ಅಸಂತೋಷ ತಲೆದೋರಿತು. ಏಕೆಂದರೆ ವೀರನರಸಿಂಹನ ತರುವಾಯ ಅವನ ಹೊಟ್ಟೆಯ ಮಗನಿಗೆ ಪಟ್ಟವಾಗಬೇಕಾಗಿದ್ದಿತು. ಹಾಗಾಗದೆ ಕೃಷ್ಣದೇವ-ರಾಯನು ಪಟ್ಟವೇರಿದುದರಿಂದ, ವೀರನರಸಿಂಹನ ಮಗನೂ ಕೃಷ್ಣದೇವ-ರಾಯನ ಬೇರೆ ಮೂವರು ತಮ್ಮಂದಿರೂ ಕೃಷ್ಣದೇವರಾಯನನ್ನು ದ್ವೇಷದಿಂದ ನೋಡತೊಡಗಿದರು. ಇದರ ಪರಿಣಾಮ ಒಳ್ಳೆಯದಾಗದೆಂದು ಕೃಷ್ಣದೇವ-ರಾಯನಿಗೂ ಎನಿಸಿತು; ಮಂತ್ರಿಸಾಳುವ ತಿಮ್ಮರಸನಿಗೂ ಎನಿಸಿತು. ಆದುದರಿಂದ ಅವರನ್ನೆಲ್ಲ ರಾಜಧಾನಿಯಿಂದ ದೂರವಿದ್ದ ಚಂದ್ರಗಿರಿಯ ಕೋಟೆಯಲ್ಲಿ ಸೆರೆಯಲ್ಲಿರಿಸಿದರು. ಅದರಿಂದ ಆಡಳಿತವು ಆತಂಕಗಳಿಲ್ಲದೆ ನಡೆಯತೊಡಗಿತು.

ಕೃಷ್ಣದೇವರಾಯನು ತುಂಬ ಶೂರನು. ಸಾಹಸಿಯು. ಸಾಮ್ರಾಜ್ಯವನ್ನು ಬಲಿಸಬೇಕೆಂದು ಮೊದಲಿನಿಂದಲೂ ಆತನಲ್ಲಿ ಮಹತ್ವಾಕಾಂಕ್ಷೆಯಿತ್ತು. ಆದುದರಿಂದ ಅವನು ಮೊದಲು ಕರ್ನಾಟಕದಲ್ಲಿಯ ಪಾಳೆಯಗಾರರನ್ನೆಲ್ಲ ಸೋಲಿಸಿ ತನ್ನ ಅಧೀನರನ್ನಾಗಿ ಮಾಡಿಕೊಂಡನು. ಬಳಿಕ ದಕ್ಷಿಣದಲ್ಲಿಯ ಚೋಳ, ಚೇರ, ಮಲೆಯಾಳ, ಪಾಂಡ್ಯರಾಜ್ಯಗಳನ್ನು ಒಂದರ ಹಿಂದೆ ಒಂದರಂತೆ ವಶಪಡಿಸಿಕೊಂಡನು. ತೆಲುಗಾಣ್ಯ ಪ್ರದೇಶವನ್ನು ತನ್ನದನ್ನಾಗಿ ಮಾಡಿಕೊಂಡನು. ಹಾಗೆಯೇ ಮುಂದೆ ಉತ್ಕಲ ಎಂದರೆ ಓಡಿಸಾ ದೇಶದ ಗಜಪತಿರಾಯನ ಕೂಡ ಯುದ್ಧವನ್ನು ಹೂಡಿ ಗೆಲವನ್ನು ಸಂಪಾದಿಸಿದನು. ಈ ಗೆಲವಿನೊಂದಿಗೆ ಆ ದೇಶದ ರಾಜಕುಮಾರಿಯು ಕೃಷ್ಣದೇವರಾಯನ ಹೆಂಡತಿಯಾಗಿ ದೊರೆತಳು. ಆತನ ಆಳಿಕೆಯ ಹನ್ನೊಂದು ವರ್ಷಗಳೊಳಗಾಗಿ, ಸಂಪೂರ್ಣ ದಕ್ಷಿಣಭಾರತವು ವಿಜಯನಗರದ ಸಾಮ್ರಾಜ್ಯದಲ್ಲಿ ಸೇರಿಬಿಟ್ಟಿತು. ಈತನ ಕಾಲವೆಂದರೆ ವಿಜಯನಗರದ ಏಳಿಗೆಯ ಸಿರಿಗಾಲ.

ಈ ರಾಯನ ಕಾಲದಲ್ಲಿ, ವಿಜಯನಗರವು ದೇಶ-ವಿದೇಶದ ಜನರಿಗೆಲ್ಲ ನೋಡಬೇಕೆನಿಸುವಂತಹ ಅತ್ಯುತ್ತಮ ಪಟ್ಟಣವೆಂದು ಹೆಸರಾಯಿತು. ಇರಾಣ, ಇಟಲಿ, ಪೋರ್ತುಗಾಲ್ ಮೊದಲಾದ ಹೊರದೇಶಗಳಿಂದ ಜನರು ಬಂದು ವಿಜಯನಗರದ ವೈಭವವನ್ನು ನೋಡಿ ಅದನ್ನು ಹೊಗಳಿ ಹಾಡಿದ್ದಾರೆ. ಅವರಲ್ಲಿಯ ಕೆಲವರು ಬರೆದಿಟ್ಟ ವಿಜಯನಗರದ ಸಿರಿ-ಸಂಪತ್ತಿನ ವರ್ಣನೆಗಳು, ಕನ್ನಡಿಗರಲ್ಲಿ ಹೆಮ್ಮೆಯನ್ನು ಹುಟ್ಟಿಸುತ್ತವೆ. ಅವುಗಳನ್ನು ಓದುವಾಗ ಕನ್ನಡಿಗರ ಹಿಂದಿನ ಶೌರ್ಯ-ಸಾಹಸ-ಸಂಪತ್ತು-ಸುಖಜೀವನಗಳ ಚಿತ್ರಗಳು ಕಣ್ಣೆದುರು ಕಟ್ಟಿದಂತಾಗುತ್ತವೆ.

ಕೃಷ್ಣದೇವರಾಯನು ಕೆಚ್ಚೆದೆಯ ಕಲಿಯಿದ್ದಂತೆಯೆ ದೇವರು-ಧರ್ಮಗಳಲ್ಲಿ ತುಂಬಾ ನಂಬುಗೆಯುಳ್ಳವನಾಗಿದ್ದನು. ಎಂತಲೆ ಇವನು ಕಟ್ಟಿಸಿದ ದೇವಾಲಯಗಳೆಷ್ಟು, ಧರ್ಮಛತ್ರಗಳೆಷ್ಟು, ಕೆರೆಕಾಲುವೆಗಳೆಷ್ಟು—ಅವುಗಳ ಎಣಿಕೆಯೆ ಹತ್ತುವುದಿಲ್ಲ. ಪಟ್ಟಾಭಿಷೇಕವಾದ ಕೂಡಲೆ, ಸಾಮ್ರಾಜ್ಯದ ಕುಲದೈವತವಾದ ಶ್ರೀವಿರೂಪಾಕ್ಷನ ಗುಡಿಯ ಹೆಬ್ಬಾಗಿಲ ಮೇಲೆ ಸುಂದರವಾದ ಗೋಪುರವನ್ನು ಕಟ್ಟಿಸಿದನು. ಓಡಿಸಾದ ವಿಜಯಪಡೆದು ಬಂದೊಡನೆಯೆ, ಶ್ರೀಕೃಷ್ಣಸ್ವಾಮಿಯ ಗುಡಿಯನ್ನು ಸೊಗಸಾಗಿ ನಿರ್ಮಿಸಿದನು. ವಿಜಯ-ವಿಟ್ಠಲನ ದೇವಾಲಯದ ಕೆಲಸವನ್ನು ಇವನೇ ಪ್ರಾರಂಭಿಸಿದನು. ಹಜಾರ ರಾಮಸ್ವಾಮಿಯ ಗುಡಿಯನ್ನು ಕಟ್ಟಿಸಿ ಮುಗಿಸಿದನು. ಉಗ್ರನರಸಿಂಹನ ಅತ್ಯದ್ಭುತ ಮೂರ್ತಿಯನ್ನು ಸ್ಥಾಪಿಸಿದನು. ತನ್ನ ಪ್ರೀತಿಯ ಹೆಂಡತಿಯ ಹೆಸರಿನಿಂದ 'ನಾಗಲಾಪುರ' ಎಂಬ ಹೊಸಪೇಟೆಯನ್ನು ನಿರ್ಮಿಸಿ, ರಾಜಧಾನಿಯನ್ನು ದೊಡ್ಡದಾಗಿಸಿದನು.

ರಾಯನ ಧಾರ್ಮಿಕಕಾರ್ಯಗಳು ಹಲವು ಜನ ಧರ್ಮಗುರುಗಳನ್ನೂ ದೇವಭಕ್ತರನ್ನೂ ವಿಜಯನಗರಕ್ಕೆ ಬರಮಾಡಿಕೊಂಡುವು. ಸುಪ್ರಸಿದ್ಧ ವೈಷ್ಣವ ಸ್ವಾಮಿಗಳಾದ ಶ್ರೀವ್ಯಾಸರಾಯರು, ವಿಜಯನಗರದಲ್ಲಿ ಬಂದು ನೆಲೆಸಿದರು. ಅವರು ರಾಯನ ನೆರವನ್ನು ಪಡೆದು ಹರಿದಾಸರ ಬಳಗವನ್ನು ಬೆಳೆಸಿದರು. ಸುಪ್ರಸಿದ್ಧ ಹರಿದಾಸರಾದ ಪುರಂದರದಾಸರೂ ಕನಕದಾಸರೂ ವಿಜಯನಗರದಲ್ಲಿಯೇ ಇದ್ದುಕೊಂಡು ಹರಿಭಕ್ತಿಯ ಸಾಹಿತ್ಯವನ್ನು ಬೆಳೆಸಿದರು.

ಕೃಷ್ಣದೇವರಾಯನು ಪ್ರತಿದಿನವೂ ಗರಡಿಮನೆಗೆ ಹೋಗಿ ವ್ಯಾಯಾಮ ಸಾಧನೆಗಳನ್ನು ಮಾಡುತ್ತಿದ್ದನಂತೆ. ಕುದುರೆಯ ಸವಾರಿಯೂ ಕತ್ತಿವರಸೆಯಾಟವೂ ಆತನ ನಿತ್ಯದ ಅಂಗಸಾಧನೆಗಳಾಗಿದ್ದುವು. ದೇಹಬಲವನ್ನು ಬೆಳೆಸಿಕೊಂಡಂತೆ ಅವನು ವಿದ್ಯಾಬಲವನ್ನೂ ಹೆಚ್ಚಿಸಿಕೊಂಡಿದ್ದನು. ಆಸ್ಥಾನದಲ್ಲಿ ಹಲವಾರು ಪಂಡಿತರಿಗೆ ಆಶ್ರಯವನ್ನು ಕೊಟ್ಟು, ಅವರಿಂದ ಬೇರೆ ಬೇರೆ ಶಾಸ್ತ್ರವಿಷಯದ ಗ್ರಂಥಗಳನ್ನು ಬರೆಸುತ್ತಿದ್ದನು; ಅವುಗಳನ್ನು ಓದಿಸಿ ಕೇಳುತ್ತಿದ್ದನು. ವಿಚಾರಚರ್ಚೆ ನಡೆಸುತ್ತಿದ್ದನು. ಹಲವು ಜನ ಕನ್ನಡ-ತೆಲುಗು ಕವಿಗಳು ಇವನ ಪೋಷಣೆಯಲ್ಲಿದ್ದರು. ಸ್ವತಃ ತಾನೂ ರಸಿಕನಾದ ಕವಿಯಾಗಿದ್ದನು. ಇವುಗಳ ಮೂಲಕ ಕೃಷ್ಣದೇವರಾಯನಿಗೆ 'ಕನ್ನಡ ರಾಜ್ಯರಮಾರಮಣ' ಎಂಬ ಪದವಿಯು ಬಂದಿತ್ತು.

ಅಂದಿನ ರಾಜರ ಪದ್ಧತಿಯಂತೆ ಕೃಷ್ಣದೇವರಾಯನು ಹಲವು ಜನ ಹೆಂಡಂದಿರನ್ನು ಮದುವೆಮಾಡಿಕೊಂಡಿದ್ದನು. ಅವರಲ್ಲಿ ಹಿರಿಯಹೆಂಡತಿ ತಿರುಮಲದೇವಿ, ಕಿರಿಯಹೆಂಡತಿ ಚಿನ್ನಾಂಬಿಕೆ ಇವರಿಬ್ಬರ ಹೆಸರುಗಳು ಮಾತ್ರ

ಚರಿತ್ರಕಾರರಿಗೆ ಗೊತ್ತಾಗಿವೆ. ಇವನಿಗೆ ಒಬ್ಬನೇ ಒಬ್ಬ ಮಗನಿದ್ದನು. ಆರು ವರುಷದವನಿರುವಾಗಲೆ ಮಗನನ್ನು ಪಟ್ಟದ ಮೇಲೆ ಕುಳ್ಳಿರಿಸಿ, ಕೃಷ್ಣದೇವ ರಾಯ ತಾನು ದಂಡನಾಯಕನಾಗಿ ಆಡಳಿತವನ್ನು ಸಾಗಿಸಲು ಹವಣಿಸಿ ದನು. ಆದರೆ ಮಗನು ಅಲ್ಪಾಯುವಾಗಿ ಬೇಗನೆ ಮರಣಹೊಂದಲು ಮತ್ತೆ ತಾನೇ ದೊರೆಯಾಗಬೇಕಾಯಿತು. ೧೫೩೦ರಲ್ಲಿ ಕೃಷ್ಣದೇವರಾಯನು ದಿವಂಗ ತನಾದನು. ಈತನ ತರುವಾಯ ವಿಜಯನಗರ ಸಾಮ್ರಾಜ್ಯದ ಕೀರ್ತಿಯು ಕಳೆಗುಂದುತ್ತ ಹೋಯಿತು.

## ಅಭ್ಯಾಸನಗಳು

೧. ಕೃಷ್ಣದೇವರಾಯನು ಯಾವ ವಂಶದವನು?

೨. ತಂದೆಯು ಕೃಷ್ಣದೇವರಾಯನನ್ನು ಏಕೆ ಪ್ರೀತಿಸುತ್ತಿದ್ದನು?

೩. ಕೃಷ್ಣದೇವರಾಯನು ಪಟ್ಟಕ್ಕೆ ಹೇಗೆ ಕುಳಿತನು?

೪. ಕೃಷ್ಣದೇವರಾಯನು ದಿಗ್ವಿಜಯದಲ್ಲಿ ಯಾವ ಯಾವ ರಾಜ್ಯಗಳನ್ನು ಗೆದ್ದನು?

೫. ಕೃಷ್ಣದೇವರಾಯನು ಕೈಕೊಂಡ ಜನಹಿತದ ಮತ್ತು ಧಾರ್ಮಿಕ ಕಾರ್ಯಗಳಾವುವು?

೬. ಕೃಷ್ಣದೇವರಾಯನು ತನ್ನ ಆಳಿಕೆಯಲ್ಲಿ ಯಾವ ಯಾವ ಮಹಾಪುರುಷರಿಗೆ ಆಶ್ರಯವನ್ನು ಕೊಟ್ಟಿದ್ದನು?

೭. ಕೃಷ್ಣದೇವರಾಯನಲ್ಲಿಯ ಉತ್ತಮ ಗುಣಗಳಾವುವು?

# ೨೨. ಗುರು ನಾನಕ

ಪಂಜಾಬ ಪ್ರಾಂತದಲ್ಲಿ ತಲವಂಡಿ ಎಂಬ ಗ್ರಾಮವಿದೆ. ಅಲ್ಲಿ ಹಿಂದಕ್ಕೆ ಕಾಳು ವೇದಿ ಎಂಬ ಒಬ್ಬ ವ್ಯಾಪಾರಿಯು ಇರುತ್ತಿದ್ದನು. ತೃಪ್ತಾ ಎಂಬವಳು ಆತನ ಹೆಂಡತಿ. ಗಂಡ-ಹೆಂಡಿರಿಬ್ಬರು ಸುಶೀಲರೂ ದೇವಭಕ್ತರೂ ಆಗಿದ್ದರು. ಇವರು ಆಲಸಿಗರಾಗದೆ ದುಡಿದು, ಬೆವರುಸುರಿಸಿ ಅದರ ಫಲವನ್ನು ಉಣ್ಣು-ತ್ತಿದ್ದರು. ಇವರಿಗೆ ಬಹಳ ದಿವಸಕ್ಕೆ ಒಬ್ಬ ಮಗನು ಹುಟ್ಟಿದನು (೧೪೬೯); ಆತನಿಗೆ ನಾನಕನೆಂದು ಹೆಸರಿಟ್ಟರು.




ಗುರು ನಾನಕರ ಸಂಕೀರ್ತನ

ನಾನಕನು ಆರು ವರುಷದವನಾಗಲು, ಅವನ ತಂದೆಯು ಅವನನ್ನು ಸಾಲೆಗೆ ಹಾಕಿದನು. ಗುರುಗಳು ಪಾಠಹೇಳುವಾಗ ಅವನು ಅತ್ತ ಲಕ್ಷ್ಯ-ಗೊಡದೆ ದೇವರ ಧ್ಯಾನದಲ್ಲಿಯೆ ಇರುತ್ತಿದ್ದನು. ಸಾಲೆಯ ಅಭ್ಯಾಸದ ಕಡೆಗೆ ಅವನ ಲಕ್ಷ್ಯವೇ ಇರಲಿಲ್ಲ. ಗುರುಗಳ ಕೂಡ 'ದೇವ-ಧರ್ಮ'ಗಳ ಸಂಬಂಧ-ವಾಗಿ ಮಾತುಕತೆ ನಡೆಸುತ್ತಿದ್ದನು. ಇದರಿಂದ ಗುರುಗಳು ಬೇಸತ್ತು ಅವನ ತಂದೆಗೆ ತಿಳುಹಿದರು.

ಮಗನು ಕಲಿಯುವುದಿಲ್ಲವೆಂದು ತಿಳಿದು ತಂದೆಯು ನಾನಕನನ್ನು ಸಾಲೆಯಿಂದ ಬಿಡಿಸಿದನು. ಸಣ್ಣದೊಂದು ಕುರಿಹಿಂಡುಮಾಡಿ, ಅದನ್ನು ಕಾಯಲು ಅವನನ್ನು ಅಡವಿಗೆ ಕಳುಹಿದನು. ಇದರಿಂದ ನಾನಕನಿಗೆ ಮತ್ತಿಷ್ಟು ಅನುಕೂಲವಾಯಿತು. ಅವನು ಕುರಿಹಿಂಡನ್ನು ಹೊಡೆದುಕೊಂಡು ಅಡವಿಗೆ

ಹೋಗುತ್ತಿದ್ದನು; ಅಲ್ಲಿ ಕುರಿಗಳನ್ನು ಮೇಯಲು ಬಿಟ್ಟು ತಾನು ಗಿಡದ ಬುಡದಲ್ಲಿ ದೇವರ ಧ್ಯಾನಮಾಡುತ್ತ ಕುಳಿತುಕೊಳ್ಳುತ್ತಿದ್ದನು.

ಒಂದು ದಿನ ನಾನಕನು, ಕುರಿಗಳನ್ನು ಮೇಯಲು ಬಿಟ್ಟು, ಗಿಡದ ಬುಡದಲ್ಲಿ ದೇವರ ಧ್ಯಾನಮಾಡುತ್ತ ಕುಳಿತಿದ್ದನು. ಆಗ ಆ ಕುರಿಗಳು ನೆರೆಯಲ್ಲಿ ಇದ್ದ ಹೊಲಕ್ಕೆ ಹೋಗಿ ಬೆಳೆಯನ್ನು ತಿನ್ನತೊಡಗಿದುವು. ಕೂಡಲೆ ಹೊಲದ ಒಡೆಯನು ಬಂದನು; ಆ ಕುರಿಗಳನ್ನು ಒಯ್ದು ದೊಡ್ಡಿಗೆ ಹಾಕಿದನು. ಈ ಸಂಗತಿ ತಂದೆ ಕಾಳು ವೇದಿಗೆ ಗೊತ್ತಾಯಿತು. ಅವನು ದಂಡತುಂಬಿ ಕುರಿಗಳನ್ನು ಬಿಡಿಸಿಕೊಂಡು ಬಂದನು. ಮಗನ ಈ ನಡತೆಯನ್ನು ಕಂಡು ತಂದೆಯು ದುಃಖಪಟ್ಟನು. ಅಂದಿನಿಂದ ಅವನು ನಾನಕನು ಕುರಿಕಾಯುವುದನ್ನೂ ಬಿಡಿಸಿಬಿಟ್ಟನು.

ಮುಂದೆ ಕಾಳು ವೇದಿಯು ನಾನಕನನ್ನು ಹೊಲದ ಕೆಲಸ ಮಾಡಲು ಹಚ್ಚಿದನು. ಅಲ್ಲಿಯೂ ಅಷ್ಟೆ; ಹೊಲದಲ್ಲಿ ಕೆಲಸ ಮಾಡದೆ ಅವನು ದಾರಿಯಲ್ಲಿ ಹಾಯ್ದು ಹೋಗುವ ಸಾಧು-ಸಂತರೊಡನೆ ಮಾತನಾಡುತ್ತ, ಅವರೊಡನೆ ಭಜನೆಮಾಡುತ್ತ ಕಾಲಕಳೆಯತೊಡಗಿದನು. ಇದರಿಂದ ಹೊಲಕ್ಕೆ ಬಂದ ಆಳುಗಳು ಸರಿಯಾಗಿ ಕೆಲಸಮಾಡುವುದನ್ನೆ ಬಿಟ್ಟುಬಿಟ್ಟರು. ಎಲ್ಲರೂ ಇವನೊಡನೆ ದೇವ-ಧರ್ಮಗಳ ಬಗೆಗೆ ಮಾತಾಡುತ್ತ ಕುಳಿತುಬಿಡುತ್ತಿದ್ದರು. ಇದರಿಂದ ಹೊಲದ ಕೆಲಸವು ಸರಿಯಾಗಿ ಸಾಗದಾಯಿತು. ಬಳಿಕ ಕಾಳು ವೇದಿಯು ನಾನಕನನ್ನು ವ್ಯಾಪಾರಕ್ಕೆ ಹಚ್ಚಬೇಕೆಂದು ಯೋಚಿಸಿದನು. ಒಂದು ದಿನ ಆತನ ಕೈಯಲ್ಲಿ ಕೆಲವು ಹಣವನ್ನು ಕೊಟ್ಟು ವ್ಯಾಪಾರಕ್ಕೆಂದು ಪರವೂರಿಗೆ ಕಳುಹಿದನು. ನಾನಕನು ದಾರಿಯಲ್ಲಿ ಸಾಧು-ಸಂತರಿಗೆ ಆ ಹಣವನ್ನೆಲ್ಲ ದಾನಮಾಡಿ ಬರಿಗೈಯಿಂದ ಮನೆಗೆ ಬಂದನು. ಇದನ್ನು ಕಂಡು ತಂದೆ ಬಲು ರೇಗಿದನು. ನಾನಕನನ್ನು ಚೆನ್ನಾಗಿ ಹೊಡೆದು ಮನೆಬಿಡಿಸಿ ಹೊರಗೆ ಹಾಕಿದನು.

ಮನೆಯಿಂದ ಹೊರಬಿದ್ದು ನಾನಕನು ತನ್ನ ಬೀಗನ ಊರಿಗೆ ಹೋದನು. ಅಲ್ಲಿ ಅಕ್ಕನ ಮನೆಯಲ್ಲಿ ಕೆಲವು ದಿವಸಗಳ ವರೆಗೆ ಉಪಚಾರ ಹೊಂದಿದನು. ಬಳಿಕ ಅಲ್ಲಿಯ ನವಾಬನ ಉಗ್ರಾಣದಲ್ಲಿ ಕಾರಕೂನನಾಗಿ ಕೆಲಸ ಮಾಡಹತ್ತಿದನು. ನಾನಕನು ಒಳ್ಳೆಯ ರೀತಿಯಿಂದ ಕೆಲಸ ಮಾಡುತ್ತಿದ್ದುದನ್ನು ಕಂಡು, ಬಳಗದವರೆಲ್ಲ ಕೂಡಿ ಅವನಿಗೆ ಮದುವೆಮಾಡಿದರು.

ಮದುವೆಯಾದ ಮೇಲೆ ನಾನಕನು ಬೇರೆಯ ಮನೆಮಾಡಿಕೊಂಡು ಇರಹತ್ತಿದನು. ಅವನು ಒಳ್ಳೆಯ ಭಕ್ತಿವಂತನೂ ನೀತಿವಂತನೂ ಎಂದು ಹೆಸರಾಗಿದ್ದನು. ಆದುದರಿಂದ ಎಷ್ಟೋ ಜನರು ದಿನಾಲು ಅವನ ಮನೆಗೆ

ಬಂದು ಅವನ ಉಪದೇಶಗಳನ್ನು ಕೇಳಿಕೊಂಡು ಹೋಗುತ್ತಿದ್ದರು. ಕೆಲವು ದಿವಸಗಳಾದಬಳಿಕ ನಾನಕನಿಗೆ ಒಬ್ಬ ಸಂನ್ಯಾಸಿ ಭೆಟ್ಟಿಯಾದನು. ಆ ಸಂನ್ಯಾಸಿ ನಾನಕನ ಭಕ್ತಿಯನ್ನು ಕಂಡು "ನೀನು ದೇವತಾ ಸೇವೆಯಲ್ಲಿ ಕಾಲ ಕಳೆಯಬೇಕು" ಎಂದು ಅವನಿಗೆ ಉಪದೇಶ ಮಾಡಿದನು. ಅಂದಿನಿಂದ ನಾನಕನು ದೇವರ ಧ್ಯಾನದಲ್ಲಿಯೆ ಹೆಚ್ಚು ಕಾಲಕಳೆಯಹತ್ತಿದನು.

ಆ ಕಾಲದಲ್ಲಿ ಧರ್ಮದ ಹೆಸರಿನಿಂದ ಹಿಂದು-ಮುಸಲ್ಮಾನರಲ್ಲಿ ಆಗಾಗ ಹೊಡೆದಾಟ-ಬಡಿದಾಟಗಳು ಆಗುತ್ತಿದ್ದುವು. ಆಡಳಿತದ ಅಧಿಕಾರವು ಕೈಯಲ್ಲಿದ್ದ ಮುಸಲ್ಮಾನರು, ಹಿಂದುಗಳನ್ನು ಒತ್ತಾಯದಿಂದ ಮತಾಂತರಗೊಳಿಸುತ್ತಿದ್ದರು. ಅದನ್ನು ಕಂಡು ನಾನಕನಿಗೆ ಬಹಳ ಕೆಡುಕೆನಿಸಿತು. 'ದೇವರ ಮತ್ತು ಧರ್ಮದ ಹೆಸರಿನಲ್ಲಿ ಇದೆಂತಹ ಅನ್ಯಾಯ?' ಎಂದು ಅವನು ದುಃಖಿಸಿದನು. ಈ ಬಡಿದಾಟಗಳನ್ನು ತಗ್ಗಿಸಲು ಹಿಂದು-ಮುಸಲ್ಮಾನರಲ್ಲಿ ಐಕ್ಯವನ್ನು ಹುಟ್ಟಿಸಬೇಕೆಂದು ಯತ್ನಿಸತೊಡಗಿದನು. ಧರ್ಮ-ನೀತಿಗಳ ಬಗೆಗೆ ಸುಂದರವಾದ ಹಾಡುಗಳನ್ನು ಕಟ್ಟಿ ಹಾಡತೊಡಗಿದನು. ಅವನ ಈ ಹಾಡುಗಳು ಜನರ ಮನಸ್ಸನ್ನು ಸೆಳೆದುವು. ನಾನಕನ ಹಾಡುಗಳನ್ನು ಕೇಳಲು ಜನರ ತಂಡ ಅವನ ಸುತ್ತಲೂ ನೆರೆಯಹತ್ತಿತು. ಅವನೊಬ್ಬ ಶ್ರೇಷ್ಠ ಮನುಷ್ಯನೆಂದು ಎಲ್ಲರೂ ತಿಳಿದುಕೊಂಡು, ಕೆಲವರು ಅವನ ಶಿಷ್ಯರಾದರು. ತನ್ನ ಕಾರಕೂನಿಕೆಯ ಕೆಲಸವನ್ನು ಬಿಟ್ಟು ನಾನಕನು, ಗೀತಗಳನ್ನು ಹಾಡುತ್ತ ನೀತಿಯನ್ನು ಬೋಧಿಸುತ್ತ ತಿರುಗಾಡಹತ್ತಿದನು.

ನಾನಕನು ಹಾಗೆಯೆ ತಿರುಗುತ್ತ ತಿರುಗುತ್ತ ಕಾಶಿ, ರಾಮೇಶ್ವರ, ತಿರುಪತಿ, ಕಂಚಿ ಮೊದಲಾದ ತೀರ್ಥ-ಕ್ಷೇತ್ರಗಳಿಗೆ ಹೋದನು. ಅಲ್ಲಿ ಅನೇಕ ಪಂಡಿತರನ್ನು ಭೆಟ್ಟಿಯಾದನು. ತನ್ನ ಮನದ ಆಸೆಯನ್ನು ಅವರಿಗೆ ತಿಳಿಯಿಸಿದನು. ಅವರ ಮನ್ನಣೆಯನ್ನು ಪಡೆದನು. ಮುಂದೆ ಮಕ್ಕಾಗೆ ಹೋದನು ಅಲ್ಲಿ ಮೌಲ್ವಿಗಳ ಮತ್ತು ಖಾಜಿಗಳ ದರ್ಶನ ತೆಗೆದುಕೊಂಡನು. ಅವರಿಗೆ ತನ್ನ ಇಚ್ಛೆಯನ್ನು ತಿಳುಹಿದನು. ಅವರ ಕೂಡ ಧರ್ಮದ ಬಗೆಗೆ ಚರ್ಚೆ ಮಾಡಿದನು. ಅವರಿಗೂ ಒಪ್ಪಿಗೆಯಾಗುವಂತೆ ಮಾತಾಡಿ ಹಿಂದಿರುಗಿ ಬಂದನು.

'ಮನುಷ್ಯ-ಮನುಷ್ಯರಲ್ಲಿ ಪ್ರೇಮವಿರಬೇಕು. ನನ್ನ ಧರ್ಮ ಮೇಲು, ತನ್ನ ಧರ್ಮ ಮೇಲು' ಎಂದು ಬಡಿದಾಡಬಾರದು. ಎಲ್ಲರೂ ಒಬ್ಬನೇ ಈಶ್ವರನ ಮಕ್ಕಳೆಂದು ತಿಳಿದು ಜೀವನದಲ್ಲಿ ಸುಖ-ಶಾಂತಿಗಳನ್ನು ಪಡೆಯಬೇಕು. ಮೂರ್ತಿಗಳನ್ನು ಪೂಜಿಸಬಾರದು. ಆಕಳುಗಳು ಪೂಜ್ಯಪ್ರಾಣಿಗಳು. ಅವುಗಳನ್ನು ಹಿಂಸಿಸಬಾರದು' ಎಂದು ನಾನಕನು ಉಪದೇಶಮಾಡಿ, ತನ್ನದೇ ಆದ ಒಂದು ಹೊಸ ಪಂಥವನ್ನು ಪ್ರಾರಂಭಿಸಿದನು. ಅದಕ್ಕೆ 'ನಾನಕಪಂಥ' ಎಂದು

ಕರೆಯುವರು. ನಾನಕನು ಆ ಪಂಥದ ಗುರುವಾದನು. ಅನೇಕರು ಅವನ ಪಂಥವನ್ನು ಸ್ವೀಕರಿಸಿ ಶಿಷ್ಯರಾದರು. ಕ್ರಿ. ಶ. ೧೫೩೮ರಲ್ಲಿ ಗುರು ನಾನಕನು ಮರಣಹೊಂದಿದನು.

ನಾನಕನ ತರುವಾಯ ಅವನ ಶಿಷ್ಯರು ಆ ಧರ್ಮವನ್ನು ನಡೆಸಿಕೊಂಡು ಬಂದರು. ಅದು 'ಸೀಖ್' ಧರ್ಮವೆಂದು ಹೆಸರು ಪಡೆಯಿತು. ಸೀಖರು ಅಮೃತಸರದಲ್ಲಿ ಒಂದು ಮಂದಿರ ಕಟ್ಟಿದರು. ಗುರು ನಾನಕನು ಉಪದೇಶಿಸಿದ ತತ್ತ್ವಗಳ ಗ್ರಂಥವಾದ 'ಗ್ರಂಥಸಾಹಿಬಾ'ವನ್ನು ಅಲ್ಲಿ ಇಟ್ಟು ಪೂಜೆಮಾಡ ಹತ್ತಿದರು. ಸೀಖ್ ಜನರು ತುಂಬ ಶೂರರು; ಧರ್ಮದ ಬಗೆಗೆ ಬಹಳ ಅಭಿಮಾನವುಳ್ಳವರು.

## ಅಭ್ಯಸನಗಳು

೧. ನಾನಕನ ತಂದೆ-ತಾಯಿಗಳಾರು? ಹಾಗು ಅವರು ಯಾವ ಉದ್ಯೋಗವನ್ನು ಮಾಡುತ್ತಿದ್ದರು?

೨. ನಾನಕನನ್ನು ಅವನ ತಂದೆಯು ಸಾಲೆಯಿಂದ ಏಕೆ ಬಿಡಿಸಿದನು?

೩. ಕುರಿಗಳನ್ನು ಕಾಯುತ್ತಿರುವಾಗ ನಾನಕನು ಏನು ಮಾಡುತ್ತಿದ್ದನು?

೪. ನಾನಕನನ್ನು ಅವನ ತಂದೆಯು ಹೊಲದ ಕೆಲಸದಿಂದ ಬಿಡಿಸಿ ವ್ಯಾಪಾರಕ್ಕೆ ಏಕೆ ಕಳುಹಿದನು?

೫. ತಂದೆಯು ನಾನಕನನ್ನು ಮನೆಬಿಟ್ಟು ಹೊರಗೆ ಏಕೆ ಹಾಕಿದನು?

೬. ನಾನಕನು ಸ್ಥಾಪಿಸಿದ ಧರ್ಮವು ಯಾವುದು?

೭. ನಾನಕನ ಉಪದೇಶದ ಮಾತುಗಳಾವುವು?

೮. ಸೀಖರ ಪವಿತ್ರವಾದ ಕ್ಷೇತ್ರವು ಮತ್ತು ಧರ್ಮಗ್ರಂಥಗಳು ಯಾವುವು?



# ೨೩. ಮೀರಾಬಾಯಿ

ಮಾರವಾಡ ದೇಶದಲ್ಲಿ ಕುರಕಿ ಎಂಬುದೊಂದು ಚಿಕ್ಕ ಪಟ್ಟಣವಿದೆ. ಸುಮಾರು ನಾಲ್ಕುನೂರು ವರ್ಷಗಳ ಹಿಂದೆ, ರತನ್‌ಸಿಂಹ ಹೆಸರಿನ ಒಬ್ಬ ಚಿಕ್ಕ ಸಂಸ್ಥಾನಿಕನು ಅಲ್ಲಿ ಇದ್ದನು. ಅವನು ರಾಠೋಡ ವಂಶದ ರಜಪೂತನು. ರತನಸಿಂಹನ ಹೆಂಡತಿಯು ತುಂಬ ಸಾಧ್ವಿ; ಸುಶೀಲೆ; ಗಂಡನೊಂದಿಗೆ ಬಲು ಭಕ್ತಿಯಿಂದ ನಡೆದುಕೊಳ್ಳುವಳು.

ರತನಸಿಂಹನಿಗೆ ಬಹುದಿವಸ ಮಕ್ಕಳೇ ಆಗಿರಲಿಲ್ಲ. ಗಂಡ-ಹೆಂಡಿರಿಬ್ಬರೂ ಮಕ್ಕಳ ಸಲುವಾಗಿ ದೇವರ ಸೇವೆಯನ್ನು ಮಾಡುತ್ತಿದ್ದರು; ಸಾಧು-ಸಂತರನ್ನು ಆದರಿಸಿ ಉಪಚರಿಸುತ್ತಿದ್ದರು. ಎಷ್ಟೋ ದಿನಗಳು ಕಳೆದಮೇಲೆ, ರತನಸಿಂಹನಿಗೆ ಹೆಣ್ಣುಮಗುವೊಂದು ಹುಟ್ಟಿತು. ಗಂಡ-ಹೆಂಡಿರಿಬ್ಬರಿಗೂ ತುಂಬ ಸಂತೋಷವಾಯಿತು. ಕೂಸಿಗೆ 'ಮೀರಾ' ಎಂದು ಹೆಸರಿಟ್ಟರು. ಒಬ್ಬಳೇ ಒಬ್ಬಳಾಗಿ ಇರುವ ಮಗಳನ್ನು ಪ್ರೀತಿಯಿಂದ ಸಲಹುತ್ತಿದ್ದರು.

ಮೀರಾ ದಿನದಿನಕ್ಕೆ ಬೆಳೆಯತೊಡಗಿದಳು. ಮುದ್ದು-ಮುದ್ದಾದ ಹುಡುಗಿ. ಎಲ್ಲರ ಕಣ್ಣುಗಳನ್ನೂ ಸೆಳೆದುಕೊಳ್ಳುವಂತಹ ಚೆಲುವಿಕೆ. ಅವಳ ತಂದೆ-ತಾಯಿಗಳು ದೇವಭಕ್ತರು; ಆದುದರಿಂದ ಮನೆಯಲ್ಲಿ ಆಗಾಗ ಪೂಜೆ-ಪುರಸ್ಕಾರಗಳು ನಡೆಯುವುವು. ಸಾಧು-ಸಂತರು ಮನೆಗೆ ಬರುವರು. ಅವರು ಬಂದಾಗ, ಮನೆಯಲ್ಲಿ ದೇವರ ಭಜನೆ-ಕೀರ್ತನೆಗಳು ಆಗುತ್ತಿದ್ದುವು. ಚಿಕ್ಕ ಮೀರಾ ಇವುಗಳನ್ನೆಲ್ಲ ಮನಸ್ಸುಗೊಟ್ಟು ನೋಡುವಳು. ತಾನೂ ತನಗೆ ತಿಳಿದಂತೆ ಭಜನೆ-ಕೀರ್ತನೆಗಳಲ್ಲಿ ಭಾಗವಹಿಸುವಳು.

ಮೀರಾ ಐದಾರು ವರುಷದವಳಾಗಿರಬಹುದು. ಆಗ ಒಂದು ದಿನ ರತನಸಿಂಹನ ಮನೆಗೆ ಒಬ್ಬ ಸಾಧುವು ಬಂದನು. ಅವನು ಶ್ರೀಕೃಷ್ಣನ ಭಕ್ತನು. ಶ್ರೀಕೃಷ್ಣನ ಒಂದು ಮೂರ್ತಿಯನ್ನು ಅವನು ಜೊತೆಯಲ್ಲಿ ಇರಿಸಿಕೊಂಡಿದ್ದು, ಅದನ್ನು ಪ್ರತಿನಿತ್ಯವೂ ಪೂಜಿಸುತ್ತಿದ್ದನು. ಆ ಮೂರ್ತಿಯ ಎದುರು ಕುಳಿತು ಭಜನೆ ಮಾಡುತ್ತಿದ್ದನು; ಹಾಡಿ ಹಾಡಿ ಕುಣಿಯುತ್ತಿದ್ದನು. ಸಾಧುವು ಶ್ರೀಕೃಷ್ಣನ ಪೂಜೆಮಾಡುತ್ತಿರುವಾಗ, ಮೀರಾ ಬಳಿಯಲ್ಲಿಯೆ ಕುಳಿತಿರುತ್ತಿದ್ದಳು. ಅವನೊಂದಿಗೆ ಭಜನೆ ಮಾಡುತ್ತಿದ್ದಳು; ಹಾಡಿ ಹಾಡಿ ಕುಣಿಯುತ್ತಿದ್ದಳು. ಚಿಕ್ಕ ಹುಡುಗಿಯ ಈ ರೀತಿಯನ್ನು ಕಂಡು ಸಾಧುವಿಗೆ ಆಶ್ಚರ್ಯವಾಯಿತು. ಆನಂದವೂ ಆಯಿತು. ಅವನು ಮೆಚ್ಚಿ, ನಿನಗೇನು ಬೇಕೆಂದು ಮೀರಾಬಾಲೆಯನ್ನು ಕೇಳಿದನು. ಆಗ ಅವಳು ಶ್ರೀಕೃಷ್ಣನ ಮೂರ್ತಿ ಬೇಕೆಂದು ಮುದ್ದು-ಮುದ್ದಾಗಿ ಕೇಳಿದಳು. ಸಾಧುವಿಗೆ ಬಲು ಆನಂದವಾಯಿತು. ಆತನು

ಶ್ರೀಕೃಷ್ಣನ ಮೂರ್ತಿಯನ್ನು ಅವಳಿಗೆ ಕೊಟ್ಟು 'ನಿತ್ಯವೂ ನೀನು ಇವನ್ನು ಪೂಜಿಸಬೇಕು!' ಎಂದು ಹೇಳಿದನು. ರತನಸಿಂಹನ ಅಪ್ಪಣೆ ಪಡೆದು ಅವನು ಮುಂದೆ ಪ್ರಯಾಣ ಮಾಡಿದನು.

ಶ್ರೀಕೃಷ್ಣನ ಮೂರ್ತಿಯು ದೊರೆತ ಕೂಡಲೆ ಮೀರಾಬಾಲೆಗೆ ಬಹಳ ಸಂತೋಷವಾಯಿತು. ಅವಳು ಪ್ರತಿದಿನವೂ ಭಕ್ತಿಯಿಂದ ಅದನ್ನು ಪೂಜಿಸ ತೊಡಗಿದಳು. ನಿತ್ಯವೂ ಅದಕ್ಕೆ ಸ್ನಾನಮಾಡಿಸುವಳು; ಮೈಯನ್ನು ಒರಸುವಳು; ಗಂಧಾಕ್ಷತೆ ಹಚ್ಚುವಳು; ಹೂಗಳನ್ನೇರಿಸುವಳು; ನೈವೇದ್ಯಮಾಡುವಳು;



ಮೀರಾಬಾಯಿಯ ಭಜನೆ

ಆರತಿಯನ್ನು ಬೆಳಗುವಳು; ಭಜನೆಯನ್ನು ಮಾಡುವಳು; ಹಾಡಿ ಹಾಡಿ ಕುಣಿಯುವಳು. ಮಗಳ ಈ ಭಕ್ತಿಯನ್ನು ನೋಡಿ, ತಂದೆ-ತಾಯಿಗಳು ಹಿಗ್ಗಿದರು. ಬರುಬರುತ್ತ ಮೀರಾ, ಶ್ರೀಕೃಷ್ಣನ ಮೇಲಿನ ಪದಗಳನ್ನು ತಾನೇ ಕಟ್ಟಿಕಟ್ಟಿ ಇಂಪಾಗಿ ಹಾಡತೊಡಗಿದಳು. ಹಾಡುವಾಗ ಶ್ರೀಕೃಷ್ಣನ ಮೂರ್ತಿಯೊಂದನ್ನು ಬಿಟ್ಟು ಇನ್ನಾವ ವಸ್ತುವೂ ಆಕೆಗೆ ಕಾಣುತ್ತಿರಲಿಲ್ಲ. ಅಷ್ಟೊಂದು ಭಕ್ತಿಯಲ್ಲಿ ಅವಳು ಮುಳುಗಿಹೋಗುತ್ತಿದ್ದಳು.

ಹದಿನಾಲ್ಕನೆಯ ವಯಸ್ಸಿನಲ್ಲಿ ಮೀರಾಬಾಯಿಯ ಮದುವೆಯಾಯಿತು. ಚಿತ್ತೂರಿನ ಸೀಸೋದಿಯಾ ಮನೆತನದ ಭೋಜರಾಜನು ಮೀರಾಬಾಯಿಗೆ ಪತಿಯಾದನು. ಮದುವೆಯ ಕಾಲದಲ್ಲಿಯೂ ಅವಳು ಶ್ರೀಕೃಷ್ಣನ ಮೂರ್ತಿ-

ಯನ್ನು ಮರೆತಿರಲಿಲ್ಲ. ಪತಿಯ ಮನೆಗೆ ಹೋಗುವಾಗ, ಆ ಮೂರ್ತಿಯನ್ನು ಜೊತೆಯಲ್ಲಿ ತೆಗೆದುಕೊಂಡು ಹೋದಳು. ಅಲ್ಲಿಯೂ ಅವಳು ತನ್ನ ಪೂಜೆ-ಭಜನೆಗಳನ್ನು ಬಿಡಲಿಲ್ಲ. ಅತ್ತೆ, ನಾದಿನಿ, ಮೈದುನ ಇವರಿಗೆಲ್ಲ ಮೀರಾ-ಬಾಯಿಯ ಈ ನಡತೆಯು ಸರಿಯೆನಿಸಲಿಲ್ಲ. ಆದರೆ ಅವಳ ಪತಿಯು ಮಾತ್ರ ಅವಳ ಪೂಜೆಗೆ ವಿರೋಧವನ್ನೇನೂ ಮಾಡಲಿಲ್ಲ. ಇಷ್ಟೇ ಅಲ್ಲ; ಶ್ರೀಕೃಷ್ಣನ ಮೂರ್ತಿಗಾಗಿ ಅವನು ಒಂದು ಸುಂದರವಾದ ಮಂದಿರವನ್ನು ಕಟ್ಟಿಸಿದನು; ಅದರಲ್ಲಿ ಮೂರ್ತಿಯನ್ನು ಸ್ಥಾಪನೆ ಮಾಡಿ ಮೀರಾಬಾಯಿಯ ಪೂಜೆ-ಭಜನೆಗಳು ಅಲ್ಲಿಯೆ ನಡೆಯುವಂತೆ ವ್ಯವಸ್ಥೆ ಮಾಡಿದನು.

ಶ್ರೀಕೃಷ್ಣನ ಪೂಜೆ-ಭಜನೆಗಳಲ್ಲಿ ಮೀರಾಬಾಯಿ ಉಳಿದುದನ್ನೆಲ್ಲ ಮರೆತುಬಿಟ್ಟಳು. ಸಂಸಾರದ ಕಡೆಗೆ ಅವಳ ಲಕ್ಷ್ಯವೇ ಇರಲಿಲ್ಲ. ಅತ್ತೆಯ ಮನೆಯ ಸೊಸೆ ಹೀಗೆ ನಡೆದುಕೊಳ್ಳುತ್ತಿರುವುದು ಯಾರ ಮನಸ್ಸಿಗೂ ಬರಲಿಲ್ಲ. ಮನೆಯವರು ಅನೇಕ ರೀತಿಯಿಂದ ವಿರೋಧವನ್ನು ತೋರಿಸಿದರು. ಆದರೇನು? ಶ್ರೀಕೃಷ್ಣನ ಭಕ್ತಿಯ ಹೊರತು ಮೀರಾ, ಮಿಕ್ಕ ಯಾವ ಕಡೆಗೂ ಮನಸ್ಸನ್ನು ಹರಿಸಲಿಲ್ಲ. ಭೋಜರಾಜನು ಆಕೆಯ ಈ ಭಕ್ತಿಭಾವಕ್ಕೆ ಯಾವ ಬಗೆಯಿಂದಲೂ ತಡೆಯೊಡ್ಡಲಿಲ್ಲ. ಎರಡನೆಯ ಲಗ್ನವನ್ನು ಮಾಡಿ-ಕೊಂಡು ಸಂಸಾರ ಸಾಗಿಸಿದನು. ಮೀರಾಬಾಯಿಯ ಭಕ್ತಿಯ ಸುದ್ದಿ ಸುತ್ತಲೂ ಹರಡಿತು. ಅವಳನ್ನು ಕಾಣಲು ಅನೇಕ ಜನ ಸಾಧು-ಸಂತರು ಚಿತ್ತೂರಿಗೆ ಬರತೊಡಗಿದರು. ಆಗ ದಿಲ್ಲಿಯಲ್ಲಿ ಅಕಬರ ಬಾದಶಹನು ಆಳುತ್ತಿದ್ದನು. ಅವನು ಮೀರಾಬಾಯಿಯ ಮಧುರಗಾಯನದ ಕೀರ್ತಿಯನ್ನು ಕೇಳಿದನು; ತನ್ನ ಅರಮನೆಯ ಸಂಗೀತಗಾರನಾದ ತಾನಸೇನನನ್ನು ಜೊತೆಗೆ ಕರೆದುಕೊಂಡು ಅವನು ಚಿತ್ತೂರಿಗೆ ಬಂದನಂತೆ. ವೇಷ ಬದಲಿಸಿಕೊಂಡು, ಶ್ರೀಕೃಷ್ಣನ ಮಂದಿರಕ್ಕೆ ಹೋಗಿ ಕುಳಿತು, ಮೀರಾಬಾಯಿಯ ಭಜನೆಯನ್ನು ಕೇಳಿ, ತುಂಬ ಸಂತೋಷಪಟ್ಟನಂತೆ.

ಮೀರಾಬಾಯಿಯ ಪತಿಯು ಬಹುಕಾಲ ಬಾಳಲಿಲ್ಲ. ಮದುವೆಯಾದ ಹತ್ತು ವರುಷಗಳಲ್ಲಿಯೆ ಅವನು ತೀರಿಹೋದನು. ಇದರಿಂದಂತೂ ಮೀರಾ ಬಾಯಿಯ ದೇವಭಕ್ತಿ ಇನ್ನಿಷ್ಟು ಹೆಚ್ಚಾಯಿತು. ಹಗಲಿರುಳೂ ಶ್ರೀಕೃಷ್ಣನ ಮಂದಿರದಲ್ಲಿಯೆ ಇರತೊಡಗಿದಳು. ಯಾವಾಗಲೂ ಸಾಧು-ಸಂತರ ಗುಂಪು ಅಲ್ಲಿ ನೆರೆದಿರುವುದು. ಭೋಜರಾಜನ ತರುವಾಯ ಅಧಿಕಾರಕ್ಕೆ ಬಂದ ಆತನ ತಮ್ಮ ವಿಕ್ರಮನಿಗೆ ಇದು ಸರಿಬರಲಿಲ್ಲ. ಅತ್ತಿಗೆಯನ್ನು ಸಂಶಯದೃಷ್ಟಿಯಿಂದ ನೋಡಿ, ಅವಳನ್ನು ಪರಿಪರಿಯಿಂದ ಕಾಡತೊಡಗಿದನು. ಮನೆಯವರೆಲ್ಲರೂ ಅವನ ಮಾತನ್ನೇ ಎತ್ತಿಹಿಡಿದರು. ಮೀರಾಬಾಯಿಗೆ ವಿಷಕುಡಿಸಿದರಂತೆ;

ಕೃಷ್ಣಸರ್ಪದಿಂದ ಕಚ್ಚಿಸಲು ಪ್ರಯತ್ನಿಸಿದರಂತೆ; ಕತ್ತಿಯಿಂದ ಇರಿದು ಕೊಲ್ಲ-ಲಿಕ್ಕೆ ಹವಣಿಸಿದರಂತೆ. ಆದರೆ ಯಾವುದೂ ಆಕೆಯನ್ನು ಬಾಧಿಸಲಿಲ್ಲ.

ಕೊನೆಗೆ ಮೀರಾಬಾಯಿಯೇ ಬೇಸತ್ತು ಯಮುನಾನದಿಯ ದಂಡೆಯ ಮೇಲಿರುವ ವೃಂದಾವನಕ್ಕೆ ಹೊರಟಳು. ಅನೇಕ ಜನ ಭಕ್ತರು ಅವಳ ಕೂಡ ಯಾತ್ರೆಗೆ ಹೊರಟರು. ಮೈದುನ ವಿಕ್ರಮನು, ಒಂದು ಪೀಡೆ ಹೊರಟು ಹೋಯಿತೆಂದು ಸಮಾಧಾನಪಟ್ಟನು. ಪಾಪ ಮೀರಾಬಾಯಿಯ ಭಕ್ತಿಯ ಯೋಗ್ಯತೆ ಅವನಿಗೆ ಹೇಗೆ ಗೊತ್ತಾಗಬೇಕು?

ಮೀರಾಬಾಯಿ ವೃಂದಾವನಕ್ಕೆ ಹೋಗಿ, ಅಲ್ಲಿ ಗುರುಗಳೊಬ್ಬರಿಂದ ಉಪದೇಶ ಪಡೆದಳು. ಯಮುನೆಯ ದಂಡೆಯಲ್ಲಿದ್ದುಕೊಂಡು, ಅವಳು ನಿತ್ಯವೂ ಜಪ-ತಪಗಳನ್ನು ಮಾಡುವಳು; ಭಜನೆ-ಕೀರ್ತನೆಗಳಿಂದ ಶ್ರೀಕೃಷ್ಣ-ನನ್ನು ಸೇವಿಸುವಳು. ಬೇರೆಬೇರೆ ಭಕ್ತಿಗೀತಗಳನ್ನು ರಚಿಸಿ ಮಧುರ ಕಂಠದಿಂದ ಹಾಡಿಹಾಡಿ ಕುಣಿಯುವಳು. ವೃಂದಾವನದಲ್ಲಿ ಭಕ್ತರು ಗುಂಪು-ಗುಂಪಾಗಿ ಬರತೊಡಗಿದರು. ಮೀರಾಬಾಯಿಯ ಭಜನೆ-ಕೀರ್ತನಗಳಲ್ಲಿ ಅವರೆಲ್ಲರೂ ಭಾಗವಹಿಸುತ್ತಿದ್ದರು.

ವೃಂದಾವನದಲ್ಲಿ ಕೆಲವು ಕಾಲವನ್ನು ಕಳೆದು ಮೀರಾಬಾಯಿ, ಶ್ರೀಕೃಷ್ಣನ ಮಹಾಕ್ಷೇತ್ರವಾದ ದ್ವಾರಕೆಗೆ ಬಂದಳು. ಅಲ್ಲಿ ಶ್ರೀಕೃಷ್ಣನ ಸೇವೆಯಲ್ಲಿಯೆ ತನ್ನ ಆಯುಷ್ಯವನ್ನು ಕಳೆಯಲಾರಂಭಿಸಿದಳು. ಮೀರಾಬಾಯಿಯ ನಿಜವಾದ ಯೋಗ್ಯತೆ ವಿಕ್ರಮನಿಗೆ ಗೊತ್ತಾಗಲು, ಅವನು ದ್ವಾರಕೆಗೆ ಹೋಗಿ, ತನ್ನ ಅಪರಾಧವನ್ನು ಒಪ್ಪಿಕೊಂಡು ಕ್ಷಮೆಬೇಡಿದನು. ಅವಳು ಚಿತ್ತೂರಿಗೆ ಮರಳಿ ಬರುವಂತೆ ಬಿನ್ನವಿಸಿದನು. ಆದರೆ ಮೀರಾಬಾಯಿ ಅದಕ್ಕೆ ಸಮ್ಮತಿಸಲಿಲ್ಲ. ಕೊನೆಯ ವರೆಗೂ ದ್ವಾರಕೆಯಲ್ಲಿಯೆ ಇದ್ದು, ಹಾಡುತ್ತ-ಕುಣಿಯುತ್ತ ಶ್ರೀಕೃಷ್ಣನ ಸೇವೆ ಮಾಡಿದಳು. ಒಂದು ದಿನ ಅವಳು ದೇವರೆದುರು ಭಕ್ತಿಯಿಂದ ಹಾಡಿ ಕುಣಿಯುತ್ತಿರುವಾಗ, ಅವಳ ದೇಹದಿಂದ ಒಂದು ಬೆಳಕು ಹೊರಬಿದ್ದು, ಶ್ರೀಕೃಷ್ಣನ ಮೂರ್ತಿಯಲ್ಲಿ ಸೇರಿಹೋಯಿತಂತೆ. ಆಗಲೆ ಅವಳ ದೇಹದ ಅಂತವಾಯಿತು.

ಭಾರತದಲ್ಲಿಯ ದೇವಭಕ್ತರಲ್ಲಿ ಮೀರಾಬಾಯಿಯ ಮಹಿಮೆ ದೊಡ್ಡದು. ಉತ್ತರಭಾರತದಲ್ಲಿ ಮೀರಾಬಾಯಿಯ ಭಕ್ತಿಗೀತಗಳು ಎಲ್ಲರಿಗೂ ಮೆಚ್ಚಿಗೆಯವಾಗಿವೆ.

**ಅಭ್ಯಸನಗಳು**

೧. ಮೀರಾಬಾಯಿಯು ಯಾವ ನಾಡಿನಲ್ಲಿ ಹುಟ್ಟಿದಳು?

೨. ಚಿಕ್ಕಂದಿನಲ್ಲಿ ಇವಳಿಗೆ ಶ್ರೀಕೃಷ್ಣನ ಮೂರ್ತಿಯು ಹೇಗೆ ಸಿಕ್ಕಿತು?

೩. ಇವಳ ಮದುವೆಯು ಯಾರ ಸಂಗಡ ಆಯಿತು?
೪. ಇವಳ ಗಂಡನು ಸಾಯಲು, ಮೈದುನನಾದ ವಿಕ್ರಮನು ಇವಳಿಗೆ ಯಾವ ರೀತಿಯಿಂದ ಪೀಡಿಸಿದನು?
೫. ಮೀರಾಬಾಯಿಯು ಚಿತ್ತೂರನ್ನು ಬಿಟ್ಟು ವೃಂದಾವನಕ್ಕೆ ಏಕೆ ಹೋದಳು?
೬. ಮೀರಾಬಾಯಿಯು ತನ್ನ ಕೊನೆಯ ದಿನಗಳನ್ನು ಎಲ್ಲಿ ಕಳೆದಳು?
೭. ಮೀರಾಬಾಯಿಯ ಕಥೆಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೨೪. ರಾಣಾ ಪ್ರತಾಪಸಿಂಹ

ರಾಜಸ್ಥಾನದಲ್ಲಿ ಚಿತ್ತೂರು ಎಂಬುದೊಂದು ಇತಿಹಾಸಪ್ರಸಿದ್ಧ ಪಟ್ಟಣವಿದೆ. ಅಲ್ಲಿ ಸುಮಾರು ೪೦೦ ವರುಷಗಳ ಹಿಂದೆ ಉದಯಸಿಂಹನೆಂಬ ರಜಪೂತ ಅರಸನು ಆಳುತ್ತಿದ್ದನು. ಆತನು ಬಹಳ ಶೂರನೂ ಸ್ವಾತಂತ್ರ್ಯಪ್ರಿಯನೂ ಆಗಿದ್ದನು. ಅವನಿಗೆ ಇಬ್ಬರು ಗಂಡುಮಕ್ಕಳಿದ್ದರು. ಹಿರಿಯವನ ಹೆಸರು ಪ್ರತಾಪಸಿಂಹ; ಕಿರಿಯವನ ಹೆಸರು ಶಕ್ತಿಸಿಂಹ. ಇಬ್ಬರೂ ಚುರುಕುಬುದ್ಧಿಯವರೂ ಅಭಿಮಾನಿಗಳೂ ಆಗಿದ್ದರು. ಪ್ರತಾಪಸಿಂಹನು ದಯಾಳುವೂ ವೀರನೂ ಆಜ್ಞಾಧಾರಕನೂ ಆಗಿದ್ದನು. ಆದರೆ ಶಕ್ತಿಸಿಂಹನು ಚಪಲನೂ ಸಿಟ್ಟಿನವನೂ ಹಟಮಾರಿಯೂ ಆಗಿದ್ದನು. ಪ್ರತಿಯೊಂದರಲ್ಲಿ ತನ್ನದೇ ಮೇಲು ಎಂದು ಅವನು ಹಟ ಹಿಡಿಯುತ್ತಿದ್ದನು. ಇಬ್ಬರೂ ಪ್ರಾಯಕ್ಕೆ ಬರುವುದರೊಳಗೆ ಶಕ್ತಿಸಿಂಹನು ಜಗಳವಾಡಿ, ಮನೆಬಿಟ್ಟುಹೋಗಿ ಅಕಬರನ ದಂಡಿನಲ್ಲಿ ಸೇರಿಕೊಂಡಿದ್ದನು.

ಆಗ ದಿಲ್ಲಿಯಲ್ಲಿ ಅಕಬರಬಾದಶಹನು ಆಳುತ್ತಿದ್ದನು. ಅವನು ಎಷ್ಟೋ ರಜಪೂತ ಅರಸರೊಡನೆ ಬೀಗತನ ಮಾಡಿದ್ದನು. ಅವರೆಲ್ಲರನ್ನೂ ತನ್ನ ಮಾಂಡಲಿಕರನ್ನಾಗಿಯೂ ಮಾಡಿಕೊಂಡನು. ಉದಯಸಿಂಹನು ಮಾತ್ರ ಅಕಬರನ ಅಧಿಕಾರಕ್ಕೆ ಒಳಗಾಗಿರಲಿಲ್ಲ. ಅಕಬರನು ಇವನನ್ನೂ ತನ್ನ ಅಂಕಿತದಲ್ಲಿ ತರಬೇಕೆಂದು ಪ್ರಯತ್ನಿಸಿದನು. ಇವನ ಮೇಲೆ ದಂಡು ಕೊಟ್ಟು ಕಳುಹಿದನು. ಇಬ್ಬಣಗಳ ನಡುವೆ ಕಾಳಗವಾಯಿತು. ಅಕಬರನ ದಂಡಿನವರು ಚಿತ್ತೂರನ್ನು ಗೆದ್ದರು. ಆದರೂ ಉದಯಸಿಂಹನು ಅಕಬರನಿಗೆ ಒಳಗಾಗಲಿಲ್ಲ. ಆರವಲಿ ಬೆಟ್ಟದ ಅಡಿಯಲ್ಲಿ, ಉದಯಪುರವೆಂಬ ಹೊಸ ರಾಜಧಾನಿಯನ್ನು ಕಟ್ಟಿಸಿ ಅಲ್ಲಿಯೇ ಆಳಹತ್ತಿದನು. ಅಲ್ಲಿಯೂ ಮೊಗಲರು ಉಪದ್ರವವನ್ನು ಕೊಡುತ್ತಲೇ ಇದ್ದರು. ಇಷ್ಟಾದರೂ ಉದಯಸಿಂಹನು ಅವರಿಗೆ ಮಣಿಯದೆ ಬಾಳಿ ಮರಣಹೊಂದಿದನು.

ಉದಯಸಿಂಹನ ತರುವಾಯ ಪ್ರತಾಪಸಿಂಹನು ಪಟ್ಟಕ್ಕೆ ಬಂದನು. ಈತನು ಮಹಾ ಪ್ರತಾಪಿಯೂ ಸ್ವಾತಂತ್ರ್ಯಪ್ರಿಯನೂ ಆಗಿದ್ದನು. ಇದು ಅಕಬರನಿಗೆ ಹೇಗೆ ರುಚಿಸಬೇಕು? ಅವನು ಪ್ರತಾಪಸಿಂಹನಿಗೆ "ನನಗೆ ಶರಣುಬಂದು ನನ್ನ ಮಾಂಡಲಿಕನಾಗಿ ಇರಬೇಕು" ಎಂದು ರಾಜಾ ಮಾನಸಿಂಗ ಎಂಬವನೊಡನೆ ಹೇಳಿ ಕಳುಹಿದನು. ಮಾನಸಿಂಗನು ಉದಯಪುರಕ್ಕೆ ಹೋದನು. ಅವನನ್ನು ಪ್ರತಾಪಸಿಂಹನು ಆದರದಿಂದ ಬರಮಾಡಿಕೊಂಡನು. ಅವನು ಅಕಬರನು ಹೇಳಿದ ಮಾತುಗಳನ್ನು ಪ್ರತಾಪಸಿಂಹನಿಗೆ ತಿಳುಹಿದನು. ಅದನ್ನು ಕೇಳಿ ಪ್ರತಾಪನಿಗೆ ಬಹಳ ಸಿಟ್ಟು ಬಂತು. ಅವನು ಮಾನಸಿಂಗನನ್ನು ಅವಮಾನಗೊಳಿಸಿ ತಿರುಗಿ ಕಳುಹಿದನು. ಇದರಿಂದ ಅಕಬರನು ಕಿಡಿಕಿಡಿಯಾದನು. ಪ್ರತಾಪನೊಡನೆ ಯುದ್ಧ ಮಾಡಲು ದೊಡ್ಡ ದಂಡು ಕೊಟ್ಟು ತನ್ನ ಮಗ ಸೆಲೀಮನನ್ನು ಕಳುಹಿದನು. ಆ ಸೈನ್ಯದಲ್ಲಿ ಮಾನಸಿಂಗನೂ ಶಕ್ತಿಸಿಂಹನೂ ಇದ್ದರು. ಮೊಗಲರ ದಂಡು ಹಳದೀಘಟ್ಟದ ಬಳಿಯಲ್ಲಿ ಬೀಡುಬಿಟ್ಟಿತು. ಪ್ರತಾಪನ ಸೈನ್ಯವು ಚಿಕ್ಕದು. ಆದರೂ ಶೂರರಾದ ರಜಪೂತರು ಜೀವದ ಹಂಗುದೊರೆದು ಮೊಗಲರ ದಂಡಿನ ಮೇಲೆ ಬಿದ್ದರು.


ರಾಣಾ ಪ್ರತಾಪಸಿಂಹ

ಭಯಂಕರವಾದ ಯುದ್ಧವಾಯಿತು. ರಜಪೂತರ ೨೨ ಸಾವಿರ ಸೈನಿಕರಲ್ಲಿ ೮ ಸಾವಿರ ಸೈನಿಕರು ಸತ್ತರು. ಮೊಗಲರ ದಂಡೂ ಅರ್ಧಕ್ಕರ್ಧ ಹಾಳಾಗಿ ಹೋಯಿತು. ಆದರೂ ಸೆಲೀಮನಿಗೆ ವಿಜಯವಾಯಿತು. ಪ್ರತಾಪಸಿಂಹನು ಸೋತು ಅಡವಿಯನ್ನು ಸೇರಿದನು. ಮೇವಾಡರಾಜ್ಯವು ಅಕಬರನ ವಶವಾಯಿತು. ಆದರೆ ರಜಪೂತರ ಶೌರ್ಯ-ಸಾಹಸಗಳನ್ನೂ ತನ್ನ ಅಣ್ಣನಿಗೆ ಒದಗಿದ ಸಂಕಟವನ್ನೂ ಕಂಡು ಶಕ್ತಿಸಿಂಹನ ಮನಸ್ಸು ಕರಗಿತು. ಅವನು ಪ್ರತಾಪಸಿಂಹನಿಗೆ ಶರಣುಹೋಗಿ ಕ್ಷಮೆ ಬೇಡಿದನು.

ರಾಜ್ಯವನ್ನು ಕಳೆದುಕೊಂಡು ಪ್ರತಾಪಸಿಂಹನು, ಹೆಂಡತಿ-ಮಕ್ಕಳೊಡನೆ ಅರವಲಿ ಬೆಟ್ಟಗಳಲ್ಲಿ ಅಲೆದಾಡತೊಡಗಿದನು. ಆಗ ಅವನಿಗೆ ಆದ ಕಷ್ಟ-

ಗಳಿಗೆ ಎಣೆಯೇ ಇರಲಿಲ್ಲ. ಕಾಡಿನಲ್ಲಿ ಒಂದು ದಿನ, ಮಕ್ಕಳೆಲ್ಲ ಬಹಳ ಹಸಿದಿದ್ದುವು. ಪ್ರಯತ್ನಪಟ್ಟು ಸ್ವಲ್ಪ ಹಿಟ್ಟನ್ನು ದೊರಕಿಸಿ ಆ ಮಕ್ಕಳ ತಾಯಿ ರೊಟ್ಟಿಮಾಡಿದ್ದಳು. ಬಳಿಕ ನೀರು ತರಲು ಅವಳು ಹೊರಗೆ ಹೋಗಿದ್ದಳು. ರಾಣಾನು ವಿಚಾರಮಾಡುತ್ತ ಅಲ್ಲಿಯೇ ಕುಳಿತಿದ್ದನು. ಆಗ ಒಂದು ಕಾಡು ಬೆಕ್ಕು ಬಂದು, ಅವನಿಗೆ ತಿಳಿಯದಂತೆ ರೊಟ್ಟಿಯನ್ನು ಕಚ್ಚಿಕೊಂಡು ಓಡಿಹೋಯಿತು. ರಾಣಾನ ಹೆಂಡತಿಯು ಒಳಗೆ ಬಂದು ನೋಡಿದಳು. ಬುಟ್ಟಿಯಲ್ಲಿ ರೊಟ್ಟಿ ಇರಲಿಲ್ಲ. ಮಕ್ಕಳು ಹಸಿವಿನಿಂದ ಅಳುತ್ತಿದ್ದುವು. ಬೇರೆ ರೊಟ್ಟಿಯನ್ನು ಮಾಡಲು ಹಿಟ್ಟು ಇರಲಿಲ್ಲ. ಈ ಸಂಕಟವನ್ನು ನೋಡಿ




ರಾಣಾ ಪ್ರತಾಪಸಿಂಹನು ವಿಚಾರಮಾಡುತ್ತ ಕುಳಿತಿರುವನು

ಪ್ರತಾಪಸಿಂಹನು ಅತ್ತುಬಿಟ್ಟನು. 'ನಿನಗೆ ಶರಣುಬರುವೆನು' ಎಂದು ಅಕಬರನಿಗೆ ಆಗಲೇ ಪತ್ರಬರೆಯಬೇಕೆಂದು ಅವನು ಕಾಗದ ತೆಗೆದುಕೊಂಡನು. ಮರುಕ್ಷಣದಲ್ಲಿಯೆ ಅವನ ಮನಸ್ಸಿಗೆ ಬೇಡವೆನಿಸಿತು. ಶರಣಾಗತನಾಗಿ ತನ್ನ ಕುಲವನ್ನು ಕೆಡಿಸಿಕೊಳ್ಳುವುದು ಅವನಿಗೆ ಸೇರಲಿಲ್ಲ.

ಒಮ್ಮೆ ಹೀಗೆಯೇ ವಿಚಾರಮಾಡುತ್ತ ಕುಳಿತಾಗ, ಅಕಬರಬಾದಶಹನಿಂದ ಒಬ್ಬ ದೂತನು ಪತ್ರ ತೆಗೆದುಕೊಂಡು ಬಂದು ಪ್ರತಾಪನಿಗೆ ಕೊಟ್ಟನು. ಅವನು ಅದನ್ನು ಓದಿ ನೋಡಿದನು. ಅದರಲ್ಲಿ ಅಕಬರನು "ನೀನು ನನಗೆ ಶರಣುಬಂದರೆ ನಿನ್ನ ರಾಜ್ಯವನ್ನು ನಿನಗೆ ಮರಳಿಕೊಡುವೆನು" ಎಂದು ಬರೆದಿದ್ದನು. ಇದನ್ನು ಕಂಡು ಅವನಿಗೆ ಬಹಳ ಕೋಪಬಂದಿತು. 'ವೀರನಾದ ರಜಪೂತನು ಎಂದಾದರೂ ಹೇಡಿಯಂತೆ ಶರಣುಹೋಗಬಹುದೇ! ಕಷ್ಟಗಳಿಗೆ

ಹೆದರುವವನು ಶೂರನೇ!' ಎಂದುಕೊಂಡನು. ಅಕಬರನಿಗೆ 'ನನ್ನ ಮೈಯಲ್ಲಿ ಒಂದು ಹನಿ ರಕ್ತವಿರುವ ವರೆಗೆ ನಾನು ನಿನಗೆ ಶರಣುಬರಲಿಕ್ಕಿಲ್ಲ' ಎಂದು ಉತ್ತರ ಬರೆದನು. 'ಚಿತ್ತೂರನ್ನು ಮರಳಿ ತಕ್ಕೊಳ್ಳುವ ವರೆಗೆ ಬೆಳ್ಳಿ, ಬಂಗಾರದ ತಟ್ಟೆಗಳಲ್ಲಿ ಉಣ್ಣಲಿಕ್ಕಿಲ್ಲ; ಒಳ್ಳೆಯ ಹಾಸುಗೆಯ ಮೇಲೆ ಮಲಗಲಿಕ್ಕಿಲ್ಲ' ಎಂದು ಪ್ರತಾಪನು ಪ್ರತಿಜ್ಞೆಯನ್ನು ಮಾಡಿದನು.

ಹೀಗೆ ಕಷ್ಟಗಳನ್ನು ಅನುಭವಿಸುತ್ತ ಗುಡ್ಡಗಾಡಿನಲ್ಲಿ ವಾಸಿಸುತ್ತಿರುವಾಗ, ಭಾಮಾಸಾ ಎಂಬ ಆತನ ಹಿಂದಿನ ಮಂತ್ರಿಯು ಹೇರಳವಾಗಿ ಹಣ ಸಂಪಾದಿಸಿ ತಂದುಕೊಟ್ಟನು. ಆ ಹಣದಿಂದ ಪ್ರತಾಪಸಿಂಹನು ಮತ್ತೆ ಹೊಸ ದಂಡನ್ನು ಕೂಡಿಸಿದನು. ಸುತ್ತುಮುತ್ತಲೂ ಇರುವ ಗುಡ್ಡಗಾಡಿನ ಊರುಗಳ ರೈತರನ್ನು ಹುರಿದುಂಬಿಸಿದನು. ಮೊಗಲರಿಗೆ ತೆರಿಗೆ ಕೊಡದಂತೆ ಮಾಡಿದನು. ಅವರಿಗೆಲ್ಲ ತಮ್ಮ ರಾಜ್ಯವನ್ನು ಸ್ವತಂತ್ರಗೊಳಿಸೋಣವೆಂದು ಹೇಳಿ ಅವರ ಪ್ರೀತಿಯನ್ನು ಸಂಪಾದಿಸಿದನು. ಬಳಿಕ ಅಕಬರನ ವಿರುದ್ಧ ಹೋರಾಟ ಪ್ರಾರಂಭಿಸಿದನು. ಮೇವಾಡದ ಒಂದೊಂದೇ ಪ್ರದೇಶಗಳನ್ನು ಗೆಲ್ಲುತ್ತ ಉದಯಪುರವನ್ನು ಮರಳಿ ಗೆದ್ದನು. ಚಿತ್ತೂರು ಮಾತ್ರ ಅವನಿಗೆ ತಿರುಗಿ ವಶವಾಗಲಿಲ್ಲ. "ನನ್ನ ಚಿತ್ತೂರು! ನನ್ನ ಚಿತ್ತೂರು!!" ಎಂದು ಅದೇ ಧ್ಯಾನದಲ್ಲಿಯೇ ರಾಣಾನು ಪ್ರಾಣಬಿಟ್ಟನು. ಅವನ ಮರಣದ ಸುದ್ದಿಯನ್ನು ಕೇಳಿ ಅಕಬರನು ಬಹಳ ಮರುಗಿದನು.

ಪ್ರತಾಪಸಿಂಹನು ಬಹಳ ಶೂರನು. ಮೊಗಲರ ಅಸಂಖ್ಯ ದಂಡಿನೊಡನೆ ಹೋರಾಡಿ ತನ್ನ ದೇಶದ ಸ್ವಾತಂತ್ರ್ಯವನ್ನು ಕಾಯ್ದುಕೊಂಡನು. ತನ್ನ ದೇಶದ ಸಲುವಾಗಿ ತುಂಬ ಕಷ್ಟಗಳನ್ನು ಸಹಿಸಿಕೊಂಡನು. ರಾಜ್ಯ ಸುಖಗಳನ್ನು ತ್ಯಾಗಮಾಡಿದನು. ಮರಣ ಸಮೀಪಿಸಿದಾಗ ಅವನು ತನ್ನ ಮಗನನ್ನು ಮೇವಾಡದ ಪಟ್ಟದ ಮೇಲೆ ಕುಳ್ಳಿರಿಸಿ "ಮುಸಲ್ಮಾನರಿಗೆ ಎಂದೂ ಶರಣುಹೋಗಲಿಕ್ಕಿಲ್ಲ" ಎಂದು ಅವನಿಂದ ಆಣೆ ತೆಗೆದುಕೊಂಡನು. ಇಂತಹ ಶ್ರೇಷ್ಠ ದೇಶಾಭಿಮಾನಿ ಹಾಗು ಸ್ವಾತಂತ್ರ್ಯಾಭಿಮಾನಿ ರಾಜನು, ಭಾರತೀಯರಾದ ನಮಗೆ ಎಂದೆಂದಿಗೂ ಪೂಜ್ಯನೇ.

### ಅಭ್ಯಸನಗಳು

೧. ಉದಯಸಿಂಹನು ಚಿತ್ತೂರ ರಾಜ್ಯವನ್ನು ಏಕೆ ಕಳೆದುಕೊಂಡನು?

೨. ಉದಯಸಿಂಹನ ತರುವಾಯ ಪಟ್ಟಕ್ಕೆ ಯಾರು ಬಂದರು?

೩. ಪ್ರತಾಪಸಿಂಹನಿಗೂ, ಅಕಬರನಿಗೂ ಆದ ಯುದ್ಧದ ವರ್ಣನೆಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

೪. ರಾಜ್ಯವನ್ನು ಕಳೆದುಕೊಂಡ ಪ್ರತಾಪನು ಎಂತಹ ಸಂಕಟಗಳನ್ನು ಅನುಭವಿಸ ಬೇಕಾಯಿತು?
೫. ಕೊನೆಗೆ ಅಕಬರ ಬಾದಶಹನು ಪ್ರತಾಪಸಿಂಹನಿಗೆ ಏನೆಂದು ಪತ್ರ ಬರೆದನು?
೬. ಪ್ರತಾಪಸಿಂಹನು ಅದಕ್ಕೆ ಏನೆಂದು ಉತ್ತರ ಬರೆದನು?
೭. ಕೊನೆಗೆ ಪ್ರತಾಪಸಿಂಹನು ಮೇವಾಡರಾಜ್ಯವನ್ನು ಹೇಗೆ ಗೆದ್ದುಕೊಂಡನು?
೮. ಪ್ರತಾಪನ ಮರಣವು ಹೇಗಾಯಿತು?
೯. ಮಕ್ಕಳೇ, ಪ್ರತಾಪಸಿಂಹನಿಂದ ನೀವು ಕಲಿತುಕೊಳ್ಳುವ ಗುಣಗಳಾವುವು?

# ೨೫. ಸಂತ ಏಕನಾಥ

ಗೋದಾವರೀ ನದಿಯ ದಂಡೆಯ ಮೇಲೆ ಪೈಠಣ ಎಂಬ ಊರು ಇದೆ. ಸುಮಾರು ೪೦೦ ವರುಷಗಳ ಹಿಂದೆ, ಅಲ್ಲಿ ಸೂರ್ಯನಾರಾಯಣನೆಂಬ ಒಬ್ಬ ಬ್ರಾಹ್ಮಣನಿದ್ದನು. ಆತನ ಹೆಂಡತಿ ರುಕ್ಮಿಣಿಬಾಯಿ. ಅವರಿಗೆ ಮೂಲಾ ನಕ್ಷತ್ರದಲ್ಲಿ ಒಬ್ಬ ಗಂಡುಮಗನು ಹುಟ್ಟಿದನು. ಏಕನಾಥನೆಂದು ಮಗನಿಗೆ ಹೆಸರಿಟ್ಟರು. ಮಗನು ಹುಟ್ಟಿದ ನಾಲ್ಕಾರು ತಿಂಗಳಲ್ಲಿಯೆ ತಂದೆ ತಾಯಿ ಇಬ್ಬರೂ ತೀರಿಕೊಂಡರು. ಚಿಕ್ಕ ಏಕನಾಥನನ್ನು ಅವನ ಅಜ್ಜನಾದ ಚಕ್ರಪಾಣಿಯು ಜೋಪಾನ ಮಾಡಿದನು.

ಏಕನಾಥನು ಚಿಕ್ಕವನಿರುವಾಗಲೆ ಬಹು ಬುದ್ಧಿವಂತನಾಗಿದ್ದನು. ದೇವರಲ್ಲಿ ಅವನಿಗೆ ಬಲುಭಕ್ತಿ. ಯಾವಾಗಲೂ ದೇವರ ಭಜನೆಯಲ್ಲಿ ಕಾಲ ಕಳೆಯುವನು. ಅಜ್ಜನು ಅವನಿಗೆ ಓದು-ಬರೆಹಗಳನ್ನು ಚೆನ್ನಾಗಿ ಕಲಿಸಿದನು. ಮನೆಗೆಲಸಗಳನ್ನು ಮುಗಿಸಿದ ಮೇಲೆ, ನಿತ್ಯವೂ ಸಾಯಂಕಾಲ ಅಜ್ಜ ಪುರಾಣ-ಪುಣ್ಯಕತೆಗಳನ್ನು ಹೇಳುವನು; ಬಾಲಕ ಏಕನಾಥನು ಅವುಗಳನ್ನು ಭಕ್ತಿ-ವಿಶ್ವಾಸಗಳಿಂದ ಕೇಳುವನು. ೧೨ ವರುಷದವನಾಗುವುದರೊಳಗಾಗಿ ಏಕನಾಥನು ರಾಮಾಯಣ, ಮಹಾಭಾರತ ಹಾಗೂ ಎಷ್ಟೋ ಪುರಾಣಗಳಲ್ಲಿಯ ಕಥೆಗಳನ್ನು ಸರಾಗವಾಗಿ ಹೇಳುತ್ತಿದ್ದನು.

ಹಿಂದಿನ ಕಾಲದಲ್ಲಿ ಅನೇಕ ಜನರು ದೇವರನ್ನು ಕಾಣಬೇಕೆಂದು ಯತ್ನಿಸುತ್ತಿದ್ದರು. ಏಕನಾಥನಿಗೂ ದೇವರನ್ನು ಕಾಣಬೇಕೆಂದು ಹಂಬಲ. ದೇವರ ಬಳಿಗೆ ಹೋಗಲು ದಾರಿಯನ್ನು ತೋರಿಸಲಿಕ್ಕೆ ಒಳ್ಳೆಯ ಗುರುಗಳು ಬೇಕೆಂದು ಹೇಳುವರು. ಏಕನಾಥನೂ ಅಂತಹ ಸದ್ಗುರುವನ್ನು ಹುಡುಕಬೇಕೆಂದು ಯೋಚಿಸಿದನು. ಆ ಕಾಲದಲ್ಲಿ ದೇವಗಡದಲ್ಲಿ ಜನಾರ್ದನಪಂತರೆಂಬ ಶ್ರೇಷ್ಠ

ತಪಸ್ವಿಗಳಿದ್ದರು. ಅವರ ಹೆಸರನ್ನು ಕೇಳಿ ಏಕನಾಥನು, ಮನೆಯಲ್ಲಿ ಯಾರಿಗೂ ಹೇಳದೆ ದೇವಗಡಕ್ಕೆ ಹೋದನು. ಅಲ್ಲಿ ಆ ತಪಸ್ವಿಗಳ ಬಳಿ ಸೇವೆ ಮಾಡುತ್ತ ನಿಂತನು.

ಜನಾರ್ದನಪಂತರು ಏಕನಾಥನನ್ನು ಬಹಳ ಪ್ರೀತಿಸುತ್ತಿದ್ದರು. ಅವನ ಸೇವಾಬುದ್ಧಿ-ದೇವಭಕ್ತಿಗಳನ್ನು ಕಂಡು ಅವರು ಹಿರಿಹಿರಿ ಹಿಗ್ಗಿದರು. ಗುರುಗಳ ಸೇವೆ ಮಾಡುವುದು, ಪೂಜೆಗೆ ಸಾಮಾನುಗಳನ್ನು ಒದಗಿಸಿಕೊಡುವುದು, ಅವರ ಬಟ್ಟೆ-ಬರೆಗಳನ್ನು ಮಡಿಮಾಡಿ ತರುವುದು—ಇವೆಲ್ಲ ಕೆಲಸಗಳನ್ನು ಏಕನಾಥನು ಮಾಡುತ್ತಿದ್ದನು.

ಕೆಲವು ದಿನಗಳಾದ ಬಳಿಕ ಗುರುಗಳು, ಏಕನಾಥನ ಪ್ರಾಮಾಣಿಕತನ ಹಾಗು ಚುರುಕುಬುದ್ಧಿಗಳನ್ನು ಕಂಡು, ಅವನಿಗೆ ತಮ್ಮ ಮಠದ ಲೆಕ್ಕ-ಪತ್ರ



ಏಕನಾಥನು ಗಂಗಾಜಲವನ್ನು ಕತ್ತೆಗೆ ಕುಡಿಸಿದನು

ಗಳನ್ನು ಬರೆಯಲು ಹಚ್ಚಿದರು. ಒಂದು ದಿನ, ಅವನು ಬರೆದ ಲೆಕ್ಕದಲ್ಲಿ ಒಂದು ಪೈ ಹೆಚ್ಚುಕಡಿಮೆಯಾಗಿ ಲೆಕ್ಕವು ಹೊಂದದಂತೆ ಆಯಿತು. ಆಗ ಅವನು ಊಟ-ನಿದ್ದೆಗಳ ಪರಿವೆಯಿಲ್ಲದೆ ನಡುರಾತ್ರಿಯ ವರೆಗೆ ಕುಳಿತು ಲೆಕ್ಕವನ್ನು ನೋಡತೊಡಗಿದನು. ಕೊನೆಗೆ ಲೆಕ್ಕದಲ್ಲಾದ ತಪ್ಪು ಸಿಕ್ಕಿತು. ಆಗ ಏಕನಾಥನಿಗೆ ಅತ್ಯಂತ ಆನಂದವಾಯಿತು. ಅವನು ಚಪ್ಪಾಳೆ ಬಡಿದು ನಗಹತ್ತಿದನು. ಗುರುಗಳು ಎಚ್ಚತ್ತು ಕಿಡಕಿಯಲ್ಲಿ ನೋಡಿ "ಯಾಕೆ

ಏಕನಾಥ, ಇಂದು ಇಷ್ಟೊಂದು ಆನಂದ?" ಎಂದು ಕೇಳಿದರು. ಅದಕ್ಕೆ ಅವನು ಎಲ್ಲ ಸಂಗತಿಯನ್ನೂ ಹೇಳಿದನು. ಆಗ ಗುರುಗಳು "ಇಷ್ಟು ಏಕಾಗ್ರತೆ ಹಾಗು ಕುತೂಹಲಗಳಿಂದ ದೇವರನ್ನು ಹುಡುಕಿದರೆ, ನಿನಗೆ ದೇವರು ಸಿಕ್ಕೇ ಸಿಗುವನು" ಎಂದು ಹೇಳಿದರು. ಏಕನಾಥನು ಇದು ಗುರುಗಳ ಆಶೀರ್ವಾದ-ವೆಂದು ತಿಳಿದನು; ಅವರ ಪಾದಗಳಿಗೆ ನಮಸ್ಕಾರ ಮಾಡಿದನು. ಮುಂದೆ ಕೆಲವು ದಿವಸಗಳಾದ ಮೇಲೆ, ಅವನಿಗೆ ಶ್ರೀಗುರುದತ್ತಾತ್ರೇಯನ ಸಾಕ್ಷಾ-ತ್ಕಾರವಾಯಿತು. ಬಳಿಕ ಏಕನಾಥನು ತೀರ್ಥಯಾತ್ರೆಗಾಗಿ ಹೊರಟನು.

ಏಕನಾಥನ ಮನೆಯವರು ಅವನನ್ನು ಹುಡುಕುತ್ತಲೇ ಇದ್ದರು. ಕೊನೆಗೆ ಅವನ ಶೋಧವಾಯಿತು. ಅವನ ಅಜ್ಜನಾದ ಚಕ್ರಪಾಣಿಯು ದೇವಗಡಕ್ಕೆ ಹೋದನು. ಜನಾರ್ದನಪಂತರಿಗೆ ಭೆಟ್ಟಿಯಾಗಿ ಎಲ್ಲ ಸಂಗತಿಯನ್ನೂ ತಿಳುಹಿದನು. ತೀರ್ಥಯಾತ್ರೆಯು ಮುಗಿದ ಬಳಿಕ ಏಕನಾಥನನ್ನು ಪೈಠಣಕ್ಕೆ ಕಳುಹಲು ಹೇಳಿ ತಿರುಗಿಬಂದನು. ಅಷ್ಟು ಹೊತ್ತಿಗೆ ಏಕನಾಥನು ಯಾತ್ರೆ ಮುಗಿಸಿಕೊಂಡು ದೇವಗಡಕ್ಕೆ ಬಂದನು. ಗುರುಗಳು ಅವನಿಗೆ 'ಪೈಠಣದಲ್ಲಿ ಇದ್ದುಕೊಂಡು ಲಗ್ನವಾಗಿ ಸಂಸಾರಮಾಡು' ಎಂದು ಹೇಳಿಕಳುಹಿದರು. ಅದರಂತೆ ಅವನು ಗಿರಿಜಾಬಾಯಿ ಎಂಬ ಸುಶೀಲ ಕನ್ಯೆಯೊಡನೆ ಲಗ್ನಮಾಡಿ-ಕೊಂಡು ಸಂಸಾರ ಸಾಗಿಸಿದನು.

ಪೈಠಣದಲ್ಲಿ ಇರುವಾಗ ಏಕನಾಥನು ನಿತ್ಯವೂ ಪುರಾಣವನ್ನು ಹೇಳು-ತ್ತಿದ್ದನು. ಅವನ ಪುರಾಣ ಕೇಳಲು ಪ್ರತಿದಿನ ಸಹಸ್ರಾರು ಜನರು ಸೇರುತ್ತಿದ್ದರು. ಕೆಲವು ದಿವಸಗಳಾದ ಬಳಿಕ ಏಕನಾಥನು, ಪಂಢರಪುರಕ್ಕೆ ಹೋಗಿ ಶ್ರೀವಿಟ್ಠಲನ ದರ್ಶನ ತೆಗೆದುಕೊಂಡು ಬಂದನು. ಸಂತಜ್ಞಾನೇಶ್ವರನು ಬರೆದ 'ಜ್ಞಾನೇಶ್ವರಿ'ಯನ್ನು ಅವನು ತಿದ್ದಿ ಶುದ್ಧಮಾಡಿದನು. ಸ್ವತಃ ಏಕನಾಥನು ಅನೇಕ ಗ್ರಂಥಗಳನ್ನು ಬರೆದಿರುವನು. ಅವುಗಳಲ್ಲಿ 'ಏಕನಾಥೀ ಭಾಗವತ'ವು ಬಹಳ ಪ್ರಸಿದ್ಧವಾಗಿದೆ.

ಒಮ್ಮೆ ಏಕನಾಥನು ಕಾಶೀಯಾತ್ರೆಗೆ ಹೋಗಿದ್ದನು. ತಿರುಗಿ ಬರುವಾಗ ಗಂಗಾಜಲದಿಂದ ತುಂಬಿದ ಒಂದು ಕೊಡವನ್ನು ಹೆಗಲಮೇಲೆ ಹೊತ್ತುಕೊಂಡು ರಾಮೇಶ್ವರ ತೀರ್ಥದಲ್ಲಿ ಬಿಡಲು ಹೊರಟಿದ್ದನು. ಕೆಲವು ದಿವಸ ನಡೆದುಬಂದಮೇಲೆ ನೀರಿಲ್ಲದ ಒಂದು ಪ್ರದೇಶವು ಹತ್ತಿತು. ಅಲ್ಲಿ ಒಂದು ಕತ್ತೆಯು, ಬಿಸಿಲಿನ ತಾಪದಿಂದ ಬಾಯಾರಿ ಚಟಚಟ ಒದ್ದಾಡುತ್ತಿತ್ತು. ಅದನ್ನು ಕಂಡು ಏಕನಾಥನಿಗೆ ದಯೆಹುಟ್ಟಿತು. ತಾನು ಹೊತ್ತು ತಂದ ಗಂಗಾಜಲದ ಕೊಡವನ್ನು ಕೆಳಗೆ ಇಳುಹಿ, ಸ್ವಲ್ಪ ನೀರನ್ನು ಆ ಕತ್ತೆಯ ಬಾಯಲ್ಲಿ ಹಾಕಿದನು. ಸ್ವಲ್ಪ ಸಮಯದಲ್ಲಿಯೆ ಕತ್ತೆಯು ಚೇತರಿಸಿಕೊಂಡು

ಎದ್ದು ಹೋಯಿತು. ಅದನ್ನು ಕಂಡು ಏಕನಾಥನು ಆನಂದಬಟ್ಟನು. ಅವನ ಸಂಗಡಿಗರು ಅದನ್ನೆಲ್ಲ ಕಂಡು ಆಶ್ಚರ್ಯಚಕಿತರಾದರು.

ಸಂತ ಏಕನಾಥರು ದೊಡ್ಡ ಸಾಧುಪುರುಷರು. ಅವರು 'ಜಗತ್ತಿನ ಎಲ್ಲ ವಸ್ತುಗಳಲ್ಲಿಯೂ ದೇವರಿದ್ದಾನೆ' ಎಂದು ನಂಬಿದರು. ಅದರಂತೆಯೇ ಬೋಧಿಸುತ್ತಿದ್ದರು. ಅವರು ಯಾವ ಪ್ರಾಣಿಗಳಲ್ಲಿಯೂ ಭೇದಭಾವವನ್ನು ಮಾಡುತ್ತಿದ್ದಿಲ್ಲ. ಒಮ್ಮೆ ಒಬ್ಬ ಹರಿಜನನು ಅವರನ್ನು ತಮ್ಮ ಮನೆಗೆ ಊಟಕ್ಕೆ ಕರೆದನು. ಅವರು ಯಾವ ಭೇದವನ್ನೂ ಎಣಿಸದೆ, ಅವನಲ್ಲಿ ಹೋಗಿ ಊಟ ಮಾಡಿ ಬಂದರು. ಮತ್ತೊಮ್ಮೆ ಅವರು, ತಮ್ಮ ತಂದೆಯ ಶ್ರಾದ್ಧಕ್ಕೆಂದು ಬ್ರಾಹ್ಮಣರಿಗೆ ಮಾಡಿಸಿದ ಅಡಿಗೆಯನ್ನು ಹರಿಜನರಿಗೆ ನೀಡಿ ಅವರನ್ನು ತೃಪ್ತಿಪಡಿಸಿದರು. ಹೀಗೆ ಏಕನಾಥರು ಜಾತಿ-ವಿಜಾತಿಗಳಲ್ಲಿ ಕೀಳು-ಮೇಲುಗಳನ್ನು ಮಾಡದೆ, ಸಂಸಾರದಲ್ಲಿಯೆ ಇದ್ದುಕೊಂಡು ಕ್ರಿ. ಶ. ೧೬೦೯ರಲ್ಲಿ ಪರಲೋಕವನ್ನು ಸೇರಿದರು.

## ಅಭ್ಯಸನಗಳು

೧. ಏಕನಾಥನ ತಂದೆ-ತಾಯಿಗಳಾರು?

೨. ಚಿಕ್ಕಂದಿನಲ್ಲಿ ಈತನ ಒಲವು ಯಾವ ಕಡೆಗೆ ಇತ್ತು?

೩. ಏಕನಾಥನು ಯಾವ ಗುರುಗಳ ಸನ್ನಿಧಿಗೆ ಹೋದನು?

೪. ಗುರುಗಳು ಇವನ ಗುಣಕ್ಕೆ ಮೆಚ್ಚಿ ಇವನಿಗೆ ಯಾವ ಕೆಲಸ ಕೊಟ್ಟರು?

೫. ಏಕನಾಥನಿಗೆ ಗುರುಗಳು ಹೇಳಿದ ಉಪದೇಶದ ಮಾತುಗಳು ಯಾವುವು?

೬. ಏಕನಾಥನು ಬರೆದ ಗ್ರಂಥಗಳಲ್ಲಿ ಪ್ರಸಿದ್ಧ ಗ್ರಂಥವು ಯಾವುದು?

೭. ಏಕನಾಥನು ಕತ್ತೆಯ ಜೀವವನ್ನು ಹೇಗೆ ಉಳಿಸಿದನು?

೮. ಏಕನಾಥನು ಜಾತಿಭೇದವನ್ನು ಮಾಡಬಾರದೆಂಬ ಮಾತನ್ನು ಜನರಿಗೆ ಹೇಗೆ ಮನಗಾಣಿಸಿ ಕೊಟ್ಟನು?

# ೨೬. ರಾಣೀ ಚಾಂದಬೀಬಿ

ಸುಮಾರು ಮೂರುವರೆನೂರು ವರುಷಗಳ ಹಿಂದೆ ವಿಜಾಪುರವು ಒಂದು ದೊಡ್ಡ ರಾಜಧಾನಿಯಾಗಿತ್ತು. ಅಲಿ ಅದಿಲಶಹ ಎಂಬವನು ಅಲ್ಲಿ ಬಾದಶಹನಾಗಿ ಆಳುತ್ತಿದ್ದನು. ಆತನ ಪ್ರೀತಿಯ ಹೆಂಡತಿಯೆ ಚಾಂದಬೀಬಿ.

ವಿಜಾಪುರದಂತೆ ಅಹಮ್ಮದನಗರವೂ ಇನ್ನೊಬ್ಬ ಬಾದಶಹನ ರಾಜಧಾನಿ. ನಿಜಾಮಶಾಹಿ ಎಂಬ ಮನೆತನದವರು ಅಲ್ಲಿ ರಾಜ್ಯವಾಳುತ್ತಿದ್ದರು. ಆ ಮನೆತನದ ಹುಸೇನ್ ನಿಜಾಮಶಹ ಎಂಬವನ ಮಗಳು ಚಾಂದಬೀಬಿ. ಚೆಲುವಿಕೆಯ ಮೂಲಕ ಅವಳು ಚಿಕ್ಕತನದಲ್ಲಿ ಮನೆಯವರೆಲ್ಲರಿಗೂ ಮುದ್ದಿನವಳಾಗಿದ್ದಳು. ಬೆಳೆಯತೊಡಗಿದಂತೆ ಅವಳ ಬುದ್ಧಿಯ ಕುಶಲತನವು ಪ್ರಕಟವಾಗತೊಡಗಿತು. ಮಗಳ ಬುದ್ಧಿವಂತಿಕೆಯನ್ನು ಕಂಡು ತಂದೆ ಹಿಗ್ಗಿದನು. ಅವಳಿಗೆ ತಕ್ಕ ವಿದ್ಯಾಭ್ಯಾಸವು ದೊರೆಯುವಂತೆ ಮಾಡಿದನು.

ಚಿತ್ರಗಳನ್ನು ಬರೆಯುವುದೆಂದರೆ ಚಾಂದಬೀಬಿಗೆ ತುಂಬ ಪ್ರೀತಿ, ಅವಳು ಅರಮನೆಯ ತೋಟದಲ್ಲಿ ಅರಳಿದ ಬೇರೆ ಬೇರೆ ಹೂಗಳನ್ನು ನೋಡುವಳು. ಅವುಗಳನ್ನು ಅಂದವಾಗಿ ಚಿತ್ರಿಸುವಳು. ಸಂಗೀತವೆಂದರೆ ಅವಳಿಗೆ ಬಲು ಮೆಚ್ಚಿಕೆ. ಸ್ವತಃ ಇಂಪಾಗಿ ಹಾಡುತ್ತಿದ್ದಳಲ್ಲದೆ, ವೀಣೆಯನ್ನು ನುಡಿಸಲೂ ಕಲಿತಿದ್ದಳು. ಅಹಮ್ಮದನಗರದ ಭಾಗದಲ್ಲಿ ಜನರಾಡುವ ಮಾತು ಮರಾಠಿ. ಚಾಂದಬೀಬಿ ಆ ಮಾತನ್ನು ಚೆನ್ನಾಗಿ ಪರಿಚಯಮಾಡಿಕೊಂಡಿದ್ದಳು. ಅರಬ್ಬಿ, ಪಾರ್ಸಿ ಭಾಷೆಗಳಲ್ಲಂತೂ ಪಾಂಡಿತ್ಯವನ್ನು ಪಡೆದಿದ್ದಳು. ಯುದ್ಧವಿದ್ಯೆಯನ್ನೂ ಕುದುರೆಯ ಏರಾಟವನ್ನೂ ಕಲಿಯಬೇಕೆಂದು ಚಾಂದಬೀಬಿಗೆ ಬಹಳ ಆಸೆಯಿತ್ತು. ಆದರೆ ಹತ್ತು ವರುಷದ ವಯಸ್ಸಿನಲ್ಲಿಯೆ ಆಕೆಯ ಮದುವೆಯಾದುದರಿಂದ, ಅವಳ ಆ ಆಸೆ ತಂದೆಯ ಮನೆಯಲ್ಲಿ ಪೂರ್ಣವಾಗಲಿಲ್ಲ.

ವಿಜಾಪುರ ಹಾಗು ಅಹಮ್ಮದನಗರದ ಬಾದಶಹರಲ್ಲಿ ಮೊದಲಿನಿಂದಲೂ ಹೊಂದಿಕೆಯಿರಲಿಲ್ಲ. ವಿರೋಧಭಾವವೇ ಬೆಳೆದು ಬಂದಿತ್ತು. ಚಾಂದಬೀಬಿಯ ತಂದೆಗೆ ವಿಜಾಪುರದ ರಾಜರೊಂದಿಗೆ ಸ್ನೇಹ ಬೆಳೆಸಬೇಕೆಂದು ಮನಸ್ಸಾಯಿತು. ಅದಕ್ಕಾಗಿ ಅವನು ಚಾಂದಬೀಬಿಯನ್ನು ವಿಜಾಪುರದ ಅಲಿ ಅದಿಲಶಹನಿಗೆ ಕೊಟ್ಟು ಮದುವೆಮಾಡಿದನು.

ಚಾಂದಬೀಬಿಯು ತನ್ನ ಗುಣಗಳಿಂದ ಅಲಿ ಅದಿಲಶಹನ ಪ್ರೀತಿಯ ರಾಣಿಯಾದಳು. ಮುಸಲ್ಮಾನ್ ಅರಸರ ಪದ್ಧತಿಯಂತೆ, ರಾಣಿಯರು ಅರಮನೆಯ ಅಂತಃಪುರದಲ್ಲಿಯೆ ಇರಬೇಕಾಗುತ್ತಿತ್ತು; ಆದರೆ ಚಾಂದಬೀಬಿಗೆ ಅಂತಹ ನಿರ್ಬಂಧಗಳೇನೂ ಇರಲಿಲ್ಲ. ಅಲ್ಲಿ ಅವಳು ಪತಿಯ ಅಪ್ಪಣೆಯನ್ನು ಪಡೆದು

ಕುದುರೆಯ ಸವಾರಿಯನ್ನು ಕಲಿತಳು; ಶಸ್ತ್ರಾಸ್ತ್ರಗಳ ವಿದ್ಯೆಯನ್ನೂ ಅಭ್ಯಾಸ ಮಾಡಿದಳು.

ಚಾಂದಾಬೀಬಿಯು ಯಾವಾಗಲೂ ಅಲಿ ಆದಿಲಶಹನ ಜೊತೆಯಲ್ಲಿಯೇ ಇರುತ್ತಿದ್ದಳು. ಪತಿಯೊಂದಿಗೆ ಅವಳು ರಾಜದರ್ಬಾರಕ್ಕೆ ಹೋಗುವಳು. ಪತಿಯ ಬಳಿಯಲ್ಲಿಯೆ ಬೇರೊಂದು ಆಸನದ ಮೇಲೆ ಕುಳಿತುಕೊಂಡು, ರಾಜ್ಯ ಕಾರಭಾರದ ಆಗು-ಹೋಗುಗಳನ್ನೆಲ್ಲ ಕೇಳಿ ಅರಿತುಕೊಳ್ಳುವಳು. ಪರರಾಜರಿಂದ ರಾಯಭಾರಿಗಳು ಬಂದಾಗಲೂ ಪತಿಯ ಬಳಿಯಲ್ಲಿಯೆ ಇದ್ದು, ರಾಜಕಾರ್ಯವನ್ನೆಲ್ಲ ಪರಿಚಯ ಮಾಡಿಕೊಳ್ಳುವಳು. ಅಲಿ ಆದಿಲಶಹನು ಬೇಟೆಗೆ ಹೋಗಲಿ, ಯುದ್ಧಕ್ಕೆಹೊರಡಲಿ, ಚಾಂದಬೀಬಿಯೂ ಜೊತೆಗೆ ಹೊರಡುವಳು. ಗಂಡನ ಪ್ರೀತಿಗೆ ಪಾತ್ರಳಾಗಿದ್ದಂತೆ ಪ್ರಜೆಗಳ ಮೆಚ್ಚಿಕೆಗೂ ಅವಳು ಪಾತ್ರಳಾಗಿದ್ದಳು.

ಚಾಂದಬೀಬಿಯ ದೈವದಲ್ಲಿ, ಗಂಡನ ಜೊತೆಯ ಬಾಳನ್ನು ಹೆಚ್ಚು ಕಾಲ ಅನುಭವಿಸುವುದಿರಲಿಲ್ಲ. ಸ್ವಲ್ಪ ದಿನಗಳಲ್ಲಿಯೆ ಅಲಿ ಆದಿಲಶಹನು ಅಕಸ್ಮಾ-



ಚಾಂದಬೀಬಿಯು ಮೊಗಲರೊಡನೆ ಕಾದುತ್ತಿರುವಳು

ತ್ತಾಗಿ ಮರಣಹೊಂದಿದನು. ಚಾಂದಬೀಬಿಗೆ ತುಂಬ ದುಃಖವಾಯಿತು. ಆದರೆ ಆಕೆಯು ಅಳುತ್ತ ಕುಳಿತರೆ ಕೆಲಸ ನಡೆಯುವಂತಿರಲಿಲ್ಲ. ಅಲಿ ಆದಿಲ-ಶಹನಿಗೆ ಮಕ್ಕಳಿರಲಿಲ್ಲ. ಆದುದರಿಂದ ಅವನ ತಮ್ಮನ ಮಗನಾದ ೨ನೆಯ ಇಬ್ರಾಹಿಮಶಹನು ಪಟ್ಟಕ್ಕೆ ಹಕ್ಕುದಾರನಾದನು. ಆಗ ಆತನು ಇನ್ನೂ ಚಿಕ್ಕವನು. ಆದುದರಿಂದ ಚಾಂದಬೀಬಿಯೆ ಅವನನ್ನು ಪಟ್ಟದ ಮೇಲೆ

ಕುಳ್ಳಿರಿಸಿ, ತಾನೇ ರಾಜ್ಯಕಾರಭಾರವನ್ನು ನಡೆಸಿದಳು. ಆಗ ಅವಳಿಗೆ ಬರಿ ೨೩ ವರುಷದ ವಯಸ್ಸು; ಆದರೂ ಬಹು ಚಾತುರ್ಯದಿಂದ ಆಡಳಿತವನ್ನು ಸಾಗಿಸಿದಳು.

ಅರಸು ಚಿಕ್ಕವನು, ಆಡಳಿತ ಸಾಗಿಸುವವಳು ಹೆಣ್ಣು ಮಗಳು! ಇದನ್ನರಿತು ರಾಜ್ಯದ ಅನೇಕ ಜನ ಸರದಾರರು ಅಲ್ಲಲ್ಲಿ ಕುತಂತ್ರಗಳನ್ನು ಹೂಡಿದರು. ಕೆಲವು ಸರದಾರರಂತೂ ನೆರೆಯ ರಾಜರ ನೆರವಿನಿಂದ ವಿಜಾಪುರಕ್ಕೆ ಮುತ್ತಿಗೆಯನ್ನೇ ಹಾಕಿದರು. ಆಗ ಚಾಂದಬೀಬಿಯ ಶಕ್ತಿ-ಸತ್ತ್ವಗಳು ಲೋಕಕ್ಕೆ ಗೊತ್ತಾದುವು. ಅವಳು ಧೈರ್ಯದಿಂದ ಅವರ ಮೇಲೆ ಬಿದ್ದು, ಕಾದಾಡಿ ವಿಜಾಪುರವನ್ನು ರಕ್ಷಿಸಿದಳು. ಆಕೆಯ ಸಾಮರ್ಥ್ಯವನ್ನರಿತು ಸರದಾರರೆಲ್ಲರೂ ತಣ್ಣಗಾದರು. ರಾಜ್ಯದಲ್ಲಿ ಶಾಂತಿ-ಸುವ್ಯವಸ್ಥೆಗಳು ನೆಲೆಗೊಂಡುವು.

ವಿಜಾಪುರದಲ್ಲಿ ಎಲ್ಲವೂ ಶಾಂತವಾಯಿತು. ರಾಜ್ಯವ್ಯವಸ್ಥೆಯು ಸುಸೂತ್ರವಾಗಿ ಸಾಗಿತು. ೨ನೆಯ ಇಬ್ರಾಹಿಮಶಹನು ಬೆಳೆದು ದೊಡ್ಡವನಾದನು; ರಾಜ್ಯಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡನು. ಅಷ್ಟರಲ್ಲಿ ಅಹಮ್ಮದನಗರದಲ್ಲಿ ಅಶಾಂತಿ ತಲೆಯೆತ್ತಿತು. ಅಲ್ಲಿಯ ಬಾದಶಹ ಇಬ್ರಾಹಿಮನು ಯುದ್ಧದಲ್ಲಿ ಸತ್ತುಹೋಗಿದ್ದನು. ಅವನ ಮಂತ್ರಿಯಾದ 'ಮಿಯಾನ್ ಮಂಜೂ' ಎಂಬವನು, ಇಬ್ರಾಹಿಮನ ಮಗ ಬಹದ್ದೂರಶಹನನ್ನು ಸೆರೆಯಲ್ಲಿರಿಸಿ ಅಹಮ್ಮದ್ ನಿಜಾಮಶಹ ಎಂಬವನನ್ನು ಪಟ್ಟಕ್ಕೆ ಕುಳ್ಳಿರಿಸಿದ್ದನು. ಮಿಕ್ಕ ಯಾವ ಸರದಾರರಿಗೂ ಇದು ಒಪ್ಪಿಗೆಯಾಗಲಿಲ್ಲ. ಆದುದರಿಂದ ಅವರು ದಂಗೆಯನ್ನು ಎಬ್ಬಿಸಿದ್ದರು. ಅವರೆಲ್ಲರೂ ಕೂಡಿ ಚಾಂದಬೀಬಿಯನ್ನು ಅಹಮ್ಮದನಗರಕ್ಕೆ ಬರಮಾಡಿಕೊಂಡರು. ಅವಳು ನಿಜವಾದ ಹಕ್ಕುದಾರನಾದ ಬಹದ್ದೂರಶಹನ ಪಕ್ಷವನ್ನು ವಹಿಸಿ, ಆ ಸರದಾರರೆಲ್ಲರಿಗೆ ನಾಯಿಕೆಯಾದಳು.

ಆಗ ಮಿಯಾನ್‌ಮಂಜು ಸುಮ್ಮನೆ ಕುಳಿತುಕೊಳ್ಳಲಿಲ್ಲ; ದಿಲ್ಲಿಯ ಮೊಗಲ ಬಾದಶಹ ಅಕಬರನ ಸಹಾಯವನ್ನು ಕೇಳಿದನು. ಅವನು ತನ್ನ ಮಗ ಮುರಾದನನ್ನು, ದೊಡ್ಡ ಸೈನ್ಯದೊಂದಿಗೆ ಅಹಮ್ಮದನಗರದ ಮೇಲೆ ಕಳುಹಿದನು. ಮುರಾದನ ಸೈನ್ಯವು ಅಹಮ್ಮದನಗರದ ಕೋಟೆಯನ್ನು ಮುತ್ತಿತು. ಚಾಂದಬೀಬಿಯು ಬೆದರಲಿಲ್ಲ. ಧೈರ್ಯದಿಂದ ಕೋಟೆಯಲ್ಲಿ ಯುದ್ಧದ ಸಿದ್ಧತೆಯನ್ನು ನಡೆಸಿದಳು. ಅಹಮ್ಮದನಗರದ ಕೋಟೆ ಬಲುಭದ್ರವಾದುದು. ಅಲ್ಲದೆ ಚಾಂದಬೀಬಿಯ ಮುಂದಾಳುತನದಲ್ಲಿ ಸೈನಿಕರು ಜೀವದ ಹಂಗುದೊರೆದು ಹೋರಾಡಲು ಸಿದ್ಧರಾಗಿದ್ದರು. ಘೋರವಾದ ಕಾಳೆಗವಾಯಿತು. ಚಾಂದಬೀಬಿಯು ತಾನೇ ಮುಂದಾಗಿ ಮೊಗಲ ಸೈನಿಕರ

ಬಂಡಗಳನ್ನು ಚೆಂಡಾಡಿದಳು. ಆಕೆಯ ಸಾಮರ್ಥ್ಯವನ್ನು ಕಂಡು ಮುರಾದನು ಬೆರಗಾದನು. ತನ್ನ ಸೈನ್ಯದಲ್ಲಿ ಅನ್ನಸಾಮಗ್ರಿಯು ತೀರಿದುದರಿಂದ ಅವನು ಬೆದರಿದನು. ಆಗ ನಿರ್ವಾಹವಿಲ್ಲದೆ ಮುತ್ತಿಗೆಯನ್ನು ಎಬ್ಬಿಸಿ ಅವನು ಹಿಂದಿರುಗಬೇಕಾಯಿತು. ಚಾಂದಬೀಬಿಗೆ ಜಯವು ಸಿಕ್ಕಿತು. ಬಹದ್ದೂರ-ಶಹನನ್ನು ಪಟ್ಟದಮೇಲೆ ಕುಳ್ಳಿರಿಸಿ, ಅವಳು ತಾನೇ ಆಡಳಿತವನ್ನು ಸಾಗಿಸ ಹತ್ತಿದಳು. ಅಹಮ್ಮದನಗರ ರಾಜ್ಯದಲ್ಲಿ ಸುಖ-ಶಾಂತಿಗಳು ನೆಲೆಗೊಂಡುವು.

ಅಹಮ್ಮದನಗರದಲ್ಲಾದ ಸೋಲನ್ನು ದಿಲ್ಲಿಯ ಮೊಗಲರು ಮರೆಯಲಿಲ್ಲ. ಮುಂದೆ ನಾಲ್ಕು ವರುಷಗಳಲ್ಲಿಯೇ ಅಕಬರ ಬಾದಶಹನ ಮೂರನೆಯ ಮಗ ಡಾನಿಯೇಲನು ದೊಡ್ಡ ಸೈನ್ಯದೊಂದಿಗೆ ಬಂದು, ಅಹಮ್ಮದನಗರದ ಕೋಟೆಯನ್ನು ಮುತ್ತಿದನು. ಆಗಲೂ ಚಾಂದಬೀಬಿಯೇ ಅಹಮ್ಮದನಗರವನ್ನು ಕಾಪಾಡಲು ಮುಂದಾದಳು. ಆದರೆ ನಗರದಲ್ಲಿಯೇ ಇದ್ದ ವಿರೋಧಿ ಪಕ್ಷದವರು ಈ ಸಂದರ್ಭದ ದುರುಪಯೋಗಮಾಡಿಕೊಳ್ಳುವ ಲಕ್ಷಣ ತೋರಿತು. ಇದನ್ನರಿತು ಚಾಂದಬೀಬಿಯು ಮೊಗಲರೊಂದಿಗೆ ಒಪ್ಪಂದ ಮಾಡಿಕೊಳ್ಳುವುದೇ ಒಳ್ಳೆಯದೆಂದು ನೆನೆದಳು; ಮೊಗಲ ಸೇನಾಪತಿಗೊಂದು ಪತ್ರ ಬರೆಸಿ ಕಳುಹಿದಳು. ಅದು ಆ ಸೇನಾಪತಿಗೆ ದೊರೆಯದೆ, ವಿರೋಧೀ ಪಕ್ಷದವರ ಕೈಯಲ್ಲಿ ಸಿಕ್ಕಿತು. ಅವರು ಆ ಪತ್ರದ ದುರುಪಯೋಗಮಾಡಿಕೊಂಡು, ಚಾಂದಬೀಬಿಯ ವಿಷಯದಲ್ಲಿ ಜನರಿಗೆಲ್ಲ ಕೆಟ್ಟ ಅಭಿಪ್ರಾಯ ವುಂಟಾಗುವಂತೆ ಮಾಡಿದರು. ಇದರಿಂದ ಜನರು ಸಿಟ್ಟಿಗೆದ್ದು, ಸುಳ್ಳು-ಸತ್ಯಗಳ ವಿಚಾರಮಾಡದೆ ಆಕೆಯನ್ನು ಕೊಲೆಮಾಡಿದರು. ಜನರ ಈ ಅವಿವೇಕವು ಅಹಮ್ಮದನಗರ ರಾಜ್ಯದ ಅಳಿಗಾಲಕ್ಕೆ ಕಾರಣವಾಯಿತು. ಚಾಂದಬೀಬಿಯ ಮರಣಾನಂತರ ಅವಳ ಯೋಗ್ಯತೆ ಎಲ್ಲರಿಗೂ ತಿಳಿಯಿತು; ಆದರೂ ಕಳೆದುಕೊಂಡ ಮೇಲೆ ಬುದ್ಧಿ ಬಂದು ಪ್ರಯೋಜನವೇನು?

## ಅಭ್ಯಸನಗಳು

೧. ಚಾಂದಬೀಬಿಗೆ ಅವಳ ತಂದೆಯು ಚಿಕ್ಕಂದಿನಲ್ಲಿ ಯಾವ ಯಾವ ವಿದ್ಯೆಗಳನ್ನು ಕಲಿಸಿದನು?

೨. ಅವಳ ಮದುವೆಯು ಯಾರ ಸಂಗಡ ಆಯಿತು?

೩. ಚಾಂದಬೀಬಿಯು ರಾಜಕಾರಣದಲ್ಲಿ ಹೇಗೆ ನಿಪುಣಳಾದಳು?

೪. ಅಹಮ್ಮದನಗರ ರಾಜ್ಯವನ್ನು ಮೊಗಲರಿಂದ ಚಾಂದಬೀಬಿಯು ಹೇಗೆ ಕಾಪಾಡಿದಳು?

೫. ಚಾಂದಬೀಬಿಯ ಮರಣವು ಹೇಗೆ ಆಯಿತು?

೭. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿ ವಾಕ್ಯಗಳನ್ನು ಪೂರ್ತಿ ಗೊಳಿಸಿರಿ.

ಅ) .........ನು ಈಕೆಯ ತಂದೆಯು.
ಆ) .........ಇವು ಈಕೆಯ ಪ್ರೀತಿಯ ವಿಷಯಗಳಾಗಿದ್ದುವು.
ಇ) ಇವಳ ಗಂಡನು ತೀರಿಕೊಂಡಾಗ ಇವಳಿಗೆ......ವರುಷಗಳಾಗಿದ್ದುವು.
ಈ) ಈಕೆಯ ಆಳಿಕೆಯಲ್ಲಿ.........ಬಾದಶಹನ ಮಗನಾದ.........ನು .........ಕ್ಕೆ ಮುತ್ತಿಗೆ ಹಾಕಿದನು.
ಉ) ಚಾಂದಬೀಬಿಯು ಮೊಗಲರನ್ನು ಸೋಲಿಸಿ.........ನನ್ನು ಪಟ್ಟಕ್ಕೆ ಕುಳ್ಳಿರಿಸಿದಳು.

# ೨೭. ಅಕಬರ ಬಾದಶಹ

ದಿಲ್ಲಿಯು ಈಗ ಸ್ವತಂತ್ರ ಭಾರತದ ರಾಜಧಾನಿಯಾಗಿದೆ. ಸುಮಾರು ನಾಲ್ಕು ನೂರು ವರ್ಷಗಳ ಹಿಂದೆ ಅದು ಮೊಗಲ ಬಾದಶಹರ ರಾಜಧಾನಿಯಾಗಿತ್ತು. ಮೂರನೆಯ ಮೊಗಲಬಾದಶಹನೇ ಅಕಬರನು. ಅವನು ಸುಮಾರು ಐವತ್ತು ವರ್ಷಗಳ ವರೆಗೆ ರಾಜ್ಯ ನಡೆಸಿದನು. ಅಲ್ಲದೆ ಅವನ ಆಳಿಕೆಯು ಪ್ರಜೆಗಳಿಗೆ ಬಹಳ ಸುಖಕರವಾಗಿತ್ತು, ಆದುದರಿಂದ ಅಕಬರನು ಒಳ್ಳೆಯ ಅರಸನೆಂದು ಹೆಸರು ಪಡೆದಿರುವನು. ಅವನನ್ನು 'ಘನವಂತನಾದ ಅಕಬರ' ಎಂದು ಕರೆಯುವರು.

ಅಕಬರನ ತಂದೆ ಹುಮಾಯುನ; ತಾಯಿ ಹಮಿದಾಬಾನು. ಹುಮಾಯುನನು ಕೆಲವು ವರ್ಷಗಳ ವರೆಗೆ ತನ್ನ ರಾಜ್ಯವನ್ನು ಕಳೆದುಕೊಂಡ, ಸಹಾಯಾರ್ಥವಾಗಿ ಅತ್ತಿತ್ತ ತಿರುಗಾಡುತ್ತಿದ್ದನು. ಒಮ್ಮೆ ಅವನು ರಾಣಾಪ್ರಸಾದನೆಂಬ ರಜಪೂತ ಸರದಾರನ ಆಶ್ರಯದಲ್ಲಿ ಇದ್ದನು. ಅದೇ ಸಮಯದಲ್ಲಿ ಹಮಿದಾಬಾನು ಬೇಗಮಳು ಒಂದು ಗಂಡುಮಗುವನ್ನು ಹಡೆದಳು. (ಕ್ರಿ. ಶ. ೧೫೪೨) ಹೀಗೆ ವನವಾಸದ ಕಾಲದಲ್ಲಿ ಹುಟ್ಟಿದ ಕೂಸು, ಮುಂದೆ 'ದಿಲ್ಲಿಯ ಬಾದಶಹ ಅಕಬರ' ಎಂದು ಕೀರ್ತಿಯನ್ನು ಸಂಪಾದಿಸಿತು.

ಹುಮಾಯುನನು ತನ್ನ ರಾಜ್ಯವನ್ನು ತಿರುಗಿ ಸಂಪಾದಿಸಿದ ಮೇಲೆ ಒಂದೇ ವರ್ಷ ಆಳಿ ತೀರಿಕೊಂಡನು. ಆಗ ಅಕಬರ ಇನ್ನೂ ಹದಿಮೂರು ವರ್ಷದ ಹುಡುಗ. ಅವನು ಬಹಿರಾಮಖಾನನೆಂಬ ಸರದಾರನ ಕೂಡ ಪಂಜಾಬದ ಕಡೆಗೆ ಹೋಗಿದ್ದನು. ಹುಮಾಯುನನು ಸತ್ತ ಸುದ್ದಿಯನ್ನು ಕೇಳಿ ಬಹಿರಾಮಖಾನನು, ಅಕಬರನಿಗೆ ಮಾರ್ಗದಲ್ಲಿಯೇ ಕಾಳಾನೂರ

ಎಂಬಲ್ಲಿ ಪಟ್ಟಗಟ್ಟಿದನು. ಇಬ್ಬರೂ ದಿಲ್ಲಿಗೆ ತಿರುಗಿ ಬಂದ ಮೇಲೆ, ಬಹಿ-ರಾಮನೇ ಆಕಬರನ ಹೆಸರಿನಿಂದ ರಾಜ್ಯಭಾರ ನಡೆಸಿದನು.



ಆಕಬರನ ದರಬಾರದಲ್ಲಿಯ ನವರತ್ನಗಳು

ಮುಂದೆ ಕೆಲವೇ ದಿನಗಳಲ್ಲಿ ದೊಡ್ಡದೊಂದು ವಿಪತ್ತು ಬಂದಿತು. ಹೇಮು ಎಂಬ ಹಿಂದುಸರದಾರನೊಬ್ಬನು, ದಿಲ್ಲಿಯನ್ನು ಗೆದ್ದುಕೊಳ್ಳಬೇಕೆಂದು

ದೊಡ್ಡ ದಂಡಿನೊಡನೆ ಅಕಬರನಿಗೆ ಇದಿರಾದನು. ಪಾನಿಪತದ ಬಳಿಯಲ್ಲಿ ಕ್ರಿ. ಶ. ೧೫೫೬ರಲ್ಲಿ ಇವರಿಬ್ಬರ ನಡುವೆ ಘನಘೋರ ಕಾಳಗವಾಯಿತು. ಅದರಲ್ಲಿ ಹೇಮು ಸತ್ತುಹೋದನು, ಅಕಬರನು ಜಯಶಾಲಿಯಾದನು.

ಬಹಿರಾಮ್‌ಖಾನನು ಬಹಳ ಕ್ರೂರನು. ತನ್ನ ಅಧಿಕಾರವೇ ನಡೆಯಬೇಕೆಂದು ಅವನ ದುರಾಶೆ. ಇದು ಅಕಬರನಿಗೆ ಸೇರಲಿಲ್ಲ. ಅವನು ಬಹಿರಾಮನಿಗೆ ಪರಿಪರಿಯಿಂದ ಹೇಳಿದನು. ಆದರೂ ಅವನು ಕೇಳಲಿಲ್ಲ. ಬಳಿಕ ಅಕಬರನು ಅವನನ್ನು ಅಧಿಕಾರದಿಂದ ಕಿತ್ತುಹಾಕಿ, ಅವನನ್ನು ಮಕ್ಕಾ ಯಾತ್ರೆಗೆ ಕಳುಹಿದನು; ರಾಜ್ಯಕಾರಭಾರವನ್ನೆಲ್ಲ ತಾನೇ ನೋಡಿಕೊಳ್ಳತೊಡಗಿದನು.

ಆಗ ದಿಲ್ಲಿಯ ಸುತ್ತುಮುತ್ತಲೂ ಅನೇಕ ರಜಪೂತ ಅರಸರ ರಾಜ್ಯಗಳಿದ್ದುವು. ಆ ಅರಸರು ಶೂರರೂ, ಸ್ವಾಭಿಮಾನಿಗಳೂ ಆಗಿದ್ದರು. ಅವರನ್ನು ವಶಪಡಿಸಿಕೊಂಡು ಅವರ ಸ್ನೇಹವನ್ನು ಸಂಪಾದಿಸಿದರೆ, ತನ್ನ ಕಾರ್ಯವು ಒಳಿತಾಗಿ ಸಾಗುವುದೆಂದು ಅಕಬರನು ಎಣಿಕೆಹಾಕಿದನು. ಅವರೊಡನೆ ಬೀಗತನವನ್ನು ಮಾಡಿದನು. ಅಂಬರದ ಅರಸನಾದ ಭಗವಾನದಾಸನ ತಂಗಿಯನ್ನು ತಾನೇ ಮದುವೆ ಮಾಡಿಕೊಂಡನು. ಭಗವಾನದಾಸನನ್ನೂ ಅವನ ಅಳಿಯನಾದ ಮಾನಸಿಂಗನನ್ನೂ ತನ್ನ ಸೇನಾಪತಿಗಳನ್ನಾಗಿ ನೇಮಿಸಿಕೊಂಡನು. ರಾಜಾ ತೋಡರಮಲ್ಲನೆಂಬವನನ್ನು ಮಂತ್ರಿಯನ್ನಾಗಿ ನೇಮಿಸಿಕೊಂಡನು. ಅವನಿಂದ ಕಂದಾಯಖಾತೆಯನ್ನು ಸುಧಾರಿಸಲು ಹಚ್ಚಿದನು. ಬೀರಬಲ್, ತಾನಸೇನ ಮುಂತಾದ ಪಂಡಿತರನ್ನೂ ಕಲಾವಿದರನ್ನೂ ಮನ್ನಿಸಿ, ತನ್ನ ದರ್ಬಾರದಲ್ಲಿ ಇಟ್ಟುಕೊಂಡನು. ಇವನು ಹಿಂದು-ಮುಸಲ್ಮಾನರೆಂದು ಭೇದಭಾವವನ್ನು ತೋರಿಸಲಿಲ್ಲ. ಇದರಿಂದ ಅನೇಕ ಹಿಂದುರಾಜರು ಅಕಬರನ ಸ್ನೇಹವನ್ನು ಮಾಡಿದರು. ಅಲ್ಲದೆ ಇವನಿಗೆ ಅಂಕಿತರಾಗಿ ಸದಾಕಾಲದಲ್ಲಿಯೂ ಸಹಾಯ ಮಾಡಹತ್ತಿದರು.

ಆ ಮೇಲೆ ಅಕಬರನು ರಾಜ್ಯವಿಸ್ತಾರಕ್ಕೆ ಪ್ರಾರಂಭಮಾಡಿದನು. ಮೊದಲು ಪಂಜಾಬ-ಮಾಳವಾ-ಬಂಗಾಲ-ಬಿಹಾರಗಳನ್ನು ಗೆದ್ದು ತನ್ನ ರಾಜ್ಯಕ್ಕೆ ಕೂಡಿಸಿಕೊಂಡನು. ರಜಪೂತ ಅರಸರಲ್ಲಿ ಕೆಲವರು ಅಕಬರನೊಡನೆ ಸಂಬಂಧ ಬೆಳೆಸಿದ್ದರು; ಬೇರೆ ಕೆಲವರು ಅವನ ಶೌರ್ಯ-ಸದ್ಗುಣಗಳಿಗೆ ಮೆಚ್ಚಿ ಮಾಂಡಲಿಕರಾದರು. ಆದರೆ ಚಿತ್ತೂರಿನ ಅರಸನಾದ ಉದಯಸಿಂಗನು ಮಾತ್ರ ಅಕಬರನಿಗೆ ತಲೆವಾಗಲಿಲ್ಲ. ಅವನು ತುಂಬ ಧರ್ಮಾಭಿಮಾನಿ. ಅಕಬರನು ಚಿತ್ತೂರಿನ ಮೇಲೆ ದಂಡೆತ್ತಿಹೋಗಿ ಅದನ್ನು ವಶಪಡಿಸಿಕೊಂಡನು. ಉದಯಸಿಂಗನು ಅದಕ್ಕೆ ಬೆದರದೆ, ಅರವಲೀ ಬೆಟ್ಟದ ಬಳಿಯಲ್ಲಿ

'ಉದಯಪುರ' ಎಂಬ ಹೊಸದೊಂದು ಪಟ್ಟಣವನ್ನು ಕಟ್ಟಿಸಿ ಅಲ್ಲಿ ಆಳಹತ್ತಿದನು. ಉದಯಸಿಂಹನ ತರುವಾಯ ಅವನ ಮಗ ಪ್ರತಾಪಸಿಂಹನು ಪಟ್ಟಕ್ಕೆ ಬಂದನು. ಅವನು ತಂದೆಗಿಂತಲೂ ಹೆಚ್ಚಿನ ವೀರನು, ಸ್ವಾಭಿಮಾನಿಯು. ಅವನು ತನ್ನ ಹಿರಿಯರ ರಾಜಧಾನಿಯಾದ ಚಿತ್ತೂರನ್ನು ಮರಳಿ ಗೆದ್ದುಕೊಳ್ಳಬೇಕೆಂದು ಪ್ರಯತ್ನಪಡಹತ್ತಿದನು. ಇದನ್ನು ಕಂಡು ಅಕಬರನು ಉದಯಪುರಕ್ಕೆ ಗಂಟುಬಿದ್ದನು. ಅದನ್ನು ಗೆಲ್ಲಲು ದೊಡ್ಡ ಸೈನ್ಯವನ್ನು ಕಳುಹಿದನು. ಹಳದೀಘಟ್ಟ ಎಂಬಲ್ಲಿ ಮೊಗಲರಿಗೂ ಪ್ರತಾಪನಿಗೂ ದೊಡ್ಡ ಕಾಳಗವಾಯಿತು. ಅದರಲ್ಲಿ ಪ್ರತಾಪನು ಸೋತು ತನ್ನ ರಾಜ್ಯವನ್ನು ಕಳೆದುಕೊಂಡನು. ಆದರೂ ಅವನು ಅಕಬರನಿಗೆ ಶರಣಾಗತನಾಗಲಿಲ್ಲ.

ಬಳಿಕ ಅಕಬರನು ದಕ್ಷಿಣದ ಕಡೆಗೆ ಸಾಗಿದನು. ಅಲ್ಲಿಯೂ ಕೆಲವು ರಾಜರು ಮಾಂಡಲಿಕರಾದರು. ಅಕಬರನ ರಾಜ್ಯವು ಅಫಗಾನಿಸ್ತಾನದಿಂದ ಬಂಗಾಲದ ವರೆಗೆ ಹಾಗು ಕಾಶ್ಮೀರದಿಂದ ನರ್ಮದಾನದಿಯ ವರೆಗೆ ವಿಸ್ತಾರವಾಯಿತು. ಅಹಮ್ಮದನಗರದ ಸುಲ್ತಾನನು ಅಕಬರನೊಡನೆ ಒಪ್ಪಂದ ಮಾಡಿಕೊಂಡನು.

ಅಕಬರನು ದೊಡ್ಡ ಪಂಡಿತನಲ್ಲದಿದ್ದರೂ ಪಂಡಿತರನ್ನು ಮನ್ನಿಸುತ್ತಿದ್ದನು. ಅಬುಲ್‌ಫಜಲ್, ಫೈಜಿ, ಮಾನಸಿಂಹ, ತೋಡರಮಲ್ಲ, ಬೀರಬಲಾ, ತಾನಸೇನ, ಬದಾವುನಿ, ಮುಲ್ಲಾದೊಪ್ಯಾಜಾ ಹಾಗು ಹಕೀಮ ಹುಮಾಮ್ ಎಂದು ಒಂಬತ್ತು ಜನ ಪಂಡಿತರನ್ನು ತನ್ನ ದರಬಾರದಲ್ಲಿ ಇಟ್ಟುಕೊಂಡಿದ್ದನು. ಅವರನ್ನು ಕೇಳಿಯೇ ಎಲ್ಲ ಕಾರ್ಯಗಳನ್ನು ಮಾಡುತ್ತಿದ್ದನು. ಅವರು ಅಕಬರನ ದರ್ಬಾರದ 'ನವರತ್ನ'ಗಳೆಂದು ಪ್ರಸಿದ್ಧರಾಗಿದ್ದಾರೆ.

ಅಕಬರನು ಹಿಂದು ಮುಸಲ್ಮಾನರಲ್ಲಿ ಐಕ್ಯ ಬೆಳೆಸಲು ಬಹಳ ಪ್ರಯತ್ನಿಸಿದನು. ಶಿಶುಹತ್ಯೆ, ಬಾಲ್ಯವಿವಾಹ, ಪಶುಯಜ್ಞಗಳನ್ನು ಅವನು ಬಂದು ಮಾಡಿದನು. ಪುನರ್ವಿವಾಹಕ್ಕೆ ಪ್ರೋತ್ಸಾಹಕೊಟ್ಟನು. ಹಿಂದುಜನರಿಂದ ಮುಸಲ್ಮಾನ ಅರಸರು ಎತ್ತುತ್ತಿದ್ದ 'ಜಿಝಿಯಾ' ಎಂಬ ಒತ್ತಾಯದ ಕರವನ್ನು ತೆಗೆದುಹಾಕಿದನು. ಹಿಂದು ಹಾಗು ಮುಸಲ್ಮಾನ ಧರ್ಮಗಳಲ್ಲಿ ಇರುವ ಉತ್ತಮ ತತ್ತ್ವಗಳನ್ನು ಆರಿಸಿಕೊಂಡು 'ದಿನೇ ಇಲಾಹೀ ಎಂದರೆ ದೇವರ ಧರ್ಮ' ಎಂಬ ಹೊಸದೊಂದು ಧರ್ಮವನ್ನೇ ಸ್ಥಾಪಿಸಿದನು. ಆದರೆ ಅದು ಬಹುದಿವಸ ಬಾಳಲಿಲ್ಲ. ಅಕಬರನು ಹಿಂದುಗಳಂತೆ ವೇಷ-ಭೂಷಣಗಳನ್ನು ಹಾಕಿಕೊಳ್ಳುತ್ತಿದ್ದನು. ಹಣೆಗೆ ತಿಲಕವನ್ನೂ ಹಚ್ಚಿಕೊಳ್ಳುತ್ತಿದ್ದನು. ಸೂರ್ಯೋಪಾಸನೆ ಮಾಡುತ್ತಿದ್ದನು.

ಆಡಳಿತವು ಸುಲಭವಾಗಬೇಕೆಂದು ಅಕಬರನು ತನ್ನ ರಾಜ್ಯದಲ್ಲಿ ಹದಿ

ನೈದು ಸುಭೆಗಳನ್ನು ಮಾಡಿದ್ದನು. ಪ್ರತಿಯೊಂದು ಸುಭೆಗೆ ಒಬ್ಬನಂತೆ ಸುಭೇದಾರನನ್ನು ನಿಯಮಿಸಿದ್ದನು. ತಾನು ಅವುಗಳ ಮೇಲ್ವಿಚಾರಣೆ ಮಾಡುತ್ತಿದ್ದನು. ಪ್ರತಿದಿನ ಬೆಳಗಿನಲ್ಲಿ ಪ್ರಜೆಗಳಿಗೆ ಭೆಟ್ಟಿಕೊಡುತ್ತಿದ್ದನು. ಓಲಗಕ್ಕೆ ತಪ್ಪದೆ ಬರುತ್ತಿದ್ದನು. ಪ್ರಜೆಗಳ ದುಃಖಗಳನ್ನು ಕೇಳಿಕೊಂಡು ಅವುಗಳನ್ನು ನಿವಾರಿಸುತ್ತಿದ್ದನು. ವ್ಯಾಜ್ಯಗಳನ್ನು ಕೇಳಿಕೊಂಡು ನಿಷ್ಪಕ್ಷಪಾತದಿಂದ ನಿರ್ಣಯಗಳನ್ನು ಕೊಡುತ್ತಿದ್ದನು.

ಆಗ್ರಾದ ಬಳಿಯಲ್ಲಿ ಫತೆಪೂರ-ಸಿಕ್ರಿ ಎಂಬ ಸುಂದರವಾದ ಹೊಸ ಪಟ್ಟಣವನ್ನು ಕಟ್ಟಿಸಿದನು. ಐವತ್ತು ವರುಷಗಳ ದೀರ್ಘಕಾಲದ ವರೆಗೆ ಒಳ್ಳೆಯ ರೀತಿಯಿಂದ ರಾಜ್ಯವಾಳಿ, ಪ್ರಜೆಗಳಿಂದ ಹೊಗಳಿಸಿಕೊಂಡನು. ಕ್ರಿ. ಶ. ೧೬೦೫ರಲ್ಲಿ ಅಕಬರನು ಮರಣಹೊಂದಿದನು. ಅವನ ಘನತೆಯು ಇಂದಿಗೂ ಜನರ ಬಾಯಲ್ಲಿ ಆಡುತ್ತಿದೆ.

## ಅಭ್ಯಾಸನಗಳು

೧. ಅಕಬರನು ಹುಟ್ಟಿದಾಗ ಅವನ ತಂದೆ-ತಾಯಿಗಳ ಸ್ಥಿತಿಯು ಹೇಗೆ ಇತ್ತು?

೨. ಬಹಿರಾಮಖಾನನನ್ನು ಅಕಬರನು ಅಧಿಕಾರದಿಂದ ಏಕೆ ಕಿತ್ತಿ ಹಾಕಿದನು?

೩. ಅಕಬರನು ರಜಪೂತರ ಕೂಡ ಹೇಗೆ ನಡೆದುಕೊಳ್ಳುತ್ತಿದ್ದನು?

೪. ಯಾವ ರಜಪೂತ ವೀರನು ಅಕಬರನಿಗೆ ಶರಣಾಗತನಾಗಲಿಲ್ಲ?

೫. ಅಕಬರನು ಯಾವ ಯಾವ ರಾಜ್ಯಗಳನ್ನು ಗೆದ್ದನು?

೬. ಅಕಬರನ ರಾಜ್ಯದಲ್ಲಿಯ ನವರತ್ನಗಳು ಯಾವುವು?

೭. ಅಕಬರನು ಹಿಂದು-ಮುಸಲ್ಮಾನರಲ್ಲಿ ಐಕ್ಯ ಬೆಳೆಸಲು ಯಾವ ಪ್ರಯತ್ನಗಳನ್ನು ಮಾಡಿದನು?

೮. ಅಕಬರನು ತನ್ನ ರಾಜ್ಯದಾಡಳಿತವನ್ನು ಹೇಗೆ ಸಾಗಿಸುತ್ತಿದ್ದನು?

೯. ಕೆಳಗೆ ಕೆಲವು ಹೆಸರುಗಳನ್ನು ಕೊಟ್ಟಿದೆ. ಅವುಗಳಿಗೆ ಸಂಬಂಧಿಸಿದ ಸಂಗತಿಗಳ ಮುಂದೆ ಇರುವ ಕಂಸಗಳಲ್ಲಿ, ಅವರವರ ಅನುಕ್ರಮ ಸಂಖ್ಯೆಯನ್ನು ಬರೆಯಿರಿ.

(ಅ) ಅಕಬರನ ತಾಯಿಯು ( ) ೧) ಫತೆಪೂರ ಸಿಕ್ರಿ

(ಬ) ಅಕಬರನು ಹುಟ್ಟಿದ ಊರು ( ) ೨) ಹಳದೀಘಟ್ಟ

(ಕ) ಅಕಬರನು ಸ್ಥಾಪಿಸಿದ ಧರ್ಮ ( ) ೩) ಹಮೀದಾಬಾನು ಬೇಗಮ್

(ಡ) ಅಕಬರನು ಕಟ್ಟಿಸಿದ ಪಟ್ಟಣವು ( ) ೪) 'ದಿನೇ ಇಲಾಹಿ'

(ಇ) ಪ್ರತಾಪಸಿಂಹನ ಕೂಡ ಯುದ್ಧ ಮಾಡಿದ ಸ್ಥಳ ( ) ೫) ಉಮರಕೋಟೆ

# ೨೮. ವೈಭವಶಾಲಿ ಶಹಾಜಹಾನ

ಮೊಗಲ ಬಾದಶಹರಲ್ಲಿ ಶಹಾಜಹಾನನು ವೈಭವಶಾಲಿಯಾದ ಅರಸನು. ಅವನು ಅಕಬರ ಬಾದಶಹನ ಮೊಮ್ಮಗನು. ಇವನ ಮೊದಲಿನ ಹೆಸರು ಖುರ್ರಮ್. ಇವನ ತಂದೆ ಜಹಾಂಗೀರ; ತಾಯಿ ಜೋಧಬಾಯಿ. ಜಹಾಂಗೀರ ಬಾದಶಹನಿಗೆ ಖುರ್ರಮನಲ್ಲದೆ ಮತ್ತೆ ಮೂರು ಗಂಡುಮಕ್ಕಳಿದ್ದರು. ಅವರೆಲ್ಲರಲ್ಲಿ ಖುರ್ರಮನೇ ವೀರನೂ ಚುರುಕುಬುದ್ಧಿಯವನೂ ಆಗಿದ್ದನು. ಇವನನ್ನು ಕಂಡರೆ ಅಕಬರನಿಗೂ ಬಲು ಪ್ರೀತಿ. ಚಿಕ್ಕಂದಿನಲ್ಲಿಯೆ ಇವನು ಅರಸು ಮಕ್ಕಳಿಗೆ ಬೇಕಾಗುವ ಎಲ್ಲಾ ವಿದ್ಯೆಗಳನ್ನು ಕಲಿತಿದ್ದನು. ಸ್ವಲ್ಪ ದೊಡ್ಡವನಾದ ಬಳಿಕ ತಂದೆಗೆ ಆಗಾಗ ಸಹಾಯ ಮಾಡುತ್ತಿದ್ದನು; "ಮೊಗಲ ಸಾಮ್ರಾಜ್ಯಕ್ಕೆ ಮುಂದೆ ನಾನೇ ತಕ್ಕವನಾದ ದೊರೆ" ಎಂದು ತೋರಿಸಿಕೊಡುತ್ತಿದ್ದನು.

ಶಹಾಜಹಾನನ ಮಲತಾಯಿ ನೂರ್‌ಜಹಾನ್. ಅವಳು ಜಹಾಂಗೀರ ಬಾದಶಹನ ಪ್ರೀತಿಗೆ ಪಾತ್ರಳಾದಳು. ಆಕೆ ಬಲು ತಂತ್ರಗಾರಳು. ಶಹಾಜಹಾನನಿಗೆ ಪಟ್ಟವು ಸಿಗಬಾರದೆಂದು ಅವಳು ಪ್ರಯತ್ನಿಸುತ್ತಿದ್ದಳು. ಆದರೆ ಅವಳ ತಮ್ಮನಾದ ಅಸಫಖಾನನು ಶಹಾಜಹಾನನಿಗೆ ಮಗಳನ್ನು ಕೊಟ್ಟಿದ್ದನು. ಅವನು ಬಹಳ ರೀತಿಯಲ್ಲಿ ಪ್ರಯತ್ನಪಟ್ಟು ಶಹಾಜಹಾನನಿಗೇ ಪಟ್ಟವು ಸಿಗುವಂತೆ ಮಾಡಿದನು. ಜನಪ್ರಿಯನಾದ ಖುರ್ರಮನು **"ಶಹಾಜಹಾನ್"** ಎಂಬ ಹೆಸರಿನಿಂದ ದಿಲ್ಲಿಯ ಪಟ್ಟವನ್ನು ಏರಿದನು. ಈ ಪಟ್ಟವೇರುವ ಉತ್ಸವವು ದಿಲ್ಲಿಯಲ್ಲಿ ಬಹಳ ಸಡಗರದಿಂದ ನಡೆಯಿತು.

ಶಹಾಜಹಾನನಿಗೆ ಒಬ್ಬಳೇ ಒಬ್ಬಳು ಹೆಂಡತಿ. ಅವಳ ಹೆಸರು ಮುಮತಾಜ್‌ಮಹಲ್. ಅವಳು ಬಹಳ ಸುಂದರಿ; ಗುಣವತಿ. ಅವಳ ಮೇಲೆ ಶಹಾಜಹಾನನ ಪ್ರೇಮವು ಬಹಳವಾಗಿತ್ತು. ಆದುದರಿಂದಲೆ, ಉಳಿದ ಮುಸಲ್ಮಾನ ಅರಸರಂತೆ ಇವನು ಅನೇಕ ಹೆಂಡಂದಿರನ್ನು ಮದುವೆಯಾಗಿರಲಿಲ್ಲ. ಶಹಾಜಹಾನ್ ಮತ್ತು ಮುಮತಾಜ್‌ಮಹಲ್ ಇಬ್ಬರೂ ಬಹಳ ಸುಖದಿಂದ ಜೀವಿಸಿದರು. ಮುಮತಾಜಳು ಹದಿನಾಲ್ಕು ಮಕ್ಕಳನ್ನು ಹಡೆದಳು. ಅವರಲ್ಲಿ ನಾಲ್ಕುಜನ ಗಂಡುಮಕ್ಕಳು, ಇಬ್ಬರು ಹೆಣ್ಣುಮಕ್ಕಳು ಮಾತ್ರ ಬದುಕಿ ಉಳಿದರು.

ಪಟ್ಟಕ್ಕೆ ಬಂದ ಐದು ವರ್ಷಗಳಲ್ಲಿಯೇ ಶಹಾಜಹಾನನಿಗೆ ದುಃಖದ ಪ್ರಸಂಗವೊಂದು ಬಂದೊದಗಿತು. ಪ್ರೀತಿಯ ಹೆಂಡತಿ ಮುಮತಾಜಳು ಬೇನೆಯಿಂದ ಹಾಸಿಗೆ ಹಿಡಿದಳು. ಎಷ್ಟು ಉಪಚಾರ ಮಾಡಿದರೂ ವ್ಯರ್ಥವಾಯಿತು. ತನ್ನ ಜೀವದಂತೆ ಇದ್ದ ಪ್ರೇಮದ ಮಡದಿಯನ್ನು ಅವನು ಉಳಿಸಿಕೊಳ್ಳಲಾರದೆ

ಹೋದನು. ಇದರಿಂದ ಶಹಾಜಹಾನನು ಬಹಳ ಕಳವಳಗೊಂಡನು. ಮರಣ ಹೊಂದುವುದಕ್ಕಿಂತ ಮೊದಲು ಮಮತಾಜಳು ಪತಿಯನ್ನು ಹತ್ತಿರ ಕರೆದಳು. ತನ್ನ ಕೊನೆಯ ಆಶೆಗಳಿಗಾಗಿ ಎರಡು ವಚನಗಳನ್ನು ಬೇಡಿದಳು. ದುಃಖವು ಉಕ್ಕಿಬಂದು ಶಹಾಜಹಾನನು ಮಾತನಾಡದೆ ಹೋದನು. ಮಮತಾಜಳು "ಸ್ವಾಮಿ, ನನ್ನ ತರುವಾಯ ನೀವು ಯಾರನ್ನೂ ಮದುವೆಯಾಗಬಾರದು; ಮತ್ತು ನನ್ನ ನೆನಪೆಂದು ಜಗತ್ತಿನೊಳಗೆ ಶ್ರೇಷ್ಠವೆನಿಸುವ ಒಂದು ಕಟ್ಟಡವನ್ನು ಕಟ್ಟಿಸಬೇಕು" ಎಂದು ಹೇಳುತ್ತಲೇ ಪ್ರಾಣಬಿಟ್ಟಳು.

ಹೆಂಡತಿ ಸತ್ತಮೇಲೆ ಬಾದಶಹನು ಬಹಳ ದಿವಸಗಳ ವರೆಗೆ ಅರಮನೆ ಬಿಟ್ಟು ಹೊರಗೇ ಬರಲಿಲ್ಲ. ಅವನಿಗೆ ಸಹಿಸಲಾರದಷ್ಟು ದುಃಖವಾಗಿತ್ತು.




ಸೆರೆಮನೆಯಿಂದ ಶಹಾಜಹಾನನು ತಾಜಮಹಲನ್ನು ನೋಡುವದು

ಮಮತಾಜಳ ಸೌಂದರ್ಯವನ್ನೂ ಆಕೆಯ ಒಳ್ಳೆಯ ಗುಣಗಳನ್ನೂ ನೆನೆದು ಅವನು ಕೊರಗಿ ಬೆಂಡಾದನು.

ಮಮತಾಜಳ ಎರಡೂ ಬೇಡಿಕೆಗಳನ್ನು ಶಹಾಜಹಾನನು ತಪ್ಪದೆ ಪೂರಯಿಸಿದನು. ಅವಳ ತರುವಾಯ ಬೇರೆ ಯಾರನ್ನೂ ಅವನು ಲಗ್ನವಾಗಲಿಲ್ಲ. ಆಕೆಯ ಗೋರಿಯ ಮೇಲೆ, "ತಾಜಮಹಾಲ್" ಎಂಬ ಕಟ್ಟಡವನ್ನು ಕಟ್ಟಿಸಿದನು.

"ತಾಜಮಹಾಲ್" ಕಟ್ಟಡವು ಆಗ್ರಾಪಟ್ಟಣದಲ್ಲಿ ಯಮುನಾನದಿಯ ದಂಡೆಯ ಮೇಲೆ ಇದೆ. ಅದನ್ನು ಕಟ್ಟಿಸುವ ಸಲುವಾಗಿ ಬಾದಶಹನು

ದೇಶ-ವಿದೇಶಗಳಿಂದ ಶಿಲ್ಪಿಗಳನ್ನು ಕರೆಸಿದನು. ಅವರಿಂದ ಅದರ ನಕ್ಷೆಯನ್ನು ತೆಗೆಸಿ, ಮೊದಲು ಅದರಂತೆ ಕಟ್ಟಿಗೆಯಿಂದ ಸಣ್ಣ ಮಾದರಿಯನ್ನು ಮಾಡಿಸಿದನು. ಅದರಲ್ಲಿಯ ಕುಂದುಕೊರತೆಗಳನ್ನೆಲ್ಲ ಸರಿಪಡಿಸಿ, ತರುವಾಯ 'ಸಂಗಮರವರಿ' ಕಲ್ಲುಗಳಿಂದ ಅದನ್ನು ಕಟ್ಟಲು ಆಜ್ಞಾಪಿಸಿದನು. ಈ ಕಟ್ಟಡವನ್ನು ಕಟ್ಟಿ ಮುಗಿಸಲು ೨೦ ಸಾವಿರ ಜನರು ಇಪ್ಪತ್ತೆರಡು ವರುಷಗಳವರೆಗೆ ಕೆಲಸಮಾಡಿದರಂತೆ. ಇದಕ್ಕೆ ಸುಮಾರು ೩—೪ ಕೋಟಿ ರೂಪಾಯಿಗಳು ವೆಚ್ಚವಾಗಿರಬಹುದು. ನಿಜವಾಗಿಯೂ ತಾಜಮಹಲು ಜಗತ್ಪ್ರಸಿದ್ಧವಾದ ಕಟ್ಟಡವಾಗಿದೆ. ಅದನ್ನು ನೋಡಲು ಪ್ರತಿವರುಷ ದೇಶ-ವಿದೇಶಗಳಿಂದ ಸಾವಿರಾರು ಜನರು ಬರುತ್ತಾರೆ.

ಮುಮತಾಜಳ ಮರಣದ ತರುವಾಯ ಶಹಾಜಹಾನನ ಮನಸ್ಸು ರಾಜ್ಯಾಡಳಿತದ ಕಡೆಗೆ ಅಷ್ಟೊಂದು ಇರುತ್ತಿರಲಿಲ್ಲ. ನಿರ್ವಾಹವಿಲ್ಲದೆ ರಾಜ್ಯವನ್ನು ನೋಡಿಕೊಂಡು ಹೋಗುತ್ತಿದ್ದನು. ಅವನು ಯಾರಿಗೂ ತೊಂದರೆ ಕೊಡಲಿಲ್ಲ. ರಾಜ್ಯವನ್ನು ಬೆಳೆಸುವುದಕ್ಕೂ ಸಾಹಸ ಮಾಡಲಿಲ್ಲ. ಅವನ ಆಳಿಕೆಯಲ್ಲಿ ಪ್ರಜರು ಸುಖದಿಂದ ಜೀವಿಸುತ್ತಿದ್ದರು. ವ್ಯಾಪಾರ-ಉದ್ಯಮಗಳು ಚೆನ್ನಾಗಿ ನಡೆದಿದ್ದುವು. ಯುರೋಪಖಂಡದ ವ್ಯಾಪಾರಿಗಳು ಆಗಲೇ ಭಾರತಕ್ಕೆ ಬರತೊಡಗಿದ್ದರು. ಕೊಲೆ-ಸುಲಿಗೆಗಳು ಎಲ್ಲಿಯೂ ಇದ್ದಿಲ್ಲ. ಆದುದರಿಂದ ಶಹಾಜಹಾನನ ಕಾಲವು ಮೊಗಲರ ಆಳಿಕೆಯಲ್ಲಿಯ 'ಸುವರ್ಣ ಸಮಯ' ಎಂದು ಹೇಳುತ್ತಾರೆ.

ಶಹಾಜಹಾನನು ಕಲಾಪ್ರಿಯನು. ಇವನ ಆಳಿಕೆಯಲ್ಲಿ ಕಲೆ-ಕೈಗಾರಿಕೆಗಳು ಊರ್ಜಿತಸ್ಥಿತಿಗೆ ಮುಟ್ಟಿದ್ದುವು. ಅಂದ-ಚೆಂದವಾದ ಕಟ್ಟಡಗಳನ್ನು ಕಟ್ಟಿಸುವುದೆಂದರೆ ಇವನಿಗೆ ಬಹಳ ಪ್ರೀತಿ. ದುಡ್ಡು ಬೇಕಾದಷ್ಟು ವೆಚ್ಚವಾದರೂ ಅವನು ಲೆಕ್ಕಿಸುತ್ತಿರಲಿಲ್ಲ. ಇವನು ದಿಲ್ಲಿಯ ಕೆಂಪುಕೋಟೆಯಲ್ಲಿ ಕಟ್ಟಿಸಿದ "ಮೋತೀಮಸೀದೆ", "ದಿವಾನ್-ಈ-ಖಾಸ್", "ರಂಗಮಹಲ್", "ಶಹಾಬುರ್ಜ್", ಇವೆಲ್ಲ ಒಂದಕ್ಕಿಂತ ಒಂದು ಸುಂದರವಾಗಿವೆ. ಇವೆಲ್ಲವುಗಳ ಮೇಲೆ ಕಳಸವಿಟ್ಟಂತೆ ತಾಜಮಹಲಿನ ಕಟ್ಟಡವಿದೆ. ರತ್ನ, ಹವಳ, ಪಚ್ಚೆ, ವಜ್ರಗಳನ್ನು ನಡು-ನಡುವೆ ಸೇರಿಸಿ, ಒಂದು ಲಕ್ಷ ತೊಲೆ ಬಂಗಾರದಿಂದ ಇವನು ಮಯೂರ ಸಿಂಹಾಸನವನ್ನು ಮಾಡಿಸಿದ್ದನು. ಯಮುನಾನದಿಯ ಆಚೆಯ ತೀರದ ಮೇಲೆ ಒಂದು ಅಮೃತಶಿಲೆಯ ಕಟ್ಟಡವನ್ನು ಕಟ್ಟಿಸಬೇಕು, ಅದರಲ್ಲಿ ತನ್ನ ಸಮಾಧಿಯನ್ನು ಮಾಡಿಸಬೇಕು. ಅದಕ್ಕೂ ತಾಜಮಹಲಿಗೂ ನಡುವೆ ಅಮೃತಶಿಲೆಯ ಸೇತುವೆಯನ್ನು ಮಾಡಿಸಿ ಎರಡನ್ನೂ ಕೂಡಿಸಬೇಕು— ಎಂದು ಶಹಾಜಹಾನನ ಅಪೇಕ್ಷೆಯಿದ್ದಿತಂತೆ; ಆದರೆ ಅದು ಪೂರ್ಣವಾಗಲಿಲ್ಲ.

ಕೊನೆಗಾಲದಲ್ಲಿ ಶಹಾಜಹಾನನಿಗೆ ಬಹಳ ದುಃಖವಾಯಿತು. ಅವನ ಮಗನಾದ ಔರಂಗಜೇಬನು ಅವನನ್ನು ಸೆರೆಯಲ್ಲಿಟ್ಟು ತಾನೇ ಅರಸನಾದನು. ಶಹಾಜಹಾನನ ಪ್ರೀತಿಯ ಮಕ್ಕಳಾದ ದಾರಾ, ಸೂಜಾ ಇವರನ್ನು ಔರಂಗಜೇಬನು ತಂದೆಯ ಕಣ್ಮುಂದೆಯೇ ಕೊಲ್ಲಿಸಿದನು. ಜಹಾನ್‌ಆರಾ, ರೋಶನ್‌ಆರಾ ಎಂಬ ಇಬ್ಬರು ಹೆಣ್ಣುಮಕ್ಕಳು ಮಾತ್ರ ಕಡೆತನಕ ಇವನ ಹತ್ತಿರ ಇದ್ದರು. ಬರುಬರುತ್ತ ಶಹಾಜಹಾನನ ಮಾನಸಿಕ ಸ್ವಾಸ್ಥ್ಯವೂ ಕೆಟ್ಟಿತು. ಇವನು ಸೆರೆಮನೆಯಲ್ಲಿ ಯಾವಾಗಲೂ ತಾಜಮಹಲನ್ನು ನೋಡುತ್ತ ಕುಳಿತು ಬಿಡುತ್ತಿದ್ದನು. ೧೬೬೬ನೆಯ ಇಸವಿಯಲ್ಲಿ ಇವನು ಮರಣಹೊಂದಿದನು. ತಾಜಮಹಲ್ ಕಟ್ಟಡದಲ್ಲಿ, ಮುಮತಾಜ ಮಹಲಳ ಗೋರಿಯ ಬಳಿ ಶಹಾಜಹಾನನ ಸಮಾಧಿಯೂ ಇದೆ.

## ಅಭ್ಯಸನಗಳು

೧. ಶಹಾಜಹಾನನ ತಂದೆ-ತಾಯಿಗಳಾರು?

೨. ಶಹಾಜಹಾನನು ಪಟ್ಟವನ್ನು ಹೇಗೆ ದೊರಕಿಸಿದನು?

೩. ಇವನ ಪ್ರೀತಿಯ ಹೆಂಡತಿ ಯಾರು?

೪. ಶಹಾಜಹಾನನು ಕಟ್ಟಿಸಿದ ಕಟ್ಟಡಗಳಾವುವು?

೫. ಶಹಾಜಹಾನನ ಆಳಿಕೆಯನ್ನು ಮೊಗಲ ಅರಸರ ಆಳಿಕೆಯಲ್ಲಿ "ಸುವರ್ಣ-ಸಮಯ" ಎಂದು ಏಕೆ ಕರೆಯುವರು?

೬. ಶಹಾಜಹಾನನು ತನ್ನ ಕೊನೆಯ ದಿನಗಳನ್ನು ದುಃಖದಲ್ಲಿ ಏಕೆ ಕಳೆದನು?

# ೨೯. ಸಂತ ತುಕಾರಾಮು

ಮಹಾರಾಷ್ಟ್ರದಲ್ಲಿ ಜ್ಞಾನದೇವ, ಏಕನಾಥ ಮುಂತಾದ ಅನೇಕಜನ ದೇವಭಕ್ತರು ಆಗಿಹೋಗಿದ್ದಾರೆ. ದೇವಭಕ್ತರನ್ನು ಮಹಾರಾಷ್ಟ್ರದಲ್ಲಿ ಸಂತ ರೆಂದು ಹೇಳುವ ವಾಡಿಕೆಯಿದೆ. ತುಕಾರಾಮನೂ ಒಬ್ಬ ದೇವಭಕ್ತ, ಸಂತ.

ತುಕಾರಾಮನ ಜನ್ಮಸ್ಥಳ ದೇಹೂ ಎಂಬ ಗ್ರಾಮ. ಅದು ಪುಣೆಯ ಹತ್ತಿರ, ಇಂದ್ರಾಯಣಿ ನದಿಯ ತೀರದಲ್ಲಿ ಇದೆ. ತುಕಾರಾಮನ ತಂದೆಯ ಹೆಸರು ಬೋಲ್ಹೋಬಾ; ತಾಯಿಯ ಹೆಸರು ಕನಕಾಯಿ. ಅವರು ವೈಶ್ಯ-ಕುಲದವರು. ಪಂಢರಪುರದ ವಿಠ್ಠಲನು ಅವರ ಮನೆಯ ದೇವರು. ವ್ಯಾಪಾರವು ಅವರ ಮುಖ್ಯ ಉದ್ಯೋಗವಾಗಿತ್ತು. ತುಕಾರಾಮನು ಹುಟ್ಟಿದುದು ಕ್ರಿ. ಶ. ೧೬೦೮ರಲ್ಲಿ.



ಅಭಂಗಗಳನ್ನು ಹಾಡುತ್ತಿರುವ ತುಕಾರಾಮನು

ಚಿಕ್ಕ ತುಕಾರಾಮನಿಗೆ ಓಡಾಡುವುದು, ಜಿಗಿದಾಡುವುದು, ತಿನ್ನುಣ್ಣು ವುದು ಇವುಗಳ ಕಡೆಗೆ ಹೆಚ್ಚು ಲಕ್ಷ್ಯವಿರಲಿಲ್ಲ. ಗೆಳೆಯರೆಲ್ಲ ಒಟ್ಟಾಗಿ ಸೇರಿ ಆಟ-ನೋಜುಗಳನ್ನು ನಡೆಸಿದಾಗ, ಆತನು ಒಂದುಕಡೆಗೇ ಸುಮ್ಮನೆ ಕುಳಿತು ಕೊಳ್ಳುವನು. ಅವನ ಲಕ್ಷ್ಯವೆಲ್ಲ ದೇವರ ಕಡೆಗೇ ಇರುತ್ತಿತ್ತು. ಮನೆಯ ಉದ್ಯೋಗವಾದ ವ್ಯಾಪಾರವನ್ನು ಮಗನಿಗೆ ಕಲಿಸಬೇಕೆಂದು ಅವನ

ತಂದೆಯ ಅಪೇಕ್ಷೆ; ಆದುದರಿಂದ ಅವನು ತುಕಾರಾಮನನ್ನು ಅಂಗಡಿಯಲ್ಲಿ ಕುಳ್ಳಿರಿಸಹತ್ತಿದನು. ಆಗ ತುಕಾರಾಮನಿಗೆ ಇನ್ನೂ ಹದಿಮೂರು ವರುಷದ ವಯಸ್ಸು. ಆಗಲೇ ಅವನ ಲಗ್ನವಾಯಿತು. ಆದರೆ ಹುಡುಗಿಗೆ ಕೆಟ್ಟ ರೋಗ-ವಿದ್ದುದು ಕಂಡುಬಂದಿತು; ಆದುದರಿಂದ ಸ್ವಲ್ಪ ದಿನಗಳಲ್ಲಿಯೇ ಜೀಜಾಬಾಯಿ ಎಂಬವಳೊಡನೆ ತುಕಾರಾಮನಿಗೆ ಎರಡನೆಯ ಮದುವೆಯನ್ನು ಮಾಡಿದರು. ಮುಂದೆ ತುಕಾರಾಮನ ತಂದೆ-ತಾಯಿಗಳು ತೀರಿಕೊಂಡರು. ಇದರಿಂದ ಮನೆತನದ ಭಾರವೆಲ್ಲ ಅವನ ಮೇಲೆಯೇ ಬಿದ್ದಿತು.

ಸಂಕಟಗಳು ಬರಹತ್ತಿದರೆ ಒಂದರ ಮೇಲೊಂದು ಬರುತ್ತವೆ. ತುಕಾ-ರಾಮನ ವ್ಯಾಪಾರವು ಸರಿಯಾಗಿ ಸಾಗದಾಯಿತು. ಆಗಲೆ ಅವನ ಅಣ್ಣನ ಹೆಂಡತಿ ತೀರಿಕೊಂಡಳು. ಆದರಿಂದ ಅವನ ಅಣ್ಣನು ಸಂನ್ಯಾಸಿಯಾಗಿ ಮನೆಬಿಟ್ಟು ಹೊರಟುಹೋದನು. ತುಕಾರಾಮನಿಗೆ ಬಹಳ ವ್ಯಥೆಯಾಯಿತು. ಬರಗಾಲದ ಮೂಲಕ ಜನರಿಂದ ಬರತಕ್ಕ ಹಣವು ಬಾರದಾಯಿತು. ಪರರಿಗೆ ಕೊಡಬೇಕಾದ ಸಾಲವು ಹೆಚ್ಚಾಯಿತು. ಇದರಿಂದ ಅವನು ದಿವಾಳಿ ತೆಗೆ-ಯುವ ಪ್ರಸಂಗ ಬಂತು. ಆದರೂ ಧೈರ್ಯಬಿಡಲಿಲ್ಲ. ಆಗ ಕೊಂಕಣ-ದಲ್ಲಿ ಮೆಣಸಿನಕಾಯಿಯ ವ್ಯಾಪಾರವು ಬಹಳ ಚೆನ್ನಾಗಿ ನಡೆಯುತ್ತಿತ್ತು. ತುಕಾರಾಮನು ಅಲ್ಲಿಗೆ ಹೋಗಿ ಮೆಣಸಿನಕಾಯಿಯ ವ್ಯಾಪಾರ ಮಾಡಿದನು. ಆದರಲ್ಲಿ ಅವನಿಗೆ ಕೆಲವು ಲಾಭವೇನೋ ಆಯಿತು; ಆದರೆ ಠಕ್ಕಜನರು ಆ ಸಾಧುಮನುಷ್ಯನನ್ನು ವಂಚಿಸಿದರು. ಒಳ್ಳೆಯ ಬಂಗಾರವೆಂದು ಹೇಳಿ ಖೊಟ್ಟಿ ಬಂಗಾರಕೊಟ್ಟು, ಲಾಭದ ಹಣವನ್ನೆಲ್ಲ ಅವರು ಅಪಹರಿಸಿದರು. ಪಾಪ! ಒಳ್ಳೆಯ ಸ್ವಭಾವದವನಾದ ತುಕಾರಾಮನಿಗೆ ಅವರ ಮೋಸಗಾರಿಕೆ ಹೇಗೆ ತಿಳಿಯಬೇಕು?

ಕೊಂಕಣದಿಂದ ಮರಳಿ ಬಂದಬಳಿಕ ತುಕಾರಾಮನ ಹೆಂಡತಿಯು ಅವನಿಗೆ ಸಮಾಧಾನ ಹೇಳಿದಳು. ಮತ್ತೆ ವ್ಯಾಪಾರಮಾಡಲು, ಎರಡುನೂರು ರೂಪಾಯಿಗಳನ್ನು ಎರಡನೆಯವರಿಂದ ಕೈಗಡ ತಂದುಕೊಟ್ಟಳು. ಅವುಗಳಿಂದ ತುಕಾರಾಮ ಉಪ್ಪಿನ ವ್ಯಾಪಾರವನ್ನು ಪ್ರಾರಂಭಿಸಿದನು. ಇದರಲ್ಲಿ ಅವನಿಗೆ ಐವತ್ತು ರೂಪಾಯಿಗಳ ಲಾಭವಾಯಿತು. ವ್ಯಾಪಾರ ಮುಗಿಸಿಕೊಂಡು ತಿರಿಗಿ ಮನೆಗೆ ಬರುವಾಗ, ದಾರಿಯಲ್ಲಿ ಅವನಿಗೆ ಒಬ್ಬ ಬಡವನು ಗಂಟು ಬಿದ್ದನು. ಅವನ ಬಡತನವನ್ನು ಕಂಡು ತುಕಾರಾಮನು ಎಲ್ಲ ಹಣವನ್ನೂ ಅವನಿಗೆ ಕೊಟ್ಟು ಬರಿಗೈಯಿಂದ ಮನೆಗೆ ಬಂದನು. ಅದೇ ಸಮಯಕ್ಕೆ ಪುಣೆ ಪ್ರಾಂತದಲ್ಲಿ ದೊಡ್ಡ ಬರಗಾಲ ಬಿದ್ದಿತು. ಅನ್ನ ನೀರುಗಳಿಲ್ಲದೆ ಸಾವಿರಾರು ಜನರು ಒದ್ದಾಡಿ ಪ್ರಾಣಬಿಟ್ಟರು. ಅದನ್ನು ಕಂಡು ತುಕಾರಾಮನು ಮರ-

ಮರಸೆ ಮರುಗಿದನು. ದೇವರಿಗೆ ಮೊರೆಯಿಟ್ಟನು. ಅಂತಹದರಲ್ಲಿಯೆ ಅವನ ಮೊದಲಿನ ಹೆಂಡತಿ ತೀರಿಕೊಂಡಳು. ಅವಳ ತರುವಾಯ ಒಬ್ಬ ಮಗನೂ ಸತ್ತನು. ಇದರಿಂದ ತುಕಾರಾಮನಿಗೆ ಬಹಳ ಕಷ್ಟವಾಯಿತು.

ಮುಂದೆ ತುಕಾರಾಮನಿಗೆ ಪ್ರಪಂಚದ ಕಡೆಗೆ ಆಶೆಯೇ ಉಳಿಯಲಿಲ್ಲ. ತನ್ನ ಸಂಸಾರದ ಎಲ್ಲ ಭಾರವನ್ನೂ ಭಗವಂತನ ಮೇಲೆ ಹಾಕಿ ದೇವರ ಧ್ಯಾನದಲ್ಲಿ ಕಾಲಕಳೆಯಲು ನಿಶ್ಚಯ ಮಾಡಿದನು. ಮನೆಯಲ್ಲಿ ಹೆಚ್ಚಿನ ಆಸ್ತಿಯೇನೂ ಇರಲಿಲ್ಲ. ಜನರ ಕಡೆಯಿಂದ ಬರಬೇಕಾದ ಹಣದ ಲೆಕ್ಕ-ಪತ್ರಗಳು ಮಾತ್ರ ಇದ್ದುವು. ಅವುಗಳಲ್ಲಿ ತಮ್ಮನ ಪಾಲಿಗೆ ಕೆಲವು ಲೆಕ್ಕ ಪತ್ರಗಳನ್ನು ಕೊಟ್ಟು, ತನ್ನ ಪಾಲಿಗೆ ಬಂದವುಗಳನ್ನೆಲ್ಲ ಇಂದ್ರಾಯಣಿ ನದಿಯಲ್ಲಿ ಮುಳುಗಿಸಿಬಿಟ್ಟನು. ಜನರಿಗೆ ತೊಂದರೆ ಕೊಟ್ಟು ಅವರಿಂದ ಹಣವನ್ನು ವಸೂಲು ಮಾಡುವುದು ಅವನಿಗೆ ಬೇಕಾಗಿರಲಿಲ್ಲ.

ಈಗ ತುಕಾರಾಮನಿಗೆ ಯಾವ ತರದ ಚಿಂತೆಯೂ ಇರಲಿಲ್ಲ. ದೇವರ ಭಜನೆ, ಕೀರ್ತನೆ ಹಾಗು ಧ್ಯಾನಗಳಲ್ಲಿ ಎಲ್ಲ ವೇಳೆಯನ್ನು ಕಳೆಯುವನು. ಬೆಳಗಿನ ಕಾರ್ಯಗಳನ್ನು ತೀರಿಸಿಕೊಂಡು ವಿಠ್ಠಲಮಂದಿರಕ್ಕೆ ಹೋಗುವನು. ಅಲ್ಲಿ ಪೂಜೆ-ಪುರಸ್ಕಾರಗಳನ್ನು ತೀರಿಸಿಕೊಳ್ಳುವನು. ಬಳಿಕ ನದಿಯ ಆಚೆಗೆ ಇರುವ ಗುಡ್ಡದ ಶಿಖರಗಳಿಗೆ ಹೋಗಿ, ಅಲ್ಲಿ ಸಂಜೆಯವರೆಗೆ ಜ್ಞಾನೇಶ್ವರ, ನಾಮದೇವ ಇವರ ಅಭಂಗಗಳನ್ನು ಹೇಳುತ್ತ ಕುಳಿತುಕೊಳ್ಳುವನು. ಸಂಜೆ-ಯಾಗುತ್ತಲೆ ಎದ್ದು ಮನೆಗೆ ಬಂದು ಹರಿಕೀರ್ತನವನ್ನು ಮಾಡುವನು. ಅವನ ಕೀರ್ತನವನ್ನು ಕೇಳಲು ಬಹಳ ಜನರು ಬರುತ್ತಿದ್ದರು. ಅವನ ಬಾಯಿಂದ ಸುಂದರವಾದ 'ಅಭಂಗ'ಗಳು ಹೊರಡಹತ್ತಿದುವು. ವೇದ-ವೇದಾಂತದ ಅರ್ಥವೆಲ್ಲ ಆ ಅಭಂಗಗಳಲ್ಲಿ ತುಂಬಿರುತ್ತಿತ್ತು. ದೊಡ್ಡ ದೊಡ್ಡ ಜನರೂ ಪಂಡಿತರೂ ತುಕಾರಾಮನ ಅಭಂಗಗಳನ್ನು ಕೇಳಿ ಅವನನ್ನು ಕೊಂಡಾಡ-ಹತ್ತಿದರು.

ಸಂಪ್ರದಾಯದಂತೆ ನಡೆದುಕೊಳ್ಳಬೇಕು ಎನ್ನುವ ಬ್ರಾಹ್ಮಣರಿಗೆ ತುಕಾ-ರಾಮನ ಈ ರೀತಿ ಸೇರಲಿಲ್ಲ. ವೈಶ್ಯನ ಬಾಯಿಂದ ನೀತಿ ಹಾಗು ಧರ್ಮಬೋಧಕವಾದ ಅಭಂಗಗಳನ್ನು ಕೇಳುವುದು ಅಧರ್ಮವೆಂದು ಅವರು ಹೇಳಹತ್ತಿದರು. ಅಲ್ಲದೆ ತುಕಾರಾಮನನ್ನು ಊರುಬಿಟ್ಟು ಓಡಿಸಲು ಯತ್ನಿಸಹತ್ತಿದರು. ಅವರೆಲ್ಲರೂ ಊರ ಮುಖ್ಯಸ್ಥನಿಗೆ ಹೇಳಿ ತುಕಾರಾಮನು ಮುಂದೆ ಅಭಂಗ-ಗಳನ್ನು ಬರೆಯದಂತೆ ಆಜ್ಞೆಮಾಡಿಸಿದರು. ಅಲ್ಲದೆ ಅಲ್ಲಿಯವರೆಗೆ ಬರೆದ ಎಲ್ಲ ಅಭಂಗಗಳನ್ನೂ ಗಂಟುಕಟ್ಟಿ ಇಂದ್ರಾಯಣೀ ನದಿಯಲ್ಲಿ ಮುಳುಗಿಸಿ-ದರು. ಇದರಿಂದ ತುಕಾರಾಮನಿಗೆ ಅತ್ಯಂತ ದುಃಖವಾಯಿತು. ಅವನು

ಹದಿಮೂರು ದಿನಗಳವರೆಗೆ ಅನ್ನ-ನೀರುಗಳನ್ನು ತೊರೆದು ದೇವರ ಧ್ಯಾನದಲ್ಲಿ ನಿರತನಾದನು. ದೇವರು ಅವನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾದನಂತೆ. ಆ ಅಭಂಗದ ಗಂಟನ್ನು ತಿರುಗಿ ತಂದುಕೊಟ್ಟನಂತೆ. ಇದರಿಂದ ತುಕಾರಾಮನ ಕೀರ್ತಿ ಎಲ್ಲ ಕಡೆಗೆ ಹಬ್ಬಿತು. ಅವನ ವೈರಿಗಳು ಕೂಡ ಅವನಿಗೆ ಶರಣಾಗತ-ರಾದರು.

ತುಕಾರಾಮನ ಕೀರ್ತಿಯನ್ನು ಕೇಳಿ ಶಿವಾಜೀ ಮಹಾರಾಜನು ಅವನ ದರ್ಶನಕ್ಕೆ ಬಂದನು. ಆತನ ಭಗವದ್ಭಕ್ತಿ ಹಾಗು ಕೀರ್ತನೆಗೆ ಮೆಚ್ಚಿ ಅವನನ್ನು ಮನವಾರೆ ಕೊಂಡಾಡಿದನು. ತುಕಾರಾಮನು ಜನರಿಗೆ ಸುಲಭವಾಗಿ ತಿಳಿಯುವಂತೆ, ಅವರ ಭಾಷೆಯಲ್ಲಿಯೆ ಹರಿಭಜನೆ-ಹರಿಕೀರ್ತನೆಗಳನ್ನು ಮಾಡುತ್ತ ಮಹಾರಾಷ್ಟ್ರದಲ್ಲೆಲ್ಲ ಸುತ್ತಾಡಿದನು; ಅಲ್ಲದೆ ಅಲ್ಲಲ್ಲಿ ಕೆಲವು ಚಮತ್ಕಾರಗಳನ್ನೂ ಮಾಡಿತೋರಿಸಿದನು. ಹೀಗೆ ದೇವರ ನಾಮ ಸಂಕೀರ್ತನೆಯನ್ನು ಮಾಡುತ್ತ ಆನಂದದಿಂದ ಕುಣಿದಾಡುತ್ತಿರುವಾಗ ಒಂದು ದಿನ ದೇವ-ಲೋಕದಿಂದ ಬಂದ ವಿಮಾನದಲ್ಲಿ ಕುಳಿತು ತುಕಾರಾಮನು ವೈಕುಂಠಕ್ಕೆ ಹೋದನಂತೆ.

## ಅಭ್ಯಾಸನಗಳು

೧. ತುಕಾರಾಮನು ಹುಟ್ಟಿದ ಊರು ಯಾವುದು?

೨. ಇವನ ತಂದೆಯು ಯಾವ ಉದ್ಯೋಗವನ್ನು ಮಾಡುತ್ತಿದ್ದನು?

೩. ಇವನು ಯಾವ ಯಾವ ವ್ಯಾಪಾರಗಳನ್ನು ಮಾಡಿದನು?

೪. ವ್ಯಾಪಾರದಲ್ಲಿ ಇವನನ್ನು ಠಕ್ಕಜನರು ಹೇಗೆ ಮೋಸಗೊಳಿಸಿದರು?

೫. ಕರ್ಮನಿಷ್ಠ ಬ್ರಾಹ್ಮಣರು ಇವನಿಗೆ ಯಾವ ರೀತಿಯಿಂದ ಪೀಡಿಸಿದರು?

೬. ತುಕಾರಾಮನ ದರ್ಶನಕ್ಕೆ ಯಾರು ಬಂದರು?

೭. ತುಕಾರಾಮನ ಅಂತ್ಯವು ಹೇಗಾಯಿತೆಂದು ಜನರು ಹೇಳುತ್ತಾರೆ?

೮. ತುಕಾರಾಮನ ಗುಣಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೩೦. ಛತ್ರಪತಿ ಶಿವಾಜಿ

ದಿಲ್ಲಿಯಲ್ಲಿ ಮೊಗಲಬಾದಶಹ ಜಹಾಂಗೀರನು ರಾಜ್ಯವಾಳುತ್ತಿದ್ದನು. ದಕ್ಷಿಣದಲ್ಲಿಯೂ ಬೇರೆ ಬೇರೆ ಮುಸಲ್ಮಾನ ಅರಸರ ಆಳಿಕೆಯೇ ನಡೆದಿತ್ತು. ವಿಜಯನಗರದ ಸಾಮ್ರಾಜ್ಯವು ಹಾಳಾಗಿ ಹೋಗಿತ್ತು. ಆಗ ಭಾರತದ ತುಂಬೆಲ್ಲ ಮುಸಲ್ಮಾನರ ಅಧಿಕಾರವೇ ಅಧಿಕಾರ! ಹಿಂದುಗಳನ್ನು ಯಾರೂ ಕೇಳುತ್ತಿದ್ದಿಲ್ಲ. ಹಿಂದು ಧರ್ಮ-ಮತಗಳಿಗೆ ಸರಿಯಾದ ಸಂರಕ್ಷಣೆಯಿರಲಿಲ್ಲ. ಇಂತಹ ಸಮಯದಲ್ಲಿ, ಹಿಂದುಧರ್ಮದ ಸಂರಕ್ಷಣೆಯ ಗುರಿಯನ್ನಿಟ್ಟುಕೊಂಡು ಹಿಂದುರಾಜ್ಯವನ್ನು ಕಟ್ಟಿದವನು ಶಿವಾಜಿ ಮಹಾರಾಜನು.

ಶಿವಾಜಿಯು ಭೋಸಲೆ ಮನೆತನದವನು. ಇವನ ತಂದೆ ಶಹಾಜಿ ಭೋಸಲೆ, ತಾಯಿ ಜೀಜಾಬಾಯಿ. ಶಹಾಜಿಯು ಪುಣೆಯ ಬಳಿ ಒಂದು ಸಣ್ಣ ಜಹಗೀರಿನ ಒಡೆಯನಾಗಿದ್ದನು. ಆದರೂ ಅವನು ಕೆಲವು ಕಾಲ ಅಹಮ್ಮದನಗರದ ಬಾದಶಹರಲ್ಲಿ ನೌಕರಿ ಮಾಡುತ್ತಿದ್ದನು; ಆ ಮೇಲೆ ವಿಜಾಪುರ ಬಾದಶಹರ ಸೈನ್ಯದಲ್ಲಿ ಅಧಿಕಾರಿಯಾಗಿದ್ದನು. ಶಹಾಜಿಯು ತನ್ನ ಹೆಂಡತಿ ಜೀಜಾಬಾಯಿಯನ್ನು ಶಿವನೇರಿ ಕೋಟೆಯಲ್ಲಿ ಇರಿಸಿ, ತಾನೊಬ್ಬನೇ ವಿಜಾಪುರದಲ್ಲಿ ಇರುತ್ತಿದ್ದನು. ಈ ದಂಪತಿಗಳ ಹೊಟ್ಟೆಯಿಂದ ಶಿವಾಜಿಯು ಕ್ರಿ. ಶ. ೧೬೨೭ರಲ್ಲಿ ಹುಟ್ಟಿದನು. ಅವನು ಹುಟ್ಟಿದುದು ಶಿವನೇರಿಯಲ್ಲಿಯೆ. ಅದು ಶಹಾಜಿಯ ಜಹಗೀರಿನ ಊರು.

ಚಿಕ್ಕ ವಯಸ್ಸಿನಲ್ಲಿಯೆ ಶಿವಾಜಿಗೆ ಜೀಜಾಬಾಯಿಯಿಂದ ಒಳ್ಳೆಯ ಶಿಕ್ಷಣವು ದೊರೆಯಿತು. ಅವಳು ಚಿಕ್ಕ ಶಿವಾಜಿಗೆ ರಾಮಾಯಣ-ಮಹಾಭಾರತಗಳಲ್ಲಿಯ ವೀರಪುರುಷರ ಕತೆಗಳನ್ನು ಹೇಳುತ್ತಿದ್ದಳು. ಕತೆಗಳನ್ನು ಕೇಳಿ ಆ ಬಾಲಕನು, ತಾನೂ ಅವರಂತೆ ವೀರನಾಗಬೇಕೆಂದು ಇಚ್ಛಿಸುತ್ತಿದ್ದನು. ಅವನು ಗುರು-ಹಿರಿಯರ ಮಾತುಗಳನ್ನು ಎಂದೂ ಮೀರುತ್ತಿರಲಿಲ್ಲ. ದೇವರಲ್ಲಿ ಭಕ್ತಿಯುಳ್ಳವನಾಗಿದ್ದನು. ನಿತ್ಯವೂ ತಾಯಿಯೊಡನೆ ದೇವರಿಗೆ ಹೋಗಿ ಬರುತ್ತಿದ್ದನು. ಕುಲದೇವತೆಯಾದ ಅಂಬಾಭವಾನಿಯಲ್ಲಿ ಶಿವಾಜಿಗೆ ಬಹಳ ಭಕ್ತಿ-ವಿಶ್ವಾಸ.

ತಾಯಿಯ ಕೈದುತ್ತಿನೊಂದಿಗೆ ಶಿವಾಜಿಗೆ ಒಳ್ಳೆಯ ಶಿಕ್ಷಣವೇ ದೊರೆಯಿತು. ಆದರೂ ಅವನಿಗೆ ಉಳಿದ ವಿಷಯಗಳನ್ನು ಕಲಿಸಲು ಶಹಾಜಿಯು, ದಾದಾಜಿಕೊಂಡದೇವ ಎಂಬವನನ್ನು ನೇಮಿಸಿದನು. ಕೊಂಡದೇವನು ಶಿವಾಜಿಗೆ ಕುದುರೆ ಹತ್ತುವುದನ್ನೂ, ಕತ್ತಿ ತಿರುವುವುದನ್ನೂ, ದಾಂಡಪಟ್ಟಿ

ಆಡುವುದನ್ನೂ ಕಲಿಸಿದನು. ಅದರೊಂದಿಗೆ ಓದು-ಬರೆಹಗಳನ್ನೂ ರಾಜ್ಯ-ಭಾರದ ರೀತಿಯನ್ನೂ ಹೇಳುತ್ತಿದ್ದನು.

ಚಿಕ್ಕತನದಿಂದಲೂ ಶಿವಾಜಿಯಲ್ಲಿ ಸ್ವಾಭಿಮಾನವೂ ಹಿಂದುಧರ್ಮದ ಬಗೆಗೆ ಪ್ರೇಮವೂ ತುಂಬಿತುಳುಕುತ್ತಿದ್ದುವು. ಒಂದು ಸಲ ಬಾಲಕ ಶಿವಾಜಿಯು ತಂದೆಯೊಡನೆ ವಿಜಾಪುರಕ್ಕೆ ಹೋದಾಗ, ಕಟುಕರು ಆಕಳನ್ನು ಕೊಲ್ಲುತ್ತಿರುವುದನ್ನು ನೋಡಿದನು. ಆಕಳೆಂದರೆ ಪವಿತ್ರದೇವತೆಯೆಂದು ಶಿವಾಜಿಯು ಭಾವಿಸಿದ್ದನು. ಆದುದರಿಂದ ಅವನು ಕಟುಕರೊಡನೆ ಜಗಳ-ವಾಡಿ, ಕೊಲ್ಲುತ್ತಿದ್ದ ಆಕಳನ್ನು ಬಿಡಿಸಿದನು. ದರ್ಬಾರಿಗೆ ಹೋದಾಗ, ಬಾದಶಹನನ್ನು ನಮಸ್ಕರಿಸಲು ತಂದೆಯು ಶಿವಾಜಿಗೆ ಹೇಳಿದನು. ಸ್ವಾಭಿ-ಮಾನಿಯಾದ ಶಿವಾಜಿಯು ಅದಕ್ಕೆ ಒಪ್ಪಲಿಲ್ಲ. 'ಅನ್ಯಧರ್ಮದ ರಾಜನನ್ನು ನಾನೆಂದೂ ಮನ್ನಿಸಲಾರೆ' ಎಂದು ಖಂಡಿತವಾಗಿ ಹೇಳಿದನು. ಶಿವಾಜಿಯ ಈ ವರ್ತನವು ಬಾದಶಹನಿಗೆ ಸಹನವಾಗಲಿಲ್ಲ. ಅವನು ತುಂಬ ಕೋಪ-ಗೊಂಡನು. ಇದರಿಂದ ಶಹಾಜಿಯು ಶಿವಾಜಿಯನ್ನು ತಿರುಗಿ ಶಿವನೇರಿಗೆ ಕಳುಹಬೇಕಾಯಿತು.



ವಿಜಯಯಾತ್ರೆಗೆ ಹೊರಟ ಶಿವಾಜಿಯು

ಅಲ್ಲಿ ಶಿವಾಜಿ ಸುಮ್ಮನೆ ಕುಳಿತುಕೊಳ್ಳಲಿಲ್ಲ. ತನ್ನ ಜನರ ಸ್ಥಿತಿಗತಿಗಳನ್ನು ನೋಡಿದನು. "ನಾವಿನ್ನು ಮುಸಲ್ಮಾನರ ಅಧೀನದಲ್ಲಿರಬಾರದು. ನಮ್ಮ ಸ್ವತಂತ್ರರಾಜ್ಯವನ್ನು ಕಟ್ಟಬೇಕು. ಹಿಂದುಧರ್ಮವನ್ನು ಸಂರಕ್ಷಿಸಬೇಕು"

ಎಂದು ಸ್ನಿಶ್ಚಯಮಾಡಿದನು. ತನ್ನ ಬಾಲ್ಯದ ಗೆಳೆಯರನ್ನೆಲ್ಲ ಕೂಡಿಸಿದನು. ಅವರೆಲ್ಲರಿಗೆ ಶಿವಾಜಿಯಲ್ಲಿ ತುಂಬ ವಿಶ್ವಾಸ. ಅವನು ಹೇಳಿದ ಕೆಲಸಗಳನ್ನು ಮಾಡಲು ಅವರು ಸಿದ್ಧರಾದರು. ಶಿವಾಜಿಯು ಸುತ್ತುಮುತ್ತಲಿನ ಗುಡ್ಡ-ಗಾಡಿನಲ್ಲಿ ಸುತ್ತಾಡಿದನು. ಅಲ್ಲಿಯ ದಾರಿಗಳನ್ನೂ ಕೋಟೆ-ಕಂದರಗಳನ್ನೂ ನೋಡಿಕೊಂಡನು. ಅಲ್ಲಿ ವಾಸಿಸುವ ಮಾವಳೆಜನರ ದಂಡನ್ನು ಕೂಡಿಸಿದನು. ಈ ದಂಡಿನ ಸಹಾಯದಿಂದ, ಆ ಗುಡ್ಡಗಾಡಿನಲ್ಲಿರುವ ಕೋಟೆಗಳನ್ನು ಒಂದೊಂದಾಗಿ ವಶಪಡಿಸಿಕೊಂಡನು. ಅಲ್ಲಲ್ಲಿಗೆ ದಂಡನ್ನು ಇಟ್ಟು ಕೋಟೆಗಳನ್ನು ಬಲಪಡಿಸಿದನು. ಬಳಿಕ ಹಳ್ಳಿ-ಪಟ್ಟಣಗಳನ್ನು ಗೆದ್ದುಕೊಳ್ಳಲಿಕ್ಕೆ ಪ್ರಾರಂಭಿಸಿದನು.

ಆಗ ವಿಜಾಪುರದ ಸುಲ್ತಾನನು ಕಣ್ಣುತೆರೆದನು. ಶಿವಾಜಿಯ ಸದ್ದನ್ನು ಅಡಗಿಸಬೇಕೆಂದು ಅವನು ಬಹಳ ಪ್ರಯತ್ನಪಟ್ಟನು; ಆದರೆ ಹಂಚಿಕೆಗಾರನಾದ ಶಿವಾಜಿಯು ಅವನಿಗೆ ಮಣಿಯಲಿಲ್ಲ. ತಾನಾಜಿ ಮಾಲುಸುರೆ, ಏಸಾಜಿ ಕಂಕ, ನೇತಾಜಿ ಪಾಲಕರ, ಬಾಜಿ ಪ್ರಭು ಪಾಲಸ್ಕರ ಮುಂತಾದ—ಜೀವಕ್ಕೆ ಜೀವ ಕೊಡುವ—ವೀರರ ಸಹಾಯದಿಂದ ತೋರಣಗಡ, ಸಿಂಹಗಡ, ಪುರಂದರಗಡ, ಪ್ರತಾಪಗಡ ಮುಂತಾದ ಕೋಟೆಗಳನ್ನು ಗೆದ್ದುಕೊಂಡನು. ಹೊಸತಾಗಿ ರಾಯಗಡ ಎಂಬ ಭದ್ರವಾದ ಕೋಟೆಯನ್ನು ಕಟ್ಟಿಸಿ, ಅದನ್ನೇ ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡನು.

ಶಿವಾಜಿಯ ಪಿರಾಟವನ್ನು ಕಂಡು, ವಿಜಾಪುರದ ಸುಲ್ತಾನನು ಸಂತಾಪಗೊಂಡನು. ಆತನ ಪರಾಕ್ರಮದ ಚಟುವಟಿಕೆಗಳನ್ನು ತಗ್ಗಿಸಬೇಕೆಂದು ಸುಲ್ತಾನನು ಆಗಾಗ ಸೈನ್ಯದೊಂದಿಗೆ ಬೇರೆ ಬೇರೆ ಸರದಾರರನ್ನು ಕಳುಹಿದನು. ಆದರೆ ಅವರೆಲ್ಲ ಶಿವಾಜಿಯಿಂದ ಒಂದಿಲ್ಲೊಂದು ಬಗೆಯ ಏಟನ್ನು ತಿಂದು, ಅಪಜಯಕ್ಕೆ ಈಡಾಗಿ ಹಿಂದಿರುಗಬೇಕಾಯಿತು. ಇದರಿಂದ ನಿರಾಶೆಗೊಂಡ ಸುಲ್ತಾನನು ಮುಂದೆ ಶಿವಾಜಿಯ ಗೋಜಿಗೆ ಬರುವದನ್ನೇ ಬಿಟ್ಟುಬಿಟ್ಟನು.

ಬರುಬರುತ್ತ ಶಿವಾಜಿಯು ಮೊಗಲರ ರಾಜ್ಯವನ್ನು ಹೊಕ್ಕು ಅಲ್ಲಿ ಉಪಟಳ ನಡೆಸಿದನು. ಅದನ್ನು ಕಂಡು ಔರಂಗಜೇಬನಿಗೆ ಸಿಟ್ಟುಬಂದಿತು. ಅವನು ಶಿವಾಜಿಯನ್ನು ಹಿಡಿತರಬೇಕೆಂದು ಅಪ್ಪಣೆಕೊಟ್ಟು, ಶಾಹಿಸ್ತೇಖಾನ-ನೆಂಬ ಸರದಾರನನ್ನು ಕಳುಹಿದನು. ಖಾನನು ಪುಣೆಗೆ ಬಂದು ಬೀಡುಬಿಟ್ಟನು. ಶಿವಾಜಿಯು ನಿಬ್ಬಣದ ಜನರ ಸೋಗಿನಲ್ಲಿ ತನ್ನ ವಿಶ್ವಾಸದ ಸೈನಿಕರೊಂದಿಗೆ ಪುಣೆಯಲ್ಲಿ ಹೊಕ್ಕನು. ರಾತ್ರಿಯಲ್ಲಿ ಶಾಹಿಸ್ತೇಖಾನನನ್ನು ಕೊಲ್ಲಹೋದನು. ಆದರೆ ಅದೇ ಸಮಯದಲ್ಲಿ ಖಾನನು ಎಚ್ಚತ್ತು ಜಾರಿಕೊಂಡನು. ಅವನ

ಕೈಬೆರಳುಗಳು ಮಾತ್ರ ಶಿವಾಜಿಯ ಖಡ್ಗಕ್ಕೆ ತುತ್ತಾದುವು. ಖಾನನು ಹೆದರಿ ದಿಲ್ಲಿಗೆ ಓಡಿಹೋದನು.

ಬಳಿಕ ಶಿವಾಜಿಯು ಮೊಗಲರ ವಶದಲ್ಲಿದ್ದ ಸೂರತನಗರವನ್ನು ಸುಲಿದನು. ಔರಂಗಜೇಬನು ಬಹಳ ಸಿಟ್ಟಾಗಿ, ಜಯಸಿಂಗ ಮತ್ತು ದಿಲೇರಖಾನ ಎಂಬ ಸರದಾರರನ್ನು ಕಳುಹಿದನು. ಅವರು ಶಿವಾಜಿಯ ಬಹಳ ಕೋಟೆಗಳನ್ನು ಗೆದ್ದರು. ಆದುದರಿಂದ ಧೂರ್ತನಾದ ಶಿವಾಜಿಯು ಅವರೊಡನೆ ಒಪ್ಪಂದ ಮಾಡಿಕೊಂಡನು. ಮುಂದೆ ಅವನು ಮೊಗಲ ದರಬಾರಕ್ಕೆ ಭೆಟ್ಟಿ ಕೊಡಲು ಆಗ್ರಾಪಟ್ಟಣಕ್ಕೆ ಹೋಗಬೇಕಾಯಿತು. ಅಲ್ಲಿ ಔರಂಗಜೇಬನು ಶಿವಾಜಿಯನ್ನು ಹಿಡಿದು ಸೆರೆಯಲ್ಲಿಟ್ಟನು. ಆಗ ಶಿವಾಜಿಯು ತಂತ್ರದಿಂದ ಮಿಠಾಯಿಯ ಬುಟ್ಟಿಯಲ್ಲಿ ಕುಳಿತು ಪಾರಾದನು. ಮುಂದೆ ಔರಂಗಜೇಬನೂ ಶಿವಾಜಿಯ ಗೊಡವೆಗೆ ಹೋಗಲಿಲ್ಲ.



ಶಿವಾಜಿಯು ಮಲ್ಲವ್ವ ದೇಸಾಯಿಣಿಯನ್ನು ಸನ್ಮಾನಿಸುವನು

ಶಿವಾಜಿಯು ಸಾಕಷ್ಟು ಪ್ರದೇಶವನ್ನು ಕೈವಶಮಾಡಿಕೊಂಡನು. ಭಾಂಡಾರದಲ್ಲಿ ಬೇಕಾದಷ್ಟು ಹಣವೂ ಕೂಡಿತು. ಜನರೆಲ್ಲರ ಪ್ರೀತಿ-ವಿಶ್ವಾಸಗಳನ್ನೂ ಅವನು ಪಡೆದಿದ್ದನು. ಆದುದರಿಂದ ಅವನು ತನ್ನದೇ ಆದ ಒಂದು ರಾಜ್ಯವನ್ನು ಸ್ಥಾಪಿಸಿಬಿಟ್ಟನು. ಕ್ರಿ. ಶ. ೧೬೭೪ರಲ್ಲಿ, ರಾಯಗಡದಲ್ಲಿ "ಛತ್ರಪತಿ" ಎಂಬ ಬಿರುದಿನಿಂದ ಪಟ್ಟಕ್ಕೆ ಕುಳಿತನು. ಅವನು ಆಡಳಿತದ ವ್ಯವಸ್ಥೆಗಾಗಿ ಎಂಟು ಜನ ಮಂತ್ರಿಗಳನ್ನು ನೇಮಿಸಿಕೊಂಡನು. ಸ್ವಾಮಿ

ರಾಮದಾಸರು ಶಿವಾಜಿಯ ಗುರುಗಳಾಗಿದ್ದರು. ಶಿವಾಜಿಯ ರಾಜ್ಯವಾಡ ಳಿತವು ಜನರಿಗೆ ಬಹಳ ಸುಖಕರವಾಗಿತ್ತು.

ಶಿವಾಜಿಯು ಒಮ್ಮೆ ದಕ್ಷಿಣಕ್ಕೆ ದಂಡೆತ್ತಿ ಬಂದಿದ್ದನು. ದಂಡಯಾತ್ರೆಯನ್ನು ಮುಗಿಸಿ ಹಿಂದಿರುಗಿ ಹೋಗುವಾಗ, ಅವನ ಸೈನಿಕರು ಬೆಳವಡಿ ಕೋಟೆಗೆ ಮುತ್ತಿಗೆ ಹಾಕಿದರು. ಆಗ ಬೆಳವಡಿಯಲ್ಲಿ ಈಶಪ್ರಭು ದೇಸಾ-ಯಿಯು ಆಳುತ್ತಿದ್ದನು. ಈ ಮುತ್ತಿಗೆಯಲ್ಲಿ ಈಶಪ್ರಭುವು ಮಡಿದನು. ಕೂಡಲೆ ಅವನ ಹೆಂಡತಿ ಮಲ್ಲವ್ವ ದೇಸಾಯಿಣಿಯು ಮರಾಠರಿಗೆ ಎದುರಾಳಿಯಾಗಿ ನಿಂತು ಕಾದಿದಳು. ಕನ್ನಡ ಕೇಸರಿಣಿಯ ಹೊಡೆತಕ್ಕೆ ಮರಾಠರ ದಂಡಿನವರು ಪಟಪಟನೆ ನೆಲಕ್ಕೆ ಬಿದ್ದರು. ಇದನ್ನು ಕೇಳಿ ಶಿವಾಜಿಗೆ ಅಚ್ಚರಿಯಾಯಿತು. ಅದಕ್ಕಾಗಿ ಅವನು ಮತ್ತೆ ಹೆಚ್ಚು ಸೈನಿಕರನ್ನು ಮುಂದೆ ಕಳುಹಿದನು. ಮರಾಠರ ದೊಡ್ಡ ದಂಡಿನೊಡನೆ ಕಾದಾಡುವಾಗ ಮಲ್ಲವ್ವನು ಗಾಯಗೊಂಡು ಸೆರೆಸಿಕ್ಕಳು. ಮರಾಠಾ ಸರದಾರನೊಬ್ಬನು ಆಕೆಯನ್ನು ಶಿವಾಜಿಯ ಮುಂದೆ ಒಯ್ದು ನಿಲ್ಲಿಸಿದನು. ಆಕೆಯ ಶೌರ್ಯ-ಸಾಹಸಗಳಿಗೆ ಮೆಚ್ಚಿ ಶಿವಾಜಿ ಮಹಾರಾಜನು, ಆಕೆಗೆ ಉಡುಗೊರೆಗಳನ್ನು ಕೊಟ್ಟು ಮರ್ಯಾದೆಯಿಂದ ಕಳುಹಿದನು.

ಶಿವಾಜಿಯು ಸಣ್ಣ ಸರದಾರನ ಮಗನಾದರೂ ತನ್ನ ಶಕ್ತಿ-ಸಾಹಸಗಳಿಂದ ಸ್ವತಂತ್ರ ರಾಜನಾದನು. ಅವನು ಬಡ-ಬಗ್ಗರ ಮೇಲೆ ಬಹಳ ಅಂತಃಕರಣ-ವುಳ್ಳವನಾಗಿದ್ದನು. ಹಿಂದುಧರ್ಮವನ್ನು ತುಂಬ ಗೌರವಿಸುತ್ತಿದ್ದನು. ಸ್ತ್ರೀಯ-ರನ್ನು ಮನ್ನಣೆಯಿಂದ ಕಾಣುತ್ತಿದ್ದನು. ಅವನಿಗೆ ಸಂಭಾಜಿ, ರಾಜಾರಾಮ ಎಂಬ ಇಬ್ಬರು ಮಕ್ಕಳಿದ್ದರು. ಕ್ರಿ. ಶ. ೧೬೮೦ರಲ್ಲಿ, ಕಾಲಿಗೆ ಮಂಡೆಯಾಗಿ ಅವನು ಮರಣಹೊಂದಿದನು. ಶಿವಾಜಿಯ ಕೆಚ್ಚೆದೆಯೂ ದೃಢನಿಶ್ಚಯವೂ ಯಾವಾಗಲೂ ನಮ್ಮ ಮನದೆದುರು ಇರಬೇಕು.

## ಅಭ್ಯಸನಗಳು

೧. ಶಿವಾಜಿಯ ತಂದೆ-ತಾಯಿಗಳು ಯಾರು?
೨. ಜೀಜಾಬಾಯಿಯು ಶಿವಾಜಿಗೆ ಚಿಕ್ಕಂದಿನಲ್ಲಿ ಎಂತಹ ಶಿಕ್ಷಣವನ್ನು ಕೊಟ್ಟಳು?
೩. ಶಿವಾಜಿಯ ಜೀವದ ಗೆಳೆಯರು ಯಾರು?
೪. ಶಿವಾಜಿಯು ಅಫಝುಲ್‌ಖಾನನನ್ನು ಹೇಗೆ ಕೊಂದನು?
೫. ಶಿವಾಜಿಯು ಶಾಹಿಸ್ತೇಖಾನನನ್ನು ದಿಲ್ಲಿಗೆ ಹೇಗೆ ಓಡಿಸಿದನು?
೬. ಶಿವಾಜಿಯು ಔರಂಗಜೇಬನ ಸೆರೆಯಿಂದ ಹೇಗೆ ಪಾರಾಗಿ ಬಂದನು?
೭. ಶಿವಾಜಿಯು ಬೆಳವಡಿಯ ಮಲ್ಲವ್ವನಿಗೆ ಏಕೆ ಉಡುಗೊರೆಮಾಡಿದನು?
೮. ಶಿವಾಜಿಯ ಗುಣಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೩೧. ಹಿರಿಯ ಬಾಜೀರಾಯ

ಶಿವಾಜಿಯ ಮೊಮ್ಮಗ ಶಾಹು ಮಹಾರಾಜನು ಸಾತಾರೆಯಲ್ಲಿ ಆಳುತ್ತಿದ್ದಾಗ, ಬಾಳಾಜಿ ವಿಶ್ವನಾಥ ಭಟ ಎಂಬವನು ಅವನ ಪೇಶವೆಯಾಗಿದ್ದನು. ಪೇಶವೆ ಎಂದರೆ ಮುಖ್ಯಮಂತ್ರಿ.

ಬಾಳಾಜಿ ವಿಶ್ವನಾಥನಿಗೆ ಇಬ್ಬರು ಗಂಡುಮಕ್ಕಳಿದ್ದರು. ಹಿರಿಯವನ ಹೆಸರು ಬಾಜೀರಾಯ, ಚಿಕ್ಕವನ ಹೆಸರು ಚಿಮಾಜಿ. ಇವರು ಒಬ್ಬರನ್ನೊಬ್ಬರು ರಾಮ-ಲಕ್ಷ್ಮಣರಂತೆ ಪ್ರೀತಿಸುತ್ತಿದ್ದರು. ಇಬ್ಬರೂ ಕೂಡಿಯೆ ಇರುತ್ತಿದ್ದರು. ಕೂಡಿಯೆ ಓದು-ಬರೆಹ ಕಲಿಯುತ್ತಿದ್ದರು. ಇವರಲ್ಲಿ ಬಾಜೀರಾಯನು ಬಲು ಸುಂದರನಿದ್ದನು; ಬುದ್ಧಿವಂತನೂ ಆಗಿದ್ದನು.



ಯುದ್ಧವೀರ ಬಾಜೀರಾಯ

ಬಾಜೀರಾಯನು ಚಿಕ್ಕಂದಿನಲ್ಲಿಯೆ ಯುದ್ಧವಿದ್ಯೆಗಳನ್ನು ಕಲಿತನು. ಅವನು ನಿತ್ಯವೂ ಬಿಡದೆ ವ್ಯಾಯಾಮ ಮಾಡುತ್ತಿದ್ದನು. ಪ್ರತಿದಿನ ಸಾವಿರದ ವರೆಗೆ ಸಾಮು-ಬೈಠಕು ತೆಗೆಯುತ್ತಿದ್ದನು. ಕುದುರೆಯನ್ನು ಹತ್ತುವುದು, ಕುಸ್ತಿಯಾಡುವುದು ಅವನ ಪ್ರೀತಿಯ ವಿಷಯಗಳಾಗಿದ್ದುವು. ಹುರಿಕಟ್ಟಾದ ಶರೀರ, ಮೇಲಾಗಿ ರೂಪವಂತ; ಎಂದಮೇಲೆ ಕೇಳುವುದೇನು! ಅವನನ್ನು ನೋಡಿದವರೆಲ್ಲರೂ ಅವನ ಪ್ರಭಾವಕ್ಕೆ ಒಳಗಾಗುತ್ತಿದ್ದರು. ಅವನು ಮಾತ

ನೋಡಹತ್ತಿದರೆ, ಜನರು ನಿಂತು ಕೇಳಿ ಹೋಗುತ್ತಿದ್ದರು. ಬಾಜೀರಾಯನು ಬೆಳೆದು ದೊಡ್ಡವನಾಗಲು ಅವನ ರೂಪ, ಬುದ್ಧಿವಂತಿಕೆ ಹಾಗು ಶೂರತನ ಇವುಗಳ ಕೀರ್ತಿಯು ಸುತ್ತಲೂ ಹಬ್ಬಿತು.

ಬಾಳಾಜಿ ವಿಶ್ವನಾಥನು ತೀರಿಕೊಂಡಾಗ, ಬಾಜೀರಾಯನು ಇಪ್ಪತ್ತೆರಡು ವಯಸ್ಸಿನವನಿದ್ದನು. ಶಾಹುಮಹಾರಾಜನು ಮೊದಲಿನಿಂದಲೂ ಅವನನ್ನು ಪ್ರೀತಿಸುತ್ತಿದ್ದನು. ಆದುದರಿಂದಲೇ 'ಚಿಕ್ಕವನಾದರೂ ಪೇಶ್ವೆಪದಕ್ಕೆ ಇವನೇ ಯೋಗ್ಯನು' ಎಂದು, ಅವನು ಬಾಜೀರಾಯನನ್ನು ಪೇಶ್ವೆಯನ್ನಾಗಿ ಮಾಡಿ ಕೊಂಡನು.

ಬಾಜೀರಾಯನು ಪೇಶ್ವೆಯಾದ ಬಳಿಕ ತನ್ನ ಜೀವಮಾನವನ್ನೆಲ್ಲ ಯುದ್ಧಮಾಡುವುದರಲ್ಲಿಯೆ ಕಳೆದನು. ಅವನು ಮರಾಠರ ರಾಜ್ಯವನ್ನು ಬೆಳಿಸಬೇಕೆಂದು ನಿಶ್ಚಯಿಸಿದನು. 'ಮೊದಲು ದಿಲ್ಲಿಯ ಮೊಗಲ ಬಾದಶಹನ ಮೇಲೆ ದಾಳಿಮಾಡಬೇಕು, ಅವನನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರೆ ಉಳಿದೆಲ್ಲ ಚಿಕ್ಕ ಚಿಕ್ಕ ರಾಜರು ತಾವಾಗಿಯೇ ಶರಣು ಬರುವರು' ಎಂದು ಅವನು ವಿಚಾರಮಾಡಿದನು. ಆ ಸಂಗತಿಯನ್ನು ಎಲ್ಲ ಮರಾಠಾ ಸರದಾರ ಮಂಡಳದವರಿಗೆ ತಿಳುಹಿದನು. ಅವರಲ್ಲಿ ಕೆಲವರು ವಿರೋಧವನ್ನು ತೋರಿಸಿದರು: ಅವರು ಬಾಜೀರಾಯನಿಗೆ ಸಹಾಯವನ್ನು ಮಾಡದೆ, ಅಡ್ಡಿ-ಆತಂಕಗಳನ್ನು ಒಡ್ಡಹತ್ತಿದರು. ಆದುದರಿಂದ ಬಾಜೀರಾಯನು ಕೆಲವರನ್ನು ಹೊರಗೆ ಹಾಕಿದನು; ಮತ್ತು ತನ್ನ ನಂಬುಗೆಯ ಹಾಗು ಸ್ವಾಮಿಭಕ್ತ ಶೂರರಿಗೆ ಜಹಗೀರುಗಳನ್ನು ಕೊಟ್ಟು ಅವರ ಸಹಾಯವನ್ನು ಪಡೆದನು.

ಹೈದರಾಬಾದದ ನಿಜಾಮ ಉಲ್ಮುಲ್ಕ ಎಂಬವನು, ಬಾಜೀರಾಯನ ಪ್ರತಿಯೊಂದು ಕಾರ್ಯದಲ್ಲಿಯೂ ತೊಂದರೆಕೊಡುತ್ತಿದ್ದನು. ಬಾಜೀರಾಯನಿಗೆ ಗೊತ್ತಿಲ್ಲದಂತೆಯೆ ಅವನು, ಶಾಹುಮಹಾರಾಜನಿಂದ ಚೌಥಾಯಿ ಹಾಗು ಸರದೇಶಮುಖಿಗಳನ್ನು 'ಸೂಟು' ಬಿಡಿಸಿಕೊಂಡಿದ್ದನು. ಈ ಸಂಗತಿಯು ಬಾಜೀರಾಯನಿಗೆ ತಿಳಿಯಿತು. ಅವನು ನಿಜಾಮನ ಮೇಲೆ ದಂಡೆತ್ತಿ ಹೋದನು. **ಪಾಲಖೇಡ** ಎಂಬಲ್ಲಿ ಇಬ್ಬರ ನಡುವೆ ಯುದ್ಧವಾಯಿತು. ತನಗೆ ಸೋಲುಂಟಾಗುವುದೆಂದು ನಿಶ್ಚಯಿಸಿ ನಿಜಾಮನು, ಬಾಜೀರಾಯನಿಗೆ ಶರಣು ಬಂದನು. ಈ ವಿಜಯದಿಂದ ಬಾಜೀರಾಯನ ಕೀರ್ತಿ ಎಲ್ಲ ಕಡೆಗೂ ಹಬ್ಬಿತು.

ಉತ್ತರಭಾರತದಲ್ಲಿ ಬುಂದೇಲಖಂಡ ಎಂಬ ಹೆಸರಿನದೊಂದು ಪ್ರಾಂತವಿದೆ. ಹಿಂದೆ ಅಲ್ಲಿ ಛತ್ರಸಾಲನೆಂಬ ಅರಸನು ರಾಜ್ಯವಾಳುತ್ತಿದ್ದನು. ದಿಲ್ಲಿಯ ಬಾದಶಹನು ಬಂಗಷ ಎಂಬ ತನ್ನ ಸರದಾರನನ್ನು ಅವನ ಮೇಲೆ

ದಂಡೆತ್ತಿ ಕಳುಹಿದನು. ಆಗ ಛತ್ರಸಾಲನು ಬಾಜೀರಾಯನಿಗೆ ಪತ್ರ ಬರೆದು, ಬುಂದೇಲಖಂಡದ ಮರ್ಯಾದೆಯನ್ನು ಉಳುಹಬೇಕೆಂದು ಬೇಡಿಕೊಂಡನು. ಕೂಡಲೆ ಬಾಜೀರಾಯನು ಅವನ ಸಹಾಯಕ್ಕೆ ಹೊರಟನು. ಬಾಜೀ-ರಾಯನು ಬರುವ ಸುದ್ದಿಯನ್ನು ಕೇಳಿ ಬಂಗಷನು ಹೆದರಿದನು. ಇಬ್ಬರ ನಡುವೆ ಘನಘೋರ ಯುದ್ಧವಾಯಿತು. ಈ ಯುದ್ಧದಲ್ಲಿ ಬಂಗಷನು ಸೋತು ಓಡಿಹೋದನು. ಮುಪ್ಪಿನವನಾದ ಛತ್ರಸಾಲನಿಗೆ ಈ ಜಯದ ಸುದ್ದಿಯನ್ನು ಕೇಳಿ ಆನಂದವಾಯಿತು. ಅವನು ತನ್ನ ರಾಜ್ಯದಲ್ಲಿಯ ⅓ನೆಯ ಭಾಗವನ್ನು ಬಾಜೀರಾಯನಿಗೆ ಕೊಟ್ಟನು.

ಬಳಿಕ ಬಾಜೀರಾಯನು ಮಾಳವಾ ಪ್ರಾಂತದ ಮೇಲೆ ದಾಳಿಯನ್ನು ಮಾಡಿದನು. ಅದು ಒಳ್ಳೆಯ ಬೆಳೆಯುಳ್ಳ ಪ್ರಾಂತವಾಗಿತ್ತು. ಅಲ್ಲಿ ರಾಜಾ ಗಿರಿಧರ ಎಂಬವನು ಮೊಗಲರ ಸುಭೇದಾರನಾಗಿ ಆಳುತ್ತಿದ್ದನು. ಬಾಜೀ ರಾಯನು ಅವನನ್ನು ಸೋಲಿಸಿ, ಮಾಳವ ಪ್ರಾಂತವನ್ನು ವಶಪಡಿಸಿಕೊಂಡನು. ಈ ಯುದ್ಧದಲ್ಲಿ ರಾಣೋಜಿ ಸಿಂದೆಯು ಪರಾಕ್ರಮವನ್ನು ತೋರಿಸಿದ್ದರಿಂದ, ಅವನಿಗೆ ಗ್ವಾಲೇರವು ಜಹಗೀರಾಗಿ ದೊರೆಯಿತು. ಮಲ್ಹಾರರಾವ ಹೋಳ ಕರ ಎಂಬ ಸರದಾರನಿಗೆ ಇಂದೂರು ಜಹಗೀರಾಗಿ ಸಿಕ್ಕಿತು; ಉದಾಜಿ ಪವಾರನಿಗೂ ಮಾಳವದಲ್ಲಿ ಒಂದು ಚಿಕ್ಕ ಜಹಗೀರು ದೊರೆಯಿತು. ಮುಂದೆ ಬಾಜೀರಾಯನು ದಿಲ್ಲಿಯ ಮೇಲೆ ದಂಡೆತ್ತಿ ಹೋದನು. ಆಗ ದಿಲ್ಲಿಯ ಬಾದಶಹನು ಮಾಳವ ಪ್ರಾಂತದ ಸುಭೇದಾರಿಕೆಯನ್ನು ಮರಾಠರಿಗೆ ಕೊಟ್ಟನು.

ಮುಂದ ಕೆಲವು ಕಾಲದಮೇಲೆ ನಿಜಾಮ ಉಲ್ಮುಲ್ಕನು ಮೊಗಲ ಬಾದ ಶಹನ ಮನವೊಲಿಸಿ, ಮಾಳವದ ಸುಭೇದಾರಿಕೆಯನ್ನು ತನ್ನ ಮಗನಿಗೆ ಕೊಡಿಸಿದನು. ಇದು ಗೊತ್ತಾಗುತ್ತಲೇ ಬಾಜೀರಾಯನು ನಿಜಾಮನ ಮೇಲೆ ದಂಡೆತ್ತಿಹೋದನು. ಭೋಪಾಳದ ಬಳಿ ಇಬ್ಬರಿಗೂ ಯುದ್ಧವಾಯಿತು. ನಿಜಾಮನು ಸೋತು ಒಪ್ಪಂದ ಮಾಡಿಕೊಂಡನು.

ಕ್ರಿ. ಶ. ೧೭೩೯ರಲ್ಲಿ ಇರಾಣದೇಶದ ಅರಸನಾಗಿದ್ದ ನಾದಿರಶಹನು ದಿಲ್ಲಿಯ ಮೇಲೆ ದಂಡೆತ್ತಿ ಬಂದನು. ಅವನು ಅನೇಕ ಜನರನ್ನು ಕೊಂದ ನಲ್ಲದೆ, ಎಷ್ಟೋ ಸಂಪತ್ತನ್ನು ಸುಲಿಗೆ ಮಾಡಿದನು. ಅವನು ದಕ್ಷಿಣಕ್ಕೆ ಬರುವನೆಂಬ ಸುದ್ದಿಯನ್ನು ಕೇಳಿ, ಬಾಜೀರಾಯನು ದೊಡ್ಡ ದಂಡಿನೊಡನೆ ನಾದಿರಶಹನ ಮೇಲೆ ಹೊರಟನು. ಈ ಸಂಗತಿಯನ್ನು ಕೇಳಿ ನಾದಿರಶಹನು ಭಾರತವನ್ನು ಬಿಟ್ಟು ಓಡಿಹೋದನು. ಮರಳಿ ಪುಣೆಗೆ ಬರುತ್ತಿರುವಾಗ ದಾರಿಯಲ್ಲಿ ಬಾಜೀರಾಯನು ಬೇನೆಬಿದ್ದನು. ಮುಂದೆ ನರ್ಮದಾ ನದಿಯ

ದಂಡೆಯ ಮೇಲೆ ಇರುವ ರಾವೇರ ಎಂಬ ಊರಲ್ಲಿ ಅವನು ಮರಣ ಹೊಂದಿದನು (೧೭೪೦).

ಬಾಜೀರಾಯನು ಸುಮಾರು ಇಪ್ಪತ್ತು ವರುಷಗಳ ವರೆಗೆ ಪೇಶ್ವೆಯ ಕೆಲಸಮಾಡಿದನು. ಆ ಕಾಲದಲ್ಲಿ ಮರಾಠರ ಹೆಸರು ಇಡೀ ಭಾರತದ ತುಂಬ ಹಬ್ಬಿತ್ತು. ಅವನು ಎಷ್ಟೋ ಯುದ್ಧಗಳನ್ನು ಮಾಡಿದನು. ಒಂದರಲ್ಲಿಯೂ ಅವನಿಗೆ ಸೋಲು ಉಂಟಾಗಲಿಲ್ಲ. ಇದರಿಂದ ಬಾಜೀರಾಯನ ಕೀರ್ತಿಯು ಭಾರತದ ಇತಿಹಾಸದಲ್ಲಿ ಚಿರಕಾಲ ಉಳಿಯುವಂತಾಯಿತು.

## ಅಭ್ಯಸನಗಳು

೧. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಪದಗಳನ್ನು ತುಂಬಿ ವಾಕ್ಯಗಳನ್ನು ಪೂರ್ತಿಗೊಳಿಸಿರಿ.

(ಅ) ಬಾಜೀರಾಯನು. . . . . .ನ ಮಗನು.

(ಬ) ಬಾಜೀರಾಯನಿಗೆ. . . . . . ಎಂಬ ತಮ್ಮನಿದ್ದನು.

(ಕ) ಇವನು ಪೇಶ್ವೆಯಾದಾಗ . . . . . . ವರುಷದವನಿದ್ದನು.

(ಡ) ಇವನು ಉತ್ತರಭಾರತದಲ್ಲಿ . . . . . ಅರಸನಾದ . . . . ನಿಗೆ ಸಹಾಯ ಮಾಡಿ . . . . .ನನ್ನು ಸೋಲಿಸಿ, ಓಡಿಸಿದನು.

(ಕ) ಬಾಜೀರಾಯನು . . . . ಎಂಬಲ್ಲಿ ಕ್ರಿ. ಶ. . . . . .ರಲ್ಲಿ ಮರಣಹೊಂದಿದನು.

೨. ಬಾಜೀರಾಯನು ಚಿಕ್ಕಂದಿನಲ್ಲಿ ಶಾಹುರಾಜನ ಪ್ರೀತಿಗೆ ಏಕೆ ಪಾತ್ರನಾಗಿದ್ದನು?

೩. ಬಾಜೀರಾಯನು ನಿಜಾಮನ ಕೂಡ ಯುದ್ಧವನ್ನು ಏಕೆ ಮಾಡಿದನು?

೪. ನಾದಿರಶಹನು ಯಾರು? ಅವನು ಭಾರತವನ್ನು ಬಿಟ್ಟು ಏಕೆ ಓಡಿಹೋದನು?

# ೩೨. ಮಹಾರಾಣಿ ತಾರಾಬಾಯಿ

ಶಿವಾಜಿಯ ತರುವಾಯ ಸಂಭಾಜಿಯು ಅರಸನಾದನು. ಔರಂಗಜೇಬನು ಸಂಭಾಜಿಯನ್ನು ಹಿಡಿದು ಕೊಲ್ಲಿಸಿದನು; ಅವನ ಹೆಂಡತಿಯನ್ನೂ ಮಗನಾದ ಶಾಹುವನ್ನೂ ದಿಲ್ಲಿಯಲ್ಲಿ ಕೈಸೆರೆಯಲ್ಲಿ ಇಟ್ಟನು. ರಾಯಗಡವು ಮೊಗಲರ ವಶವಾಯಿತು. ಇಂತಹ ಕಾಲದಲ್ಲಿ, ಬಂದ ಸಂಕಟವನ್ನು ದೂರ ಮಾಡಿ ಮರಾಠರ ರಾಜ್ಯವನ್ನು ಉಳಿಸಿದ ಕೀರ್ತಿಯು ಮಹಾರಾಣಿ ತಾರಾಬಾಯಿಗೆ ಸಲ್ಲುವುದು.



ಮೊಗಲರನ್ನು ಎದುರಿಸಿದ ರಾಣಿ ತಾರಾಬಾಯಿ

ತಾರಾಬಾಯಿಯು ಶಿವಾಜಿಯ ೨ನೆಯ ಮಗನಾದ ರಾಜಾರಾಮನ ಹೆಂಡತಿಯು. ಸಂಭಾಜಿಯ ಮರಣದ ತರುವಾಯ ರಾಜಾರಾಮನು ಪಟ್ಟಕ್ಕೆ ಕುಳಿತನು. ಔರಂಗಜೇಬನು ಮರಾಠರ ರಾಜ್ಯವನ್ನು ಸಂಪೂರ್ಣ ನಾಶಮಾಡಬೇಕೆಂದು ಮೇಲಿಂದ ಮೇಲೆ ದಕ್ಷಿಣಕ್ಕೆ ದಂಡೆತ್ತಿ ಬರಹತ್ತಿದನು. ಆಗ ರಾಜಾರಾಮನಿಗೆ ಇವನ ದಂಡಿನ ಮುಂದೆ ನಿಲ್ಲಲು ಸಾಧ್ಯವಾಗಲಿಲ್ಲ. ಆದರೆ ಮೊಗಲ ಸೈನ್ಯವು ಒಂದು ಕೋಟೆಯನ್ನು ವಶಪಡಿಸಿಕೊಂಡು ಮತ್ತೊಂದು ಕೋಟೆಗೆ ಹೋಯಿತೆಂದರೆ, ಮರಾಠರ ದಂಡಿನವರೆಲ್ಲ ಕೂಡಿಕೊಂಡು ಆ ಹಿಂದಿನ ಕೋಟೆಗೆ ಮುತ್ತಿಗೆ ಹಾಕಿ ಅದನ್ನು ತಿರುಗಿ ವಶಪಡಿಸಿಕೊಳ್ಳುತ್ತಿ

ಪ್ಪರು. ಔರಂಗಜೇಬನು ಮುಂದೆ ಮುಂದೆ; ರಾಜಾರಾಮನ ಸೈನ್ಯ ಹಿಂದೆ ಹಿಂದೆ—ಹೀಗೆ ನಡೆದಿತ್ತು. ರಾಜಾರಾಮನು ಹೋದ ಕಡೆಗಳಲ್ಲೆಲ್ಲ ತಾರಾ ಬಾಯಿ ಕುದುರೆಹತ್ತಿ ಅವನನ್ನು ಹಿಂಬಾಲಿಸುತ್ತಿದ್ದಳು; ಅವನಿಗೆ ಹುರುಪು ಕೊಡುತ್ತಿದ್ದಳು. ಎಷ್ಟು ಪ್ರಯತ್ನಪಟ್ಟರೂ ಮರಾಠರು ಔರಂಗಜೇಬನಿಗೆ ಮಣಿಯಲಿಲ್ಲ.

ಹೀಗೆ ಮುತ್ತಿಗೆಗಳ ಮೇಲೆ ಮುತ್ತಿಗೆಗಳು ನಡೆದಾಗಲೇ ರಾಜಾರಾಮನು ಮರಣಹೊಂದಿದನು. ಆದರೂ ಶೂರಳಾದ ತಾರಾಬಾಯಿಯು ಧೈರ್ಯವನ್ನು ಕಳೆದುಕೊಳ್ಳಲಿಲ್ಲ. ಕೆಲವು ಸರದಾರರ ಸಹಾಯದಿಂದ ತನ್ನ ೧೦ ವರುಷದ ಮಗನಾದ ಶಿವಾಜಿಯನ್ನು ಸಾತಾರೆಯಲ್ಲಿ ಪಟ್ಟಕ್ಕೆ ಕುಳ್ಳಿರಿಸಿ, ತಾನೇ ರಾಜ್ಯ ಕಾರಭಾರ ಮಾಡಹತ್ತಿದಳು; ಅಲ್ಲದೆ ಮರಾಠರ ದಂಡು ಕಟ್ಟಿಕೊಂಡು, ಮೊಗಲರ ಕೂಡ ಎಡೆಬಿಡದೆ ಹೋರಾಡ ತೊಡಗಿದಳು. ತಾರಾಬಾಯಿಯು ಮೊಗಲರ ದಂಡಿನವರಿಗೆ ರಣಚಂಡಿಯಂತೆ ಕಾಣುತ್ತಿದ್ದಳು. ಅವಳ ಮುಂದೆ ಔರಂಗಜೇಬನ ದಂಡಿನವರ ಆಟವು ನಡೆಯಲಿಲ್ಲ. ಅದಕ್ಕಾಗಿ ಅವರು ಮರಾಠರ ಗೊಡವೆಯನ್ನು ಬಿಟ್ಟುಬಿಟ್ಟರು. ಮರಾಠರ ರಾಜ್ಯದ ಮೇಲೆ ಬಂದ ವಿಪತ್ತು ಮಹಾರಾಣಿ ತಾರಾಬಾಯಿಯ ಶೌರ್ಯದಿಂದ ದೂರವಾಯಿತು.

ಮುಂದೆ ಔರಂಗಜೇಬನ ಮರಣಾನಂತರ, ದಿಲ್ಲಿಯ ಪಟ್ಟದ ಸಲುವಾಗಿ ಜಗಳವೆದ್ದಿತು. ಆ ಜಗಳದಲ್ಲಿ ಅನಾಯಾಸವಾಗಿ—ದಿಲ್ಲಿಯ ಸೆರೆಮನೆ ಯಲ್ಲಿದ್ದ ಶಾಹುರಾಜನ ಬಿಡುಗಡೆಯಾಯಿತು. ತಮ್ಮ ಅರಸನ ಬಿಡುಗಡೆಯ ಸುದ್ದಿಯನ್ನು ಕೇಳಿ ಮರಾಠರ ಸರದಾರರಿಗೆಲ್ಲ ಆನಂದವಾಯಿತು. ಅವರಲ್ಲಿ ಕೆಲವರು ಹೋಗಿ ಶಾಹುವನ್ನು ಕೂಡಿಕೊಂಡರು. ಶಾಹುವು ತನ್ನ ರಾಜ್ಯ ದಲ್ಲಿ ಕಾಲಿಡುತ್ತಲೆ, ತಾರಾಬಾಯಿಗೆ ಒಂದು ಪತ್ರಬರೆದು ತನ್ನ ರಾಜ್ಯವನ್ನು ತನಗೆ ಬಿಡಬೇಕೆಂದು ಕೇಳಿಕೊಂಡನು. ಅದಕ್ಕೆ ತಾರಾಬಾಯಿಯು "ಈ ರಾಜ್ಯವನ್ನು ನನ್ನ ಗಂಡ ಗಳಿಸಿದ್ದಾನೆ, ಇದಕ್ಕೆ ನನ್ನ ಮಗನೇ ಹಕ್ಕುದಾರನು" ಎಂದು ಹೇಳಿ ಕಳುಹಿದಳು.

ಇದರಿಂದ ಶಾಹುವಿಗೆ ಬಹಳ ಕೆಡುಕೆನಿಸಿತು. ಅವನು ಧನಾಜಿ ಜಾಧವ ಖಂಡೋಬಲ್ಲಾಳ ಹಾಗೂ ಬಾಳಾಜಿ ವಿಶ್ವನಾಥ ಮುಂತಾದ ವೀರರನ್ನು ಕೂಡಿಕೊಂಡು ತಾರಾಬಾಯಿಯ ಮೇಲೆ ಸಾಗಿ ಹೋದನು. ಆಗ ತಾರಾ ಬಾಯಿಯು ಹೆದರಲಿಲ್ಲ. ಕೆಲವು ಸರದಾರರನ್ನು ಕಟ್ಟಿಕೊಂಡು ಅವನೊಡನೆ ಯುದ್ಧಕ್ಕೆ ನಿಂತಳು. ಆದರೆ ಶಾಹುವಿನ ಪಕ್ಷದ ಸ್ವಾಮಿನಿಷ್ಠ ಮರಾಠಾ ಸರದಾರರ ಮುಂದೆ ಅವಳ ಆಟವು ಸಾಗಲಿಲ್ಲ. ಶಾಹುವು ಗೆದ್ದು ಸಾತಾರೆ ಯನ್ನು ವಶಪಡಿಸಿಕೊಂಡು ಅರಸನಾದನು. ತಾರಾಬಾಯಿಯು ಪರಶುರಾಮ

ತ್ರಿಂಬಕ, ರಾಮಚಂದ್ರ ಪಂತ ಮೊದಲಾದ ಸರದಾರರನ್ನು ಕೂಡಿಕೊಂಡು ಪನ್ಹಾಳಗಡಕ್ಕೆ ಹೋದಳು. ಅಲ್ಲಿ ನಿಂತುಕೊಂಡು ತನ್ನ ಪಕ್ಷದ ಸೈನ್ಯವನ್ನು ಸಂಘಟಿಸಿದಳು. ತಮ್ಮತಮ್ಮೊಳಗೆ ಜಗಳವಾಡುವುದು ಒಳಿತಲ್ಲವೆಂದು ಶಾಹು ಮಹಾರಾಜನು ತಾರಾಬಾಯಿಯ ಗೊಡವೆಗೆ ಹೋಗಲಿಲ್ಲ.

ಬಳಿಕ ತಾರಾಬಾಯಿಯು ತನ್ನ ನಂಬಿಗೆಯ ಸರದಾರರೊಂದಿಗೆ ಕೊಲ್ಹಾಪುರಕ್ಕೆ ಬಂದಳು. ಅಲ್ಲಿ ತನ್ನ ಮಗನಾದ ಶಿವಾಜಿಯನ್ನು ಪಟ್ಟಕ್ಕೆ ಕುಳ್ಳಿರಿಸಿ ಹೊಸದೊಂದು ರಾಜ್ಯವನ್ನು ಸ್ಥಾಪಿಸಿದಳು. ಸುತ್ತುಮುತ್ತಲಿನ ಪ್ರದೇಶಗಳನ್ನು ತನ್ನ ರಾಜ್ಯಕ್ಕೆ ಕೂಡಿಸಿಕೊಂಡಳು. ಅಂದಿನಿಂದ ಮರಾಠಾ ರಾಜ್ಯದಲ್ಲಿ ಎರಡು ರಾಜ್ಯಗಳಾದುವು. ಮುಂದೆ ಕ್ರಿ. ಶ. ೧೮೧೮ರಲ್ಲಿ ಸಾತಾರೆಯ ರಾಜ್ಯವು ಅಳಿಗಾಲಾಗಿ ಹೋಯಿತು; ಆದರೂ ಮಹಾರಾಣಿ ತಾರಾಬಾಯಿಯು ಸ್ಥಾಪಿಸಿದ ಕೊಲ್ಹಾಪೂರ ರಾಜ್ಯವು, ಕ್ರಿ. ಶ. ೧೯೪೮ರ ವರೆಗೆ ಬಾಳಿತು.

ಶಾಹುವು ಔರಂಗಜೇಬನ ರಾಜಠೀವಿಯಲ್ಲಿ ಬೆಳೆದವನಾದ ಕಾರಣ ವಿಲಾಸಿಯಾಗಿದ್ದನು. ರಾಜಕಾರ್ಯದ ಭಾರವನ್ನು ಹೊರುವುದು ಬೇಡವೆನಿಸಿತು. ಅವನು ಬಾಳಾಜಿ ವಿಶ್ವನಾಥನನ್ನು ಮುಖ್ಯಮಂತ್ರಿ (ಪೇಶವೆ)ಯನ್ನಾಗಿ ನೇಮಿಸಿಕೊಂಡು, ಅವನಿಗೆ ಎಲ್ಲ ಕಾರಭಾರವನ್ನು ಒಪ್ಪಿಸಿದನು. ಬಾಳಾಜಿಯ ತರುವಾಯ ಅವನ ಮಗ ಬಾಜೀರಾಯನು ಪೇಶವೆಯಾದನು. ಇವರಿಬ್ಬರೂ ಮಹಾಶೂರರೂ ರಾಜಕಾರಣನಿಪುಣರೂ ಇದ್ದರು. ಇದರಿಂದ ಪೇಶವೆಯರ ಪ್ರತಿಷ್ಠೆಯೇ ಹೆಚ್ಚಾಯಿತು. ಶಾಹುವು ಕೇವಲ ಹೆಸರಿಗೆ ರಾಜನಾದನು. ಬಾಜೀರಾಯನ ತರುವಾಯ, ಅವನ ಹದಿನೆಂಟು ವರುಷದ ಮಗ ನಾನಾ-ಸಾಹೇಬನು ಪೇಶವೆಯಾದನು. ಈ ಸಂಗತಿಯು ತಾರಾಬಾಯಿಯ ಮನಸ್ಸಿಗೆ ಬರಲಿಲ್ಲ. ಅವಳು ಹೇಗಾದರೂ ಮಾಡಿ ಈ ಪೇಶ್ವೆಯರ ಆಳಿಕೆಯನ್ನು ನಿಲ್ಲಿಸಬೇಕೆಂದು ಪ್ರಯತ್ನ ಮಾಡುತ್ತಲೆ ಇದ್ದಳು. ಶಾಹುರಾಜನ ಮರಣದ ತರುವಾಯ ಅವಳು ಸಾತಾರೆಯನ್ನು ವಶಪಡಿಸಿಕೊಳ್ಳಬೇಕೆಂದು ಪ್ರಯತ್ನಿ-ಸಿದಳು; ಆದರೆ ಆಕೆಗೆ ಯಶ ದೊರೆಯಲಿಲ್ಲ.

ಹೀಗೆ ಮಹಾರಾಣಿ ತಾರಾಬಾಯಿಯು ಸಂಕಟಸಮಯದಲ್ಲಿ ಮರಾಠಾ ರಾಜ್ಯವನ್ನು ಉಳಿಸಿ ಸ್ವತಃ ಆಳಿದಳು. ಹೊಸದಾಗಿ ಕೊಲ್ಹಾಪುರದಲ್ಲಿ ರಾಜ್ಯ ಸ್ಥಾಪಿಸಿದಳು. ಸಾತಾರೆಯ ರಾಜ್ಯವೂ ಪೇಶವೆಯರ ಆಳಿಕೆಯೂ ಕ್ರಿ. ಶ. ೧೮೧೮ರಲ್ಲಿ ಹಾಳಾದುವು. ಆದರೆ ಕೊಲ್ಹಾಪುರದ ರಾಜ್ಯವು ಕ್ರಿ. ಶ. ೧೯೪೮ರ ವರೆಗೆ ಉಳಿದು ಬಾಳಿತು. ಮಹಾರಾಣಿ ತಾರಾಬಾಯಿಯು ೮೬ ವರ್ಷದ ಮುಪ್ಪಿನವಳಾಗಿ, ಕ್ರಿ. ಶ. ೧೭೬೧ರಲ್ಲಿ ಮರಣಹೊಂದಿದಳು.

### ಅಭ್ಯಸನಗಳು

೧. ಕೆಳಗೆ ಕಂಸಗಳಲ್ಲಿ ಕೊಟ್ಟ ಯೋಗ್ಯ ಶಬ್ದಗಳನ್ನು ಇಟ್ಟುಕೊಂಡು ವಾಕ್ಯಗಳನ್ನು ಪೂರ್ತಿ ಮಾಡಿರಿ.
   ಅ) ಸಂಭಾಜಿಯನ್ನು (ರಾಜಾರಾಮ, ಔರಂಗಜೇಬ, ಶಿವಾಜಿ) ಕೊಲ್ಲಿಸಿದನು.
   ಆ) ತಾರಾಬಾಯಿಯು (ರಾಜಾರಾಮನನ್ನು, ಶಾಹುವನ್ನು, ಶಿವಾಜಿಯನ್ನು) ಪಟ್ಟಕ್ಕೆ ಕೂಡಿಸಿ, ತಾನೇ ರಾಜ್ಯಕಾರಭಾರ ಮಾಡಹತ್ತಿದಳು.
   ಇ) ತಾರಾಬಾಯಿಯು (ಸಾತಾರೆಯಲ್ಲಿ, ಕೊಲ್ಹಾಪುರದಲ್ಲಿ, ಪುಣೆಯಲ್ಲಿ) ಹೊಸದಾಗಿ ರಾಜ್ಯ ಸ್ಥಾಪಿಸಿದಳು.
   ಈ) ಶಾಹುವು (ಧನಾಜಿಯನ್ನು, ಬಾಳಾಜಿ ವಿಶ್ವನಾಥನನ್ನು, ಖಂಡೋ ಬಲ್ಲಾಳನನ್ನು) ಪೇಶ್ವೆಯನ್ನಾಗಿ ಮಾಡಿಕೊಂಡನು.

೨. ತಾರಾಬಾಯಿಯು ಮೊಗಲರಿಂದ ಮರಾಠಾರಾಜ್ಯವನ್ನು ಹೇಗೆ ರಕ್ಷಿಸಿದಳು?

೩. ಶಾಹುವು ತಾರಾಬಾಯಿಯ ಕೂಡ ಏಕೆ ಯುದ್ಧ ಮಾಡಬೇಕಾಯಿತು?

೪. ಪೇಶ್ವೆಯವರ ಆಳಿಕೆಯನ್ನು ನಷ್ಟ ಮಾಡಬೇಕೆಂದು ತಾರಾಬಾಯಿಯು ಯಾವ ಪ್ರಯತ್ನಗಳನ್ನು ಮಾಡಿದಳು?

## ೩೩. ಮಹದಾಜಿ ಸಿಂಧೆ

ಮರಾಠಾ ರಾಜ್ಯದಲ್ಲಿ 'ಮೂರುವರೆ ಜಾಣರು' ಎಂದು ಹೆಸರಾದವರಲ್ಲಿ ಮಹದಾಜಿ ಸಿಂಧೆಯೂ ಒಬ್ಬನು. ಆತನು ಮರಾಠಾ ರಾಜ್ಯವನ್ನು ಬೆಳೆಸಿ ಬಲಪಡಿಸುವುದರಲ್ಲಿ ತನ್ನ ಆಯುಷ್ಯವನ್ನು ಕಳೆದನು. ಆದುದರಿಂದ ಅವನು 'ಮರಾಠಾ ರಾಜ್ಯದ ಆಧಾರಸ್ತಂಭ' ಎಂದು ಹೆಸರನ್ನು ಪಡೆದಿದ್ದಾನೆ.

ಮಹದಾಜಿಯು ರಾಣೋಜಿ ಸಿಂಧೆಯ ಮಗನು. ಅವನ ತಾಯಿಯ ಹೆಸರು ಚಿಮಾಬಾಯಿ. ಮಹದಾಜಿಯು ಕ್ರಿ. ಶ. ೧೭೩೦ರಲ್ಲಿ ಹುಟ್ಟಿದನು. ಅವನು ಚಿಕ್ಕಂದಿನಲ್ಲಿ ಬಲು ಆಟಗುಳಿಯಾಗಿದ್ದನು. ಓದು-ಬರೆಹಗಳು ಅವನಿಗೆ ಅಷ್ಟು ಸೇರುತ್ತಿರಲಿಲ್ಲ. ಕುದುರೆ ಹತ್ತುವುದು, ಕತ್ತಿ ತಿರುವುವುದು, ದಾಂಡಪಟ್ಟಿ ಆಡುವುದು, ಬಾಣ-ಬರ್ಚಿಗಳನ್ನು ಉಪಯೋಗಿಸುವುದು ಮುಂತಾದ ಯುದ್ಧವಿದ್ಯೆಗಳಲ್ಲಿಯೆ ಅವನ ಪ್ರೀತಿ ಹೆಚ್ಚು. ಜಗಳಾಟ-ಬಡಿದಾಟಗಳೆಂದರೆ ಮಹದಾಜಿಯ ಮೈ ಉಬ್ಬುತ್ತಿತ್ತು. ಅವನಲ್ಲಿ ಧೈರ್ಯವು ಬಹಳವಿತ್ತು. ಆದುದರಿಂದ ವಯಸ್ಸಿಗೆ ಬಂದಂತೆಲ್ಲ ಅವನು ಒಳ್ಳೆಯ ಯುದ್ಧವೀರನಾದನು.

ಕ್ರಿ. ಶ. ೧೭೬೧ರಲ್ಲಿ ಮರಾಠರಿಗೂ, ಅಹಮ್ಮದಶಹ ಅಬ್ದಾಲಿಗೂ ಪಾನಿ-

ಪತ್ತ್ರದ ಬಳಿ ದೊಡ್ಡ ಯುದ್ಧವಾಯಿತು. ಆಗ ಮಹದಾಜಿಯು ಅಬ್ದಾಲಿಯ ಸೈನಿಕರ ಕೂಡ ಶೂರತನದಿಂದ ಕಾದುತ್ತಿದ್ದನು. ಆ ಯುದ್ಧದಲ್ಲಿ ಮರಾಠರಿಗೆ ದುರ್ದೈವದಿಂದ ಅಪಜಯವಾಯಿತು. ಸೋತುಹೋದ ಮರಾಠರ ದಂಡಿನವರು ರಣಾಂಗಣದಿಂದ ಓಡತೊಡಗಿದರು. ಆದರೆ ಮಹದಾಜಿಯು ಮಾತ್ರ ತನ್ನ ಸೈನಿಕರೊಡನೆ ಹಾಗೆಯೆ ಕಾದುತ್ತಲಿದ್ದನು. ಕೊನೆಗೆ ಮಹದಾಜಿಗೂ ಓಡಬೇಕಾಯಿತು. ವೈರಿಗಳು ಅವನ ಬೆನ್ನು ಹತ್ತಿದರು. ತುಸು ದೂರ ಹೋಗು



ಮಹದಾಜಿ ಸಿಂಧೆ

ವಷ್ಟರಲ್ಲಿಯೆ ಒಂದು ತುಂಬಿ ಹರಿಯುವ ಹೊಳೆಯು ಹತ್ತಿತು. ಮಹ- ಆದರಲ್ಲಿ ಧುಮುಕಿ ಈಸಹತ್ತಿದನು. ವೈರಿಗಳು ಅಲ್ಲಿಯೂ ಅವನನ್ನು ಬಿಡಲಿಲ್ಲ. ಆ ಹೋರಾಟದಲ್ಲಿ ಒಬ್ಬ ಪಠಾಣನ ಬಲವಾದ ಕತ್ತಿಯ ಪೆಟ್ಟಿನಿಂದ ಅವನ ಕಾಲಿಗೆ ಬಹಳ ಪೆಟ್ಟು ಹತ್ತಿತು. ನದಿಯನ್ನು ಈಸಿ ಪಾರಾದನು. ಆದರೆ ಮುಂದೆ ಅವನಿಗೆ ಸರಿಯಾಗಿ ನಡೆಯಲು ಬರಲಿಲ್ಲ; ಹಾಗೆಯೆ ಕುಂಟುತ್ತ ನಡೆದಿದ್ದನು. ಆಗ ಅವನ ಸೈನಿಕನೊಬ್ಬನು ಅವನನ್ನು ಗುರುತಿಸಿದನು. ತನ್ನ ಯಜಮಾನನಿಗೆ ಸಹಾಯಮಾಡುವುದು ಕರ್ತವ್ಯವೆಂದು ಭಾವಿಸಿ, ಅವನನ್ನು ವೈರಿಗಳಿಂದ ಪಾರುಮಾಡಿದನು. ಬಳಿಕ ಮಹದಾಜಿಯು ಸುರಕ್ಷಿತವಾಗಿ ತನ್ನ ಊರಿಗೆ ಬಂದುಮುಟ್ಟಿದನು. ತನಗೆ ಸಂಕಟಕಾಲದಲ್ಲಿ ಸಹಾಯಮಾಡಿದ ಆ ಸೈನಿಕನಿಗೆ ಮಹದಾಜಿಯು ಒಂದು ಊರನ್ನು ಉಂಬಳಿಯಾಗಿ ಕೊಟ್ಟನು.

ಮಹದಾಜಿಯು ಬಹಳ ಶೂರ, ಚತುರ, ದೊಡ್ಡ ಮನಸ್ಸಿನವ, ಪರೋಪಕಾರಿ; ಆದರೂ ವಿರೋಧಿಗಳನ್ನು ಕಂಡರೆ ಕೋಪದಿಂದ ಕೆಂಡಕಾರುವನು. ಸೇಡುತೀರಿಸಿಕೊಳ್ಳುವುದರಲ್ಲಿ ಮಹದಾಜಿಯದು ಯಾವಾಗಲೂ ಮೇಲುಗೈ. ಮಾಧವರಾವ ಪೇಶ್ವೆಗೆ ಎಷ್ಟೋ ಪ್ರಸಂಗಗಳಲ್ಲಿ ಅವನು ನೆರವಾಗಿದ್ದನು. ಆದುದರಿಂದ ಮಾಧವರಾಯನು ಅವನಿಗೆ ಗ್ವಾಲ್ಹೇರ ಪ್ರಾಂತವನ್ನು ಜಹಗೀರಾಗಿ ಕೊಟ್ಟನು. ಮುಂದೆ ಸಿಂಧೆಯು ಗ್ವಾಲ್ಹೇರನ್ನು ತನ್ನ ಮುಖ್ಯ ಸ್ಥಳವನ್ನಾಗಿ ಮಾಡಿಕೊಂಡು ಅಲ್ಲಿಯೆ ಇರತೊಡಗಿದನು!

ನಾರಾಯಣನ ಕೊಲೆಯಾದನಂತರ ಮಹದಾಜಿಯು, ಮರಾಠಾ ಸರದಾರ್‌ಮಂಡಳದವರ ಪಕ್ಷಹಿಡಿದನು. ರಾಘೋಬನ ಆಟವನ್ನು ನಡೆಯಗೊಡದೆ ಸವಾಯಿ ಮಾಧವರಾಯನನ್ನು ಪೇಶ್ವೆಪಟ್ಟದ ಮೇಲೆ ಕುಳ್ಳಿರಿಸಿ, ಆಡಳಿತ ಸಾಗಿಸುತ್ತಿದ್ದ 'ಬಾರಾಭಾಯಿ ಕಾರಭಾರ'ದಲ್ಲಿ ಮಹದಾಜಿಯದೂ ಕೈವಾಡವಿತ್ತು. ಮರಾಠರು ವಡಗಾಂವಿಯ ಒಳಿಯಲ್ಲಿ ಇಂಗ್ಲಿಷರ ಕೂಡ ನಡೆಸಿದ ಯುದ್ಧದಲ್ಲಿ, ಮಹದಾಜಿಯು ಬಹಳ ಪರಾಕ್ರಮ ತೋರಿಸಿದನು. ಅವನು ಇಲ್ಲದೆ ಹೋಗಿದ್ದರೆ ಮರಾಠರಿಗೆ ಜಯದೊರೆಯುವುದು ಕಠಿಣವಿತ್ತು.

ಮಹದಾಜಿಯು ತನ್ನ ಸೈನ್ಯವನ್ನು ಒಳ್ಳೆಯ ಶಿಸ್ತಿನಿಂದ ನೋಡಿಕೊಂಡು ಹೋಗುತ್ತಿದ್ದನು. ಒಬ್ಬ ಫ್ರೆಂಚ ಅಧಿಕಾರಿಯನ್ನು ಇಟ್ಟು ಅವನಿಂದ ತನ್ನ ದಂಡಿನವರಿಗೆ ಶಿಸ್ತು ಹಾಗು ಕವಾಯತಿನ ಶಿಕ್ಷಣವನ್ನು ಕೊಡಿಸಿದ್ದನು. ಇದರಿಂದ ಅವನ ಸೈನ್ಯವು ಬಹಳ ಶಕ್ತಿಶಾಲಿಯಾಗಿತ್ತು. ಅದರ ಬಲದಿಂದಲೇ ಅವನು ತನ್ನ ಪರಾಕ್ರಮವನ್ನು ತೋರಿಸುತ್ತಿದ್ದನು. ಮಹದಾಜಿಯು ರಜಪೂತರನ್ನೂ ರೋಹಿಲರನ್ನೂ ಸೋಲಿಸಿ ತನ್ನ ಅಂಕಿತದಲ್ಲಿ ಇಟ್ಟುಕೊಂಡಿದ್ದನು. ಇಂಗ್ಲಿಷರು ಆತನಿಗೆ ಹೆದರಿ ಸಮೀಪಕ್ಕೆ ಕೂಡ ಹಾಯುತ್ತಿರಲಿಲ್ಲ. ದಿಲ್ಲಿಯ ಬಾದಶಹನಾದ ಶಹಾಆಲಮನು ಕ್ರಿ. ಶ. ೧೭೭೧ರಲ್ಲಿ ಪಟ್ಟಕ್ಕೆ ಕುಳಿತನು. ಆಗ ದಿಲ್ಲಿಯ ಸುತ್ತಲೂ ಜನರು ಬಂಡು ಎಬ್ಬಿಸಿದರು. ಮಹದಾಜಿಯು ಶಹಾಆಲಮನಿಗೆ ಸಹಾಯಮಾಡಿ ಬಂಡನ್ನು ಅಡಗಿಸಿದನು. ಇದರಿಂದ ಶಹಾಆಲಮನಿಗೆ ಬಹಳ ಸಂತೋಷವಾಯಿತು. ಅವನು ಪೇಶ್ವೆಯರಿಗೆ 'ವಕೀಲ್-ಇ-ಮುತಾಲಿಕ್' ಎಂಬ ಪದವಿಯನ್ನು ಕೊಟ್ಟನು. ಮತ್ತು ಮಹದಾಜಿಯನ್ನು ಅದಕ್ಕೆ ಮಧ್ಯಸ್ಥಗಾರನೆಂದು ನೇಮಿಸಿದನು. ಇದರಿಂದ ದೊಡ್ಡ ದೊಡ್ಡ ಸರದಾರರು ಮಹದಾಜಿಯ ಕಡೆಗೆ ಬರಹತ್ತಿದರು; ಮತ್ತು ಅವನಿಗೆ ಹಲವು ರೀತಿಯಿಂದ ಆದರ-ಸತ್ಕಾರ ಮಾಡಹತ್ತಿದರು. ಮುಂದೆ ಮಹದಾಜಿಯು ಪುಣೆಗೆ ಬಂದನು. ಒಂದು ದೊಡ್ಡ ಸಮಾರಂಭವನ್ನು

ನೆರವೇರಿಸಿದನು. ಮೊಗಲ್‌ಬಾದಶಹನಿಂದ ತಂದ ಪದವಿಯನ್ನು ಅದೇ ಕಾಲದಲ್ಲಿ ಪೇಶ್ವೆಯವರಿಗೆ ಒಪ್ಪಿಸಿದನು.

ಮಹದಾಜಿಯು ನಾನಾಫಡಣವೀಸನನ್ನು ಸೇರುತ್ತಿರಲಿಲ್ಲ. ನಾನಾ ಫಡಣವೀಸನು ಲೆಕ್ಕಣಿಕೆಯ ಬಂಟನು. ಮಹದಾಜಿಯು ಕತ್ತಿಯ ಬಂಟನು. ಇವರಿಬ್ಬರೂ ಮರಾಠರ ರಾಜ್ಯಕ್ಕೆ ಅವಶ್ಯ ಬೇಕಾದವರು. ಆದುದರಿಂದ ಪೇಶ್ವೆಯವರು ಮಹದಾಜಿಯನ್ನು ಕರೆದು "ನಾನಾ ಮತ್ತು ನೀನು ಇಬ್ಬರೂ ನಮಗೆ ಎರಡೂ ತೋಳುಗಳಿದ್ದಂತೆ. ಇವುಗಳಲ್ಲಿ ಯಾವುದೇ ಒಂದು ಹೋದರೂ ನಮಗೆ ತುಂಬ ಹಾನಿ" ಎಂದು ಹೇಳಿ, ಅವರಿಬ್ಬರಲ್ಲಿ ಸ್ನೇಹವನ್ನು ಉಂಟುಮಾಡಿದರು.

ಸನ್ ೧೭೯೪ರಲ್ಲಿ ಮಹದಾಜಿಯು ಪುಣೆಯ ಹತ್ತಿರ ಇರುವ ವಾನವಡಿಯಲ್ಲಿ ಮರಣಹೊಂದಿದನು. ಅವನಿಗೆ ಓದು-ಬರೆಹಗಳು ಚೆನ್ನಾಗಿ ಬರುತ್ತಿದ್ದುವಲ್ಲದೆ ಸ್ವತಃ ಕೆಲವು ಕವಿತೆಗಳನ್ನೂ ಬರೆದಿದ್ದಾನೆ. ಅವನಿಗೆ ಯಾವ ಚಟಗಳೂ ಇರಲಿಲ್ಲ. ದೇವರಲ್ಲಿ ಬಹಳ ಭಕ್ತಿಯುಳ್ಳವನಾಗಿದ್ದನು. ಅವನ ಸ್ಮಾರಕವು ವಾನವಡಿಯಲ್ಲಿ ಈಗಲೂ ಇದೆ.

## ಅಭ್ಯಾಸನಗಳು

೧. ಮಹದಾಜಿಗೆ ಚಿಕ್ಕಂದಿನಲ್ಲಿ ಯಾವ ಯಾವ ವಿದ್ಯೆಗಳಲ್ಲಿ ಪ್ರೀತಿ ಹೆಚ್ಚು?

೨. ಪಾನಿಪತ್ತದ ಯುದ್ಧದಲ್ಲಿ ಮಹದಾಜಿಯು ತೋರಿಸಿದ ಸಾಹಸದ ಕಾರ್ಯವು ಯಾವುದು?

೩. ಮಾಧವರಾಯನು ಮಹದಾಜಿಗೆ ಗ್ವಾಲ್ಹೇರ ಪ್ರಾಂತವನ್ನು ಜಹಗೀರಾಗಿ ಏಕೆ ಕೊಟ್ಟನು?

೪. ಮಹದಾಜಿಯು ತನ್ನ ಸೈನ್ಯವನ್ನು ಹೇಗೆ ತಯಾರುಗೊಳಿಸಿದ್ದನು?

೫. ಪೇಶ್ವೆಯು ಮಹದಾಜಿಗೂ, ನಾನಾಫಡಣವೀಸನಿಗೂ ಗೆಳೆತನವನ್ನು ಹೇಗೆ ಉಂಟುಮಾಡಿದನು?

೬. ಮಹದಾಜಿಯ ಗುಣಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

೭. ಮಹದಾಜಿಯ ಶೂರತನದ ಕೆಲಸಗಳಲ್ಲಿ ಒಂದನ್ನು ನಿಮ್ಮ ಮಾತುಗಳಲ್ಲಿ ವರ್ಣಿಸಿರಿ.

# ೩೪. ಅಹಲ್ಯಾಬಾಯಿ ಹೋಳ್ಕರ

ಮರಾಠಾ ಸರದಾರರ ಗುಂಪಿನಲ್ಲಿ ಹೋಳಕರ ಮಲ್ಹಾರರಾಯನು ಬಹಳ ಪ್ರಸಿದ್ಧಿಯನ್ನು ಪಡೆದವನು. ಅವನು ಇಂದೂರಲ್ಲಿ ರಾಜ್ಯಭಾರ ಮಾಡು-ತ್ತಿದ್ದನು. ಅವನ ಮಗನ ಹೆಸರು ಖಂಡೇರಾಯನೆಂದು. ಈ ಖಂಡೇರಾಯನ ಹೆಂಡತಿಯೇ ಅಹಲ್ಯಾಬಾಯಿಯು.

ಅಹಮ್ಮದನಗರ ಜಿಲ್ಲೆಯಲ್ಲಿ ಪಾಥರಡೆ ಎಂಬ ಒಂದು ಗ್ರಾಮದಲ್ಲಿ, ಆನಂದರಾವ ಸಿಂಧೆ ಎಂಬ ಒಬ್ಬ ಬಡ ಒಕ್ಕಲಿಗನಿದ್ದನು. ಅಹಲ್ಯಾಬಾಯಿ ಆತನ ಮಗಳು. ಚಿಕ್ಕಂದಿನಲ್ಲಿಯೆ ಅಹಲ್ಯಾಬಾಯಿಗೆ ದೇವರ ಮೇಲೆ ಬಹಳ



ಅಹಲ್ಯಾಬಾಯಿ: ಪ್ರಜೆಗಳೇ ನನ್ನ ಮಕ್ಕಳು, ಧರ್ಮವೇ ತಾಯಿ.

ಭಕ್ತಿಯಿತ್ತು. ಪ್ರತಿದಿನವೂ ಆಕೆ ದೇವರ ಪೂಜೆ ಮಾಡದೆ ಉಣ್ಣುತ್ತಿರಲಿಲ್ಲ. ನೆರೆಹೊರೆಯ ಬಾಲಿಕೆಯರೊಡನೆ ಎಂದೂ ಜಗಳವಾಡುತ್ತಿರಲಿಲ್ಲ. ಒಂದೂ ಸುಳ್ಳನ್ನು ಅವಳು ಹೇಳುತ್ತಿರಲಿಲ್ಲ. ಬಡ-ಬಗ್ಗರ ಮೇಲೆ ಅವಳದು ಬಹಳ ದಯೆ. ತನಗೆ ತಂದೆ-ತಾಯಿಗಳು ಕೊಟ್ಟ ತಿಂಡಿಯನ್ನು ತನ್ನ ಗೆಳತಿಯರಿಗೆ ಕೊಡದೆ ತಿನ್ನುತ್ತಿರಲಿಲ್ಲ. ಹೀಗೆ ಒಳ್ಳೆಯ ಗುಣಗಳಿಂದ ಅವಳು ಊರ ಜನರಿಗೆಲ್ಲ ಪ್ರೀತಿಯವಳಾಗಿ ಬೆಳೆದಳು.

ಹೋಳಕರ ಮಲ್ಹಾರರಾಯನು ಬಹಳ ಶೂರನು. ಅವನು ಯಾವಾಗಲೂ, ತನ್ನ ಸೈನಿಕರೊಂದಿಗೆ ಅತ್ತಿತ್ತ ರಾಜ್ಯದಲ್ಲಿ ಅಡ್ಡಾಡುತ್ತಲೇ ಇದ್ದನು. ಹೀಗೆಯೆ ತಿರುಗಾಡುತ್ತ ಅವನು ಒಂದು ದಿನ ಪಾಥರಡಿ ಗ್ರಾಮಕ್ಕೆ ಬಂದನು; ಅಲ್ಲಿ ಆ ಊರ ದೇವರ ಗುಡಿಯಲ್ಲಿ ಇಳಿದುಕೊಂಡನು.

ದೇವರ ಗುಡಿಯ ಒಂದು ಪಕ್ಕದಲ್ಲಿ ಹಾಸಿದ ಗಾದೆಯಮೇಲೆ ಮಲ್ಹಾರ ರಾಯನು ಒರಗಿಕೊಂಡಿದ್ದನು. ವಿಶ್ರಾಂತಿಯ ಸಮಯವಾದುದರಿಂದ ಅವನ ಹತ್ತಿರ ಯಾರೂ ಇರಲಿಲ್ಲ. ಅಷ್ಟರಲ್ಲಿಯೆ ದಿನದ ಪದ್ಧತಿಯಂತೆ ಅಹಲ್ಯಾಬಾಯಿಯು ದೇವರ ದರ್ಶನಕ್ಕೆ ಬಂದಳು. ಮಲ್ಹಾರರಾಯನು ಅವಳನ್ನು ಹುಳುಹುಳು ನೋಡಿದನು. ಅವಳ ಉಡುಗೆ-ತೊಡುಗೆಗಳು ಬಡತನದುವಿದ್ದರೂ ಅವಳ ಮುಖಲಕ್ಷಣವು ಬಹಳ ಚೆನ್ನಾಗಿತ್ತು. ಅರಸುಕುಮಾರಿಯಂತೆ ಕಾಣುತ್ತಿದ್ದಳು ಆ ಹುಡುಗಿ. 'ನನ್ನ ಮಗನಾದ ಖಂಡೇರಾಯನಿಗೆ ಇವಳು ತಕ್ಕವಳಾದ ಹೆಂಡತಿಯಾಗುವಳು' ಎಂದು ಅವನು ಮನಸ್ಸಿನಲ್ಲಿಯೇ ವಿಚಾರಿಸಿದನು. ದೇವರ ದರ್ಶನವನ್ನು ತೆಗೆದುಕೊಂಡು ಅಹಲ್ಯಾಬಾಯಿ ಮನೆಗೆ ಹೋದಳು.

ಮಲ್ಹಾರರಾಯನು ಆ ಹುಡುಗಿ ಯಾರ ಮನೆಯವಳೆಂದು ವಿಚಾರಿಸಿದನು. ಅವಳ ತಂದೆ-ತಾಯಿಗಳನ್ನು ಕರೆಸಿ, ತನ್ನ ಮಗನಿಗೆ ಅವಳನ್ನು ಕೊಡಲು ಕೇಳಿದನು. ಆನಂದರಾಯನು ತನ್ನ ಮಗಳನ್ನು ಖಂಡೇರಾಯನಿಗೆ ಕೊಡಲು ಒಪ್ಪಿದನು. ಮುಂದೆ ಕೆಲವೇ ದಿನಗಳಲ್ಲಿ ಅತಿ ಸಡಗರದಿಂದ ಅಹಲ್ಯಾಬಾಯಿಯ ಲಗ್ನವಾಯಿತು. ಬಡ ಒಕ್ಕಲಿಗನ ಮಗಳು ಸರದಾರನ ಹೆಂಡತಿಯಾದಳು.

ಅಹಲ್ಯಾಬಾಯಿ ಗಂಡನಮನೆಗೆ ಬಂದಳು. ಅಲ್ಲಿ ಅವಳು ತನ್ನ ವಿನಯ, ಕಾರ್ಯದಲ್ಲಿಯ ಚುರುಕುತನ, ಹಿರಿಯರ ಸೇವೆ ಇವುಗಳಿಂದ ಗಂಡನಿಗೂ ಅತ್ತೆ-ಮಾವಂದಿರಿಗೂ ಪಂಚಪ್ರಾಣವಾದಳು. ಸೊಸೆಯ ಗುಣ-ಶೀಲಗಳಿಗೆ ಮೆಚ್ಚಿದ ಮಲ್ಹಾರರಾಯನು, ಅವಳನ್ನು ಕೇಳದೆ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ. ಆದರೆ ಪಾಪ! ಅಹಲ್ಯಾಬಾಯಿಯ ದೈವದಲ್ಲಿ ಮುತ್ತೈದೆತನದ ಸುಖವು ಇರಲಿಲ್ಲ. ಅವಳ ಗಂಡನಾದ ಖಂಡೇರಾಯನು ತುಂಬೇರಿಯ ಮುತ್ತಿಗೆಯ ಯುದ್ಧದಲ್ಲಿ ಮಡಿದನು. ಪತಿವ್ರತೆಯಾದ ಅಹಲ್ಯಾಬಾಯಿಯು ಸಹಗಮನಕ್ಕೆ ಸಿದ್ಧಳಾದಳು. ಆದರೆ ತಮ್ಮ ರಾಜಲಕ್ಷ್ಮಿಯಂತೆ ಇದ್ದ ಅಹಲ್ಯಾಬಾಯಿಯನ್ನು ಕಳೆದುಕೊಳ್ಳಲು ಪ್ರಜೆಗಳು ಒಪ್ಪಲಿಲ್ಲ. ಮಾವನಾದ ಮಲ್ಹಾರರಾಯನೂ ಸಹಗಮನಕ್ಕೆ ಅನುಮತಿಯನ್ನು ಕೊಡಲಿಲ್ಲ. ಮುಪ್ಪಿನ ಮಾವನ ದುಃಖದ ಮಾತನ್ನು ಕೇಳಿ ಅವಳ ಮನಸ್ಸು ಕರಗಿತು. ಆಗ

ಅವಳು ಸಹಗಮನ ಮಾಡಲಿಲ್ಲ. ಪೂಜ್ಯನಾದ ಮಾವನ ಸೇವೆಯಲ್ಲಿಯೂ ಮಕ್ಕಳ ಲಾಲನೆ-ಪಾಲನೆಗಳಲ್ಲಿಯೂ ದೇವರ ಧ್ಯಾನಗಳಲ್ಲಿಯೂ ಕಾಲ ಕಳೆಯುಹತ್ತಿದಳು.

ಮುಂದೆ ಮೂರು ನಾಲ್ಕು ವರುಷಗಳಲ್ಲಿ ಮಲ್ಹಾರರಾಯನೂ ತೀರಿ-ಕೊಂಡನು. ಅಹಲ್ಯಾಬಾಯಿಯ ಮಗನಾದ ಮಾಲೇರಾಯನು ಚಿಕ್ಕವನಿದ್ದನು. ಅಲ್ಲದೆ ಅವನ ಬುದ್ಧಿಯು ಸರಿಯಾಗಿರಲಿಲ್ಲ. ಆದುದರಿಂದ ಅಹಲ್ಯಾಬಾಯಿಯೆ ರಾಜ್ಯಕಾರಭಾರದ ಹೊಣೆಯನ್ನು ಹೊರಬೇಕಾಯಿತು. ಅವಳು ಒಳ್ಳೆಯ ದಕ್ಷತೆಯಿಂದ ರಾಜ್ಯವನ್ನಾಳಹತ್ತಿದಳು. ಪ್ರಜೆಗಳು ಅವಳನ್ನು ತಮ್ಮ ತಾಯಿಯಂತೆಯೂ ದೇವಿಯಂತೆಯೂ ಕಾಣುತ್ತಿದ್ದರು. ಅವಳ ಆಳಿಕೆಯಲ್ಲಿ ಸಜ್ಜನರಿಗೆ ಯಾವ ತೊಂದರೆಯೂ ಇರಲಿಲ್ಲ. ದುಷ್ಟರಿಗೆ ಸ್ವಲ್ಪವೂ ಸುಖ ಸಿಗಲಿಲ್ಲ.

ಕೆಲವು ಕಾಲದ ನಂತರ ಮಾಲೇರಾಯನೂ ತೀರಿಕೊಂಡನು. ಕೆಲವು ಸರದಾರರು, ದತ್ತಕ ತೆಗೆದುಕೊಳ್ಳಲು ಅಹಲ್ಯಾಬಾಯಿಗೆ ಹೇಳಿದರು. ಕೆಲವರು 'ಹೆಂಗಸು ರಾಜ್ಯಕಾರಭಾರಮಾಡಲು ಅಯೋಗ್ಯಳು' ಎಂದು ಬಂಡನ್ನು ಎಬ್ಬಿಸಿದರು. ಆದರೆ ಕೆಚ್ಚೆದೆಯ ಮಹಿಳೆಯಾದ ಅಹಲ್ಯಾಬಾಯಿಯ ಮುಂದೆ ಅವರ ಆಟ ನಡೆಯಲಿಲ್ಲ. ಸ್ವಾಮಿಭಕ್ತನಾದ—ತುಕೋಜಿಯ ಸಹಾಯ-ದಿಂದ ರಾಜ್ಯಕಾರಭಾರವು ಒಳ್ಳೆಯ ರೀತಿಯಿಂದ ಸಾಗಿತು. ರಾಜ್ಯದಲ್ಲಿ ಎಲ್ಲ ಕಡೆಗೂ ಶಾಂತಿ ನೆಲೆಸಿತು.

ಗಂಗಾಧರರಾಯನೆಂಬ ಮಂತ್ರಿಯು ರಾಜ್ಯವನ್ನು ಅಪಹರಿಸಿ ತಾನು ಆಳಬೇಕೆಂದು ದುರಾಲೋಚನೆ ಮಾಡಿದನು. ಈ ಸಂಗತಿ ಅಹಲ್ಯಾಬಾಯಿಗೆ ತಿಳಿಯಿತು. ಕೂಡಲೆ ಅಹಲ್ಯಾಬಾಯಿಯು ಅವನನ್ನು ಮಂತ್ರಿಪದದಿಂದ ಕಿತ್ತುಹಾಕಿದಳು. ಆಗ ಅವನು ಪೇಶ್ವೆ ರಘುನಾಥರಾಯನ (ರಾಘೋಬಾ ದಾದಾ) ಸಹಾಯವನ್ನು ಕೇಳಿದನು. ರಘುನಾಥರಾಯನು ಅವಳ ಮೇಲೆ ದಂಡೆತ್ತಿ ಬಂದನು. ಅಹಲ್ಯಾಬಾಯಿಯೂ ಯುದ್ಧಸಿದ್ಧತೆ ಮಾಡಿದ್ದಳು. ಆಕೆಗೆ ಸೋಲಾಗುವಂತೆ ಇರಲಿಲ್ಲ. ಆದರೂ ದಯಾಗುಣವುಳ್ಳ ಅವಳು 'ಸುಮ್ಮಸುಮ್ಮನೆ ರಕ್ತಪಾತವನ್ನು ಏಕೆ ಮಾಡಬೇಕು?' ಎಂದು ವಿನಯದಿಂದ ರಘುನಾಥರಾಯನಿಗೆ 'ನಾನು ಹೆಂಗಸು. ನನ್ನನ್ನು ಗೆದ್ದರೂ ನಿಮಗೆ ಅಪ-ಕೀರ್ತಿ, ನನ್ನಿಂದ ಸೋತರೂ ನಿಮಗೆ ಅಪಕೀರ್ತಿ. ಆದುದರಿಂದ ವಿಚಾರಮಾಡಿ ಯುದ್ಧ ಪ್ರಾರಂಭಿಸಿರಿ' ಎಂದು ಪತ್ರಬರೆದು ತಿಳುಹಿದಳು. ಅದನ್ನು ಓದಿ ರಘುನಾಥರಾಯನಿಗೆ ನಾಚಿಕೆಯೆನಿಸಿತು. "ನಿಮ್ಮ ಸುಖ-ದುಃಖಗಳನ್ನು ವಿಚಾರಿಸಲು ನಾನು ಬಂದಿದ್ದೆ" ಎಂದು ಸುಳ್ಳುಹೇಳಿ ಅವನು ಹಿಂದಿರುಗಿಹೋದನು.

ಅಹಲ್ಯಾಬಾಯಿಗೆ ಮತ್ತೆ ದುಃಖದ ಪ್ರಸಂಗ ಬಂದೊದಗಿತು. ಅವಳು ತನ್ನ ಮಗಳಾದ ಮುಕ್ತಾಬಾಯಿಯನ್ನು ಯಶವಂತರಾಯನೆಂಬ ಶೂರನಿಗೆ ಮದುವೆ ಮಾಡಿಕೊಟ್ಟಿದ್ದಳು. ಮುಕ್ತಾಬಾಯಿ ಹಡೆದ ಗಂಡುಕೂಸು ಸತ್ತು ಹೋಯಿತು. ಮುಂದೆ ಕೆಲವು ದಿನಗಳಲ್ಲಿ ಯಶವಂತರಾಯನೂ ಅಕಸ್ಮಾತ್ತಾಗಿ ಸತ್ತುಹೋದನು. ಮುಕ್ತಾಬಾಯಿಯು ಗಂಡನ ಕೂಡ ಸತಿ-ಹೋದಳು. ಇನ್ನು ಈ ಲೋಕದಲ್ಲಿ ಅಹಲ್ಯಾಬಾಯಿಗೆ ತನ್ನವರೆಂದು ಬೇರೆ ಯಾರೂ ಉಳಿಯಲಿಲ್ಲ; ದುಃಖದ ಸಮುದ್ರದಲ್ಲಿ ಮುಳುಗಿದಂತಿದ್ದರೂ ಅಹಲ್ಯಾಬಾಯಿ ಧೈರ್ಯವನ್ನು ಬಿಡಲಿಲ್ಲ. 'ಪ್ರಜೆಗಳೇ ತನ್ನ ಮಕ್ಕಳು; ಧರ್ಮವೇ ತನ್ನ ತಾಯಿ! ದೇವರೇ ತನ್ನ ತಂದೆ' ಎಂದು ಭಾವಿಸಿದಳು. ಮೂವತ್ತೆರಡು ವರುಷಗಳವರೆಗೆ ಧರ್ಮದಿಂದ ಅವಳು ರಾಜ್ಯವಾಳಿದಳು.

ಅಹಲ್ಯಾಬಾಯಿಯ ಜೀವನ ಬಹಳ ಸಾದಾತರದ್ದು. ಪ್ರಜೆಗಳ ಸುಖವೇ ತನ್ನ ಸುಖವೆಂದು ಆಕೆ ತಿಳಿದಿದ್ದಳು. ಬಡಬಗ್ಗರಿಗಾಗಿ ಅನ್ನಛತ್ರಗಳನ್ನೂ ಆಸ್ಪತ್ರೆಗಳನ್ನೂ ಇಡಿಸಿದಳು. ದೊಡ್ಡ ದೊಡ್ಡ ಯಾತ್ರಾಕ್ಷೇತ್ರಗಳಲ್ಲೆಲ್ಲ ತನ್ನ ಸೇವೆಯು ನಡೆಯುವಂತೆ ಏರ್ಪಾಡು ಮಾಡಿದಳು. ಕಾಶಿಯಿಂದ ರಾಮೇ-ಶ್ವರಕ್ಕೆ ನಿತ್ಯವೂ ಪೂಜೆಗಾಗಿ ಗಂಗಾನದಿಯ ನೀರು ಬರುವಂತೆ ವ್ಯವಸ್ಥೆ ಇರಿಸಿದ್ದಳು. ರೈತರಿಗೆ ಕಂದಾಯವು ಭಾರವಾಗದಂತೆ ನೋಡಿಕೊಂಡಳು. ಅವಳ ಆಳಿಕೆಯಲ್ಲಿ ಎಲ್ಲರೂ ಉಂಡುಟ್ಟು ಸುಖವಾಗಿದ್ದರು. ನ್ಯಾಯ-ಸತ್ಯಗಳು ಎಲ್ಲೆಡೆಯಲ್ಲಿ ಪಸರಿಸಿದ್ದುವು. ಅಹಲ್ಯಾಬಾಯಿ ಕ್ರಿ. ಶ. ೧೭೯೫ರಲ್ಲಿ ಸ್ವರ್ಗಸ್ಥಳಾದಳು.

## ಅಭ್ಯಸನಗಳು

೧. ಕೆಳಗೆ ಕೆಲವು ಮಾತುಗಳನ್ನು ಬರೆದಿದೆ. ಅವುಗಳಿಗೆ ಸಂಬಂಧಿಸಿದ ವ್ಯಕ್ತಿಗಳ ಹೆಸರುಗಳನ್ನು ಆ ಸಂಗತಿಗಳ ಮುಂದೆ ಹಾಕಿದ ಕಂಸಗಳಲ್ಲಿ ಬರೆಯಿರಿ.

(ಅ) ಅಹಲ್ಯಾಬಾಯಿಯ ತಂದೆಯು ( )

(ಬ) ಮಲ್ಹಾರರಾಯ ಹೋಳಕರನ ಮಗನು ( )

(ಕ) ಪಾಥರಡೆ ಗ್ರಾಮಕ್ಕೆ ಬಂದ ಅರಸು ( )

(ಡ) ರಾಜ್ಯಭಾರವನ್ನು ಸರಿಯಾಗಿ ನಡೆಸಲು ಅಹಲ್ಯಾಬಾಯಿಗೆ ಸಹಾಯ ಮಾಡಿದ ಸ್ವಾಮಿಭಕ್ತನು ( )

(ಇ) ರಾಜ್ಯವನ್ನು ಅಪಹರಿಸಲು ದುರಾಲೋಚನೆ ಮಾಡಿದ ಮಂತ್ರಿಯು ( )

೨. ರೈತನ ಮಗಳಾದ ಅಹಲ್ಯಾಬಾಯಿಯು ಸರದಾರನ ಹೆಂಡತಿ ಹೇಗೆ ಆದಳು?

೩. ಆಕೆಯ ರಾಜ್ಯದ ಮೇಲೆ ದಂಡೆತ್ತಿ ಬಂದ ರಘುನಾಥರಾಯನು ಹಿಂದೆ ತಿರುಗಿ ಏಕೆ ಹೋದನು?

೪. ಅಹಲ್ಯಾಬಾಯಿಯು ಪ್ರಜೆಗಳ ಹಿತಕ್ಕಾಗಿ ಯಾವ ಯಾವ ಕಾರ್ಯಗಳನ್ನು ಮಾಡಿದಳು?

# ೩೫. ನಾನಾ ಫಡಣವೀಸ

ಪೇಶ್ವೆ ಮಾಧವರಾಯನ ಕಾಲಕ್ಕೆ ಮರಾಠರ ರಾಜ್ಯವು ಬಹಳ ಘನತೆಗೆ ಏರಿತ್ತು. ಅವನ ತರುವಾಯ ನಾರಾಯಣರಾಯನು ಪೇಶ್ವೆಯ ಪಟ್ಟಕ್ಕೆ ಬಂದನು. ಇವನ ಕಾಲಕ್ಕೆ ಮರಾಠರ ರಾಜ್ಯದ ಸ್ಥಿತಿಯು ಬೇರೆಯಾಯಿತು. ಸರದಾರರೆಲ್ಲರೂ ತಮ್ಮ-ತಮ್ಮೊಳಗೆ ತಾಳ-ಮೇಳವಿಲ್ಲದಂತೆ ವರ್ತಿಸತೊಡಗಿದರು. ಸ್ವಾರ್ಥಿಯಾದ ರಾಘೋಬನು ತಾನೇ ಪೇಶ್ವೆಯಾಗಬೇಕೆಂದು ಬಯಸಿ ತನ್ನದೆ ಆದ ಒಂದು ಗುಂಪನ್ನು ಕಟ್ಟಿಕೊಂಡಿದ್ದನು. ಅವನ ಹೆಂಡತಿಯಾದ ಆನಂದೀಬಾಯಿಯು, ತಂತ್ರದಿಂದ ನಾರಾಯಣರಾಯನನ್ನು ಕೊಲ್ಲಿಸಿಬಿಟ್ಟಳು. ರಾಜಕಾರಣದಲ್ಲಿ ಕುಶಲರಾದ ಇಂಗ್ಲಿಷರು, ಆಗ ರಾಘೋಬನಿಗೆ ಸಹಾಯ ಮಾಡಿ ತಮ್ಮ ಕಾರ್ಯಸಾಧಿಸಿಕೊಳ್ಳಬೇಕೆಂಬ ಹವಣಿಕೆಯಲ್ಲಿ ಇದ್ದರು. ಇಂತಹ ಕಾಲದಲ್ಲಿ ಮರಾಠರ ರಾಜ್ಯವನ್ನು ಉಳುಹಿ ಅದನ್ನು ಬಾಳುವಂತೆ ಮಾಡಿದವನು ನಾನಾ ಫಡಣವೀಸನು.



ನಾನಾ ಫಡಣವೀಸ

ನಾನಾ ಫಡಣವೀಸನ ಪೂರ್ವಜರು ರತ್ನಾಗಿರಿ ಜಿಲ್ಲೆಯ 'ವೇಳಾಸ' ಎಂಬ ಊರಲ್ಲಿ ಇರುತ್ತಿದ್ದರು. 'ಭಾನು' ಎಂಬುದು ಇವರ ಮನೆತನದ ಅಡ್ಡಹೆಸರು. ನಾನಾ ಫಡಣವೀಸನ ಅಜ್ಜನು ಬಾಳಾಜಿ ವಿಶ್ವನಾಥನ ಸಂಗಡ ಬಂದು ಮರಾಠರ ರಾಜ್ಯದಲ್ಲಿ ನಿಂತನು. ಮುಂದೆ ಇವನ ತಂದೆಯು ಸಾತಾರೆಯಲ್ಲಿ, ಪೇಶ್ವೆಯವರಲ್ಲಿ ಫಡಣವೀಸ (ಲೆಕ್ಕ ಬರೆಯುವ ಕಾರಕೂನ)ನಾಗಿ

ಕೆಲಸ ಮಾಡುತ್ತಿದ್ದನು. ಆ ಸಮಯದಲ್ಲಿ ಎಂದರೆ ಕ್ರಿ. ಶ. ೧೭೪೨ರಲ್ಲಿ ನಾನಾನು ಹುಟ್ಟಿದನು. ಇತಿಹಾಸದಲ್ಲಿ ಇವನು 'ಬಾಳಾಜಿ ಜನಾರ್ದನ ಭಾನು ಉರ್ಫ್ ನಾನಾ ಫಡಣವೀಸ' ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ನಾನಾನು ಬಲು ಬುದ್ಧಿಶಾಲಿ; ಓದು-ಬರೆಹದಲ್ಲಿ ಅವನು ಬಹಳ ಜಾಣನಾಗಿ-ದ್ದನು. ಗಣಿತವು ಅವನ ಪ್ರೀತಿಯ ವಿಷಯವಾಗಿತ್ತು. ಸಾಲೆಯಲ್ಲಿ ಪಾಠ ಕಲಿಯುತ್ತಲೆ ಮನೆಗೆಲಸಗಳಲ್ಲಿ ತಂದೆ-ತಾಯಿಗಳಿಗೆ ನೆರವಾಗುವನು. ಮನೆ-ಯಲ್ಲಿ ನಿತ್ಯ ದೇವರ ಪೂಜೆ ಮಾಡುವವನು ನಾನಾನೇ. ಅವನು ಪ್ರತಿದಿವಸ ಸಂಧ್ಯಾವಂದನ ಸ್ತೋತ್ರಪಠನಗಳನ್ನು ತಪ್ಪದೆ ಮಾಡುತ್ತಿದ್ದನು.

ನಾನಾ ಫಡಣವೀಸನು ಓದು-ಬರೆಹಗಳಲ್ಲಷ್ಟೆ ಮುಂದೆ ಇದ್ದನಂತಲ್ಲ. ಓಡುವುದು, ಜಿಗಿಯುವುದು, ಕುದುರೆ ಹತ್ತುವುದು, ಕತ್ತಿ ತಿರುವುವುದು ಇವೇ ಮೊದಲಾದ ಯುದ್ಧವಿದ್ಯೆಗಳನ್ನೂ ಚೆನ್ನಾಗಿ ಕಲಿತನು. ಇವನ ವಯ-ಸ್ಸಿನವರು ಯಾರೂ ಇವನನ್ನು ಸರಿಗಟ್ಟುತ್ತಿರಲಿಲ್ಲ. ಇವನ ಕುಶಲತನವನ್ನು ಕಂಡು ಜನರು 'ಇವನು ಒಬ್ಬ ದೊಡ್ಡ ರಾಜಕಾರಣಿ ಆಗುವನು' ಎಂದು ಅನ್ನುತ್ತಿದ್ದರು. ವಯಸ್ಸಿಗೆ ಬಂದಮೇಲೆ ಇವನು ಪೇಶ್ವೆ ದರ್ಬಾರದಲ್ಲಿ ಕೆಲಸಕ್ಕೆ ಹೊಂದಿಕೊಂಡನು. ಮುಂದೆ ಇವನ ತಂದೆಯ ತರುವಾಯ ಇವನನ್ನೇ ಫಡಣವೀಸನ ಕೆಲಸಕ್ಕೆ ನಿಯಮಿಸಿಕೊಂಡನು.

ರಾಘೋಬನನ್ನು ಕಂಡರೆ ನಾನಾ ಫಡಣವೀಸನಿಗೆ ಆಗುತ್ತಿರಲಿಲ್ಲ. ನಾರಾಯಣರಾಯನ ಕೊಲೆಯಾದನಂತರ, ಆತನ ಹೆಂಡತಿಯಾದ ಗಂಗಾ ಬಾಯಿಯನ್ನು ರಕ್ಷಿಸುವ ಕೆಲಸವನ್ನು ನಾನಾ ಫಡಣವೀಸನೇ ಮಾಡಿದನು. ಮರಾಠಾ ಸರದಾರರ ಸಹಾಯದಿಂದ ಒಂದು ಆಡಳಿತಮಂಡಲವನ್ನು ಮಾಡಿ-ಕೊಂಡನು. ಗಂಗಾಬಾಯಿಯ ಹೆಸರಿನಿಂದ ತಾನೇ ರಾಜ್ಯಕಾರಭಾರ ನಡೆಸಿ-ದನು. ಮುಂದೆ ಗಂಗಾಬಾಯಿಯ ಹೊಟ್ಟೆಯಿಂದ ಗಂಡುಮಗನು ಹುಟ್ಟಿ ದನು. ಅವನಿಗೆ ಸವಾಯಿ ಮಾಧವರಾಯನೆಂದು ಹೆಸರನ್ನಿಟ್ಟರು. ಸವಾಯಿ ಮಾಧವರಾಯನು ಇನ್ನೂ ನಾಲ್ವತ್ತು ದಿವಸದವನಾಗುತ್ತಲೇ ಅವನನ್ನು ಪೇಶ್ವೆಯ ಪಟ್ಟಕ್ಕೆ ಕುಳ್ಳಿರಿಸಲಾಯಿತು. ಮುಂದೆ ಅವನ ಹೆಸರಿನಿಂದ ರಾಜ್ಯ-ಕಾರಭಾರವು ಸಾಗತೊಡಗಿತು. ಇದೆಲ್ಲಕ್ಕೂ ನಾನಾ ಫಡಣವೀಸನೇ ಮುಂದಾ ಳಾಗಿ ನಿಂತನು.

ಸವಾಯಿ ಮಾಧವರಾಯನ ಆಳಿಕೆಯೆಂದರೆ ನಾನಾ ಫಡಣವೀಸನ ಆಳಿಕೆಯೆ ಎಂದು ಹೇಳಬಹುದು. ಅವನು ಸವಾಯಿ ಮಾಧವರಾಯನನ್ನು ಪ್ರೀತಿಯಿಂದ ಎತ್ತಿ ಆಡಿಸಿದ್ದನು. ಆದುದರಿಂದ ಅವನು ನಾನಾ ಫಡಣವೀಸನಿಗೆ ಹೆದರುತ್ತಿದ್ದನು. ನಾನಾನು ಮಾಡಿದ ಯಾವ ಕೆಲಸಕ್ಕೂ ಅವನು ವಿರೋಧ

ಮಾಡುತ್ತಿರಲಿಲ್ಲ. ರಾಘೋಬನ ಕಾಟವಂತೂ ಎಡೆಬಿಡದೆ ನಡೆದೇ ಇತ್ತು. ಆದುದರಿಂದ ಸವಾಯಿ ಮಾಧವರಾಯನು ರಾಜಕಾರಣದಲ್ಲಿ ಅಷ್ಟೊಂದು ಮನಸ್ಸುಹಾಕಲಿಲ್ಲ. ಅವನು ಸುಖ-ವಿಲಾಸಗಳಲ್ಲಿಯೆ ತನ್ನ ಕಾಲವನ್ನು ಕಳೆಯುತ್ತಿದ್ದನು. ನಾನಾ ಫಡಣವೀಸನನ್ನು ಕೇಳದೆ ಅವನು ಯಾವ ಕೆಲಸವನ್ನೂ ಮಾಡುತ್ತಿದ್ದಿಲ್ಲ. ನಾನಾ ಫಡಣವೀಸನು ಒಳ್ಳೆಯ ದಕ್ಷತೆಯಿಂದ ಹಾಗು ಕುಶಲತೆಯಿಂದ ರಾಜ್ಯಭಾರವನ್ನು ನೋಡಿಕೊಳ್ಳುತ್ತಿದ್ದನು.

ಪೇಶ್ವೆ ರಾಜ್ಯದಲ್ಲಿ ಹರಿಪಂತ ಫಡಕೆ, ಸಖಾರಾಮ ಬಾಪು, ಮಾಮಾ ತ್ರ್ಯಂಬಕರಾವ ಇವರು ರಾಜಕಾರಣಪಂಡಿತರಾಗಿದ್ದರು. ಅವರು ನಾನಾ ಫಡಣವೀಸನ ಚಾತುರ್ಯಕ್ಕೆ ಮೆಚ್ಚಿ ಅವನಿಗೆ ಯಾವಾಗಲೂ ಸಹಾಯ ಮಾಡುತ್ತಿದ್ದರು. ಇದರಿಂದ ರಾಘೋಬನು ಮಾಡುವ ತಂತ್ರಗಳಾವವೂ ನಡೆಯದಂತಾದುವು. ಆದುದರಿಂದ ಅವನು ತನ್ನ ಕೈಸಾಗದೆ ಇಂಗ್ಲಿಷರನ್ನು ಮೊರೆಹೊಕ್ಕನು. ಆಗ ಇಂಗ್ಲಿಷರು ರಾಘೋಬನ ಬೆನ್ನುಕಟ್ಟಿ ಬಂದರು. ಘನಘೋರ ಸಂಗ್ರಾಮವಾಯಿತು. ಮರಾಠರ ಹೊಡೆತಕ್ಕೆ ಇಂಗ್ಲಿಷರು ಮುದ್ದೆಯಾದರು. ಕೊನೆಗೆ ಇಬ್ಬರ ನಡುವೆ ಒಪ್ಪಂದವಾಯಿತು.

ರಾಘೋಬನು ಅಷ್ಟಕ್ಕೆ ಸುಮ್ಮನಾಗಲಿಲ್ಲ. ಮತ್ತೆ ಮತ್ತೆ ನಾನಾನನ್ನು ಕಾಡುತ್ತಲೆ ಇದ್ದನು. ಇದಕ್ಕೆ ನಾನಾನು ಮಣಿಯಲಿಲ್ಲ. ಇಷ್ಟರಲ್ಲಿಯೆ ನಿಜಾಮನು ಮರಾಠರ ಮೇಲೆ ಸಾಗಿಬಂದನು. ಕ್ರಿ. ಶ. ೧೭೯೫ರಲ್ಲಿ ಖರಡೆ ಎಂಬಲ್ಲಿ ಇಬ್ಬರಿಗೂ ಕಾಳಗವಾಯಿತು. ಮರಾಠರು ನಿಜಾಮನನ್ನು ಸೋಲಿಸಿ ಹಣ್ಣಿಗೆ ತಂದರು. ಇದರಿಂದ ನಾನಾ ಫಡಣವೀಸನ ಕೀರ್ತಿ ಮರಾಠರಲ್ಲಿ ಅಷ್ಟೇ ಅಲ್ಲ, ಭಾರತದ ತುಂಬ ಹಬ್ಬಿತು.

ಸ್ವಲ್ಪ ಕಾಲದಲ್ಲಿಯೆ ಸವಾಯಿ ಮಾಧವರಾಯನು ತೀರಿಕೊಂಡನು. ಅವನ ತರುವಾಯ ರಾಘೋಬನ ಮಗನಾದ ೨ನೆಯ ಬಾಜೀರಾಯನು ಪೇಶ್ವೆಯಾದನು. ತಂದೆಗೆ ವಿರೋಧಿಯಾಗಿ ನಿಂತಿದ್ದ ನಾನಾ ಫಡಣವೀಸನನ್ನು ಅವನು ಬಂಧಿಸಿ ಸೆರೆಮನೆಗೆ ಕಳುಹಿದನು. ಇದರಿಂದ ನಾನಾನಿಗೆ ಬಹಳ ದುಃಖವಾಯಿತು. ಮರಾಠರ ರಾಜ್ಯವನ್ನು ಉಳುಹಲು ಮಾಡಿದ ತನ್ನ ಪ್ರಯತ್ನಕ್ಕೆ ಸಿಕ್ಕ ಪ್ರತಿಫಲವನ್ನು ನೆನೆದು ಅವನು ವ್ಯಸನಪಟ್ಟನು. ಕೆಲಕಾಲದ ನಂತರ ಅವನ ಬಿಡುಗಡೆಯಾಯಿತು. ಆದರೆ ಮುಂದೆ ಬಹಳ ದಿವಸ ಬದುಕಲಿಲ್ಲ. ಕ್ರಿ. ಶ. ೧೮೦೦ರಲ್ಲಿ ಅವನು ಮರಣಹೊಂದಿದನು.

ನಾನಾ ಫಡಣವೀಸನು ಮರಾಠರ ಸರದಾರ ಮಂಡಳದಲ್ಲಿದ್ದ ‘ಮೂರುವರೆ ಜಾಣ’ರಲ್ಲಿ ಅರ್ಧಜಾಣನು. ಇವನು ಮರಾಠಾ ರಾಜ್ಯಕ್ಕೆ ಬೆನ್ನೆಲುವಿನಂತೆ ಇದ್ದನು. ಇವನ ಜಾಣತನ, ಪ್ರಸಂಗಾವಧಾನ, ಪ್ರಾಮಾಣಿಕತನ, ಕರ್ತವ್ಯ

ದಕ್ಷತೆಗಳು ಹೊಗಳತಕ್ಕಂತವು. ಇವನ ಕಾರ್ಯತತ್ಪರತೆ, ದೇಶಪ್ರೇಮಗಳನ್ನು ಕಂಡು ಯುರೋಪಿಯನರು ಬೆರಗುಗೊಂಡಿದ್ದರು. ನಾನಾ ಫಡಣವೀಸನು ಇರುವವರೆಗೂ ಇಂಗ್ಲಿಷರ ಆಟವು ನಡೆಯಲಿಲ್ಲ. ಇವನ ಮರಣದಿಂದ ಇಂಗ್ಲಿಷ್ ಅಧಿಕಾರಿಗಳಿಗೆಲ್ಲ ಆನಂದವಾಯಿತಂತೆ. ಮುಂದೆ ಸ್ವಲ್ಪ ದಿನಗಳಲ್ಲಿಯೆ ಅವರು ಮರಾಠ ರಾಜ್ಯವನ್ನು ಸ್ವಾಧೀನಪಡಿಸಿಕೊಂಡರು.

## ಅಭ್ಯಸನಗಳು

೧. ನಾನಾ ಫಡಣವೀಸನು ಚಿಕ್ಕಂದಿನಲ್ಲಿ ಯಾವ ಯಾವ ವಿದ್ಯೆಗಳನ್ನು ಕಲಿತುಕೊಂಡನು?

೨. ಸವಾಯಿ ಮಾಧವರಾಯನ ಆಳಿಕೆಯಲ್ಲಿ ನಾನಾ ಫಡಣವೀಸನೇ ಎಲ್ಲ ರಾಜ್ಯಭಾರವನ್ನು ಸಾಗಿಸುತ್ತಿದ್ದನೇಕೆ?

೩. ನಾನಾ ಫಡಣವೀಸನ ಕೀರ್ತಿಯು ಭಾರತದ ತುಂಬ ಯಾವಾಗ ಹಬ್ಬಿತು?

೪. ಕೊನೆಗೆ ನಾನಾ ಫಡಣವೀಸನನ್ನು ಸೆರೆಯಲ್ಲಿ ಯಾರು ಇಟ್ಟರು? ಮತ್ತು ಯಾಕೆ?

೫. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಪದಗಳನ್ನು ತುಂಬಿ ವಾಕ್ಯಗಳನ್ನು ಪೂರ್ತಿಗೊಳಿಸಿರಿ.

ಅ) ಇವನ ತಂದೆಯು ಪೇಶ್ವೆಯಲ್ಲಿ......ಕೆಲಸ ಮಾಡುತ್ತಿದ್ದನು?

ಆ) ಪೇಶ್ವೆರಾಜ್ಯದಲ್ಲಿ ೧)......೨)......೩)...ಇವರು ರಾಜಕಾರಣ ಪಂಡಿತರಾಗಿದ್ದರು.

ಇ) ನಿಜಾಮನಿಗೂ ಮರಾಠರಿಗೂ......ಎಂಬಲ್ಲಿ ಕ್ರಿ. ಶ....ರಲ್ಲಿ ಕಾಳಗವಾಯಿತು.

ಈ) ಇವನು ಮರಾಠಾ ಸರದಾರರಲ್ಲಿ......ರಲ್ಲಿ ಅರ್ಧ. ಆಗಿದ್ದನು.

# ೩೬. ವೀರರಾಣಿ ಕಿತ್ತೂರ ಚೆನ್ನಮ್ಮ

ಬೆಳಗಾವಿ ಜಿಲ್ಲೆಯಲ್ಲಿ ಕಿತ್ತೂರು ಎಂಬುದೊಂದು ದೊಡ್ಡ ಗ್ರಾಮವಿದೆ. ಅದು ಸುಮಾರು ಒಂದುವರೆ ನೂರು ವರುಷಗಳ ಹಿಂದೆ ಒಂದು ದೊಡ್ಡ ದೇಸಗತಿಯ ಮುಖ್ಯ ಪಟ್ಟಣವಾಗಿತ್ತು. ಅಲ್ಲಿಯ ಮಲ್ಲಸರ್ಜ ದೇಸಾಯಿಯ ಕಾಲದಲ್ಲಿ, ಕಿತ್ತೂರು ಕರ್ನಾಟಕದಲ್ಲೆಲ್ಲ ಹೆಸರುವಾಸಿಯಾಗಿತ್ತು. ಮಲ್ಲಸರ್ಜ ದೇಸಾಯಿಗೆ ಅವ್ವರುದ್ರವ್ವ ಎಂಬ ಹೆಂಡತಿ ಇದ್ದಳು. ಅವಳ ಹೊಟ್ಟೆಯಿಂದ ಇಬ್ಬರು ಮಕ್ಕಳು ಹುಟ್ಟಿದರು. ಅವರಲ್ಲಿ ಶಿವಲಿಂಗರುದ್ರಸರ್ಜನು ಹಿರಿಯನು. ಕೆಲವು ವರುಷಗಳ ತರುವಾಯ ಅವ್ವರುದ್ರವ್ವನು ಮರಣಹೊಂದಿದಳು. ಬಳಿಕ ಮಲ್ಲಸರ್ಜ ದೊರೆಯು ಅವ್ವ ಚೆನ್ನವ್ವನನ್ನು ಮದುವೆಯಾದರು.



ಇಂಗ್ಲಿಷರನ್ನು ಎದುರಿಸಿದ ವೀರರಾಣಿ ಚೆನ್ನಮ್ಮ

ಬೆಳಗಾಂವಿಯ ಬಳಿಯಲ್ಲಿ ಕಾಗತಿ ಎಂಬ ಊರು ಇದೆ. ಅವ್ವ ಚೆನ್ನವ್ವನು ಈ ಕಾಗತಿಯ ದೇಸಾಯಿ ಮನೆತನದ ಹೆಣ್ಣುಮಗಳು. ಕ್ರಿ. ಶ. ೧೭೭೮-ರಲ್ಲಿ ಅವಳು ಹುಟ್ಟಿದಳು. ಚೆನ್ನಮ್ಮರಾಣಿ ತುಂಬ ಚೆಲುವೆಯಾಗಿದ್ದಳು; ಅದರಂತೆ ಸದ್ಗುಣಗಳ ಖಣಿಯೂ ಆಗಿದ್ದಳು. ಆಗಿನ ಕಾಲದ ಎಲ್ಲ ಹೆಣ್ಣುಮಕ್ಕಳಿಗಿಂತ ಅವಳು ಹೆಚ್ಚಾಗಿ ವಿದ್ಯಾಭ್ಯಾಸ ಮಾಡಿದ್ದಳು.

ಚೆನ್ನಮ್ಮನು ಮಲ್ಲಸರ್ಜನ ಹೆಂಡತಿಯಾದಳು. ಆದರೆ ಆಕೆ ಬರಿ ಸುಖ ಭೋಗಗಳನ್ನು ಅನುಭವಿಸುತ್ತ ಅರಮನೆಯಲ್ಲಿಯೆ ಕುಳಿತುಕೊಳ್ಳಲಿಲ್ಲ.

ಗಂಡನ ಜೊತೆಗೆ ಆಗಾಗ ದರ್ಬಾರಿಗೆ ಹೋಗುವಳು. ಅಲ್ಲಿ ನಡೆಯುವ ಕಾರ್ಯ-ಕಲಾಪಗಳನ್ನು ನೋಡುವಳು; ಚರ್ಚೆಗಳನ್ನು ಕೇಳುವಳು; ಅಲ್ಲದೆ ಪ್ರಸಂಗ ಬಂದಾಗ ತಾನೂ ರಾಜ್ಯಕಾರಭಾರದ ಬಗೆಗೆ ಮಾತಾಡುವಳು. ಇದರಿಂದ ಆಕೆಗೆ ಆಡಳಿತದ ವಿಷಯದಲ್ಲಿ ಸಂಪೂರ್ಣ ತಿಳಿವಳಿಕೆಯುಂಟಾಯಿತು. ಬರು-ಬರುತ್ತ ಆಕೆ, ರಾಜ್ಯಕಾರಭಾರದಲ್ಲಿ ಗಂಡನಿಗೆ ನೆರವಾಗತೊಡಗಿದಳು.

ಮಲ್ಲಸರ್ಜನು ಕೆಲವು ಕಾಲ ಮರಾಠರಿಂದಲೂ ಮತ್ತೆ ಕೆಲವು ಕಾಲ ಟೀಪೂಸುಲ್ತಾನನಿಂದಲೂ ತೊಂದರೆಗಳನ್ನು ಅನುಭವಿಸಿದ್ದನು. ಮರಾಠರಂತೂ ಮೇಲಿಂದ ಮೇಲೆ ಅವನಿಗೆ ತೊಂದರೆ ಕೊಡುತ್ತಲೆ ಇದ್ದರು. ಆದರೂ ಧೈರ್ಯಶಾಲಿಯಾದ ಮಲ್ಲಸರ್ಜನು ಅವರಿಗೆ ಮಣಿಯದೆ, ಒಳ್ಳೆಯ ರೀತಿಯಿಂದ ಕಾರಭಾರವನ್ನು ಸಾಗಿಸಿದ್ದನು. ಆದರೆ ಕೆಲವೇ ದಿನಗಳಲ್ಲಿ ಅವನು ಮರಣ ಹೊಂದಿದನು. ಆಗ ಚೆನ್ನಮ್ಮನಿಗಾದ ದುಃಖವನ್ನು ಹೇಳಲಾಗಸಲ್ಲ. ಆದರೂ ಅವಳು ಧೈರ್ಯತಾಳಿದಳು. ಹಿರಿಯಮಗ ಶಿವಲಿಂಗರುದ್ರಸರ್ಜನಿಗೆ ಪಟ್ಟಗಟ್ಟಿದಳು. ಇಬ್ಬರೂ ಕೂಡಿ ಆಡಳಿತವನ್ನು ನಡೆಸತೊಡಗಿದರು.

ಇಷ್ಟುಹೊತ್ತಿಗೆ ಮರಾಠರ ರಾಜ್ಯವು ಕಳೆಗುಂದುತ್ತ ನಡೆದಿತ್ತು. ಇಂಗ್ಲಿಷರ ಪ್ರಾಬಲ್ಯವು ಹೆಚ್ಚಾಗಿತ್ತು. ಇಂಗ್ಲಿಷ್ ಕಮಿಶನರ್ ಮನ್ರೋ ದೊರೆಯು, ದೇಸಾಯಿಯವರ ಹಾಗು ಚೆನ್ನಮ್ಮರಾಣಿಯ ಸಮ್ಮತ ಪಡೆದುಕೊಂಡು ಅವರನ್ನು ಮಾಂಡಲಿಕರನ್ನಾಗಿ ಮಾಡಿಕೊಂಡನು; ಅವರಿಗೆ ಸನದನ್ನು ಕೊಟ್ಟು ತಮ್ಮ ಒಬ್ಬ ರೆಸಿಡೆಂಟನನ್ನು ಅವರ ದರ್ಬಾರದ ಮೇಲ್ವಿಚಾರಣೆಗಾಗಿ ನೇಮಿಸಿದನು.

ಶಿವಲಿಂಗರುದ್ರಸರ್ಜನು ದೇಸಾಯಿಯಾಗಿದ್ದರೂ ಚೆನ್ನಮ್ಮರಾಣಿಯೇ ಹೆಚ್ಚಾಗಿ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು. ಸಂಸ್ಥಾನದ ಆಳಿಕೆ ಒಳ್ಳೆಯ ರೀತಿಯಿಂದ ಸಾಗಿತು. ಮಲ್ಲಸರ್ಜ ದೊರೆ ತೀರಿಕೊಂಡ ದುಃಖ ಸ್ವಲ್ಪ ಸ್ವಲ್ಪ ಮರೆಯತೊಡಗಿತ್ತು. ಆದರೆ ವಿಧಿಯ ಕಾಟ ಅಷ್ಟಕ್ಕೇ ಮುಗಿದಿರಲಿಲ್ಲ. ಶಿವಲಿಂಗರುದ್ರಸರ್ಜನಿಗೆ ಕ್ಷಯರೋಗ ತಗುಲಿತು. ಎಷ್ಟು ಪ್ರಯತ್ನಿಸಿದರೂ ಅದು ನೆಟ್ಟಗಾಗಲಿಲ್ಲ. ಅವನು ಸಾಯುವನೆಂದು ನಿಶ್ಚಿತವಾಗಿ ತಿಳಿದು ಬಂದಿತು. ಆತನಿಗೆ ಮಕ್ಕಳಿರಲಿಲ್ಲ. ಆದುದರಿಂದ ಚೆನ್ನಮ್ಮರಾಣಿ, ದೇಸಗತಿಗೆ ಸಂಬಂಧಿಕರಾದ ಮಾಸ್ತಮರಡಿಯ ಗೌಡರ ಮಗನನ್ನು ಅವನಿಗೆ ದತ್ತಕ ಮಾಡಿದಳು. ಮುಂದೆ ಸ್ವಲ್ಪ ಕಾಲದಲ್ಲಿಯೇ ಶಿವಲಿಂಗರುದ್ರಸರ್ಜನು ತೀರಿ ಕೊಂಡನು.

ದತ್ತಕಮಗನು ಇನ್ನೂ ಚಿಕ್ಕವನಿದ್ದನು. ಅವನಿಗೆ "ಸವಾಯಿಮಲ್ಲಸರ್ಜ' ಎಂದು ಹೆಸರನ್ನಿಟ್ಟು, ಚೆನ್ನಮ್ಮರಾಣಿ ತಾನೇ ಕಾರಭಾರಮಾಡತೊಡಗಿದಳು.

ಇವಳ ಆಳಿಕೆಯೆಂದರೆ ಕಿತ್ತೂರುನಾಡಿನವರ ಸುಖದ ಕಾಲ. ಪ್ರಜೆಗಳನ್ನು ಈಕೆ ಮಕ್ಕಳಂತೆ ಕಾಪಾಡಿದಳು. ಈಗಲೂ ಚೆನ್ನಮ್ಮರಾಣಿಯನ್ನು ಆ ನಾಡಿನ ಜನರು ಕೊಂಡಾಡುತ್ತಾರೆ.

ಕಿತ್ತೂರು ಸಂಸ್ಥಾನದಲ್ಲಿ ಆಗ ಕೆಲವು ನೀಚ ಜನರೂ ಇದ್ದರು. ಅವರು ತಮ್ಮ ಸ್ವಾರ್ಥ ಸಾಧಿಸಿಕೊಳ್ಳಲು, ದೇಸಾಯಿಯು ಸತ್ತ ಬಳಿಕ ದತ್ತಕ ಮಾಡಿದರೆಂದು ಸುಳ್ಳುಸುಳ್ಳೇ ಇಂಗ್ಲಿಷ್ ಸರಕಾರದವರಿಗೆ ತಿಳುಹಿದರು. ಅವರಲ್ಲಿ ಖನ್ನೂರ ಮಲ್ಲಪ್ಪಶೆಟ್ಟಿ ಎಂಬುವನು ಇಂಗ್ಲಿಷರಿಂದ ಲಂಚತಿಂದು, ಸಂಸ್ಥಾನದ ಬಗೆಗೆ ಅಲ್ಲದ ಸಲ್ಲದ ವಿಷಯವನ್ನು ಹೇಳಿದ್ದನು. ಆದುದರಿಂದ ಧಾರವಾಡದ ಕಲೆಕ್ಟರನಾದ ಥ್ಯಾಕರೇ ಸಾಹೇಬನು ಒಮ್ಮೆಲೆ ಕಿತ್ತೂರಿಗೆ ಬಂದು, ಆಡಳಿತವನ್ನು ಮಲ್ಲಪ್ಪಸೆಟ್ಟಿ ಮತ್ತು ವೆಂಕಟರಾವ ಕಾರಭಾರಿಗಳಿಗೆ ಒಪ್ಪಿಸಿದನು. ದೇಸಗತಿಯ ಖಜಾನೆಯನ್ನು ಬೀಗಮುದ್ರೆಮಾಡಿ ಹೊರಟು ಹೋದನು.

ಇದನ್ನು ಕಂಡು ಚೆನ್ನಮ್ಮರಾಣಿಗೆ ಬಹಳ ಕೋಪಬಂದಿತು. ಇಂಗ್ಲಿಷರು ತನ್ನ ದೇಸಗತಿಯ ಕಾರಭಾರದಲ್ಲಿ ಕೈಯನ್ನು ಹಾಕುವುದು ಸ್ವಾಭಿಮಾನಿ-ಯಾದ ಚೆನ್ನವ್ವನಿಗೆ ಸಹನವಾಗಲಿಲ್ಲ. ಆದರೂ ತಮ್ಮ ಕಾರಭಾರದಲ್ಲಿ ಕೈ ಹಾಕಬಾರದೆಂದು ಸಮಾಧಾನದ ಮಾತುಗಳಿಂದಲೆ ಅವರಿಗೆ ಹೇಳಿಕೊಂಡಳು. ಅವರ ಕೂಡ ಒಪ್ಪಂದಮಾಡಿಕೊಳ್ಳಲೂ ಪ್ರಯತ್ನಿಸಿದಳು. ಆದರೆ ಅವೆಲ್ಲ ನಿಷ್ಫಲವಾದುವು. ನಿರ್ವಾಹವಿಲ್ಲದೆ ಅವಳು ಯುದ್ಧದ ಸಿದ್ಧತೆಯನ್ನು ಮಾಡಬೇಕಾಯಿತು.

ಬೀಗಮುದ್ರೆಯನ್ನು ಒಡೆದು ಚೆನ್ನಮ್ಮ ಖಜಾನೆಯನ್ನು ವಶಪಡಿಸಿಕೊಂಡಳು. ಕಾರಭಾರಮಾಡುತ್ತಿದ್ದ ಚಾಡಿಖೋರ ಮಲ್ಲಪ್ಪಸೆಟ್ಟಿಯನ್ನು ದೇಶದ್ರೋಹಿಯೆಂದು ಆನೆಯಕಾಲಿನಿಂದ ತುಳಿಸಿ ಕೊಲ್ಲಿಸಿದಳು. ಇದನ್ನು ಕೇಳಿ ಥ್ಯಾಕರೆಸಾಹೇಬನು ತನ್ನ ದಂಡನ್ನು ತಕ್ಕೊಂಡು ಬಂದು ಕಿತ್ತೂರನ್ನು ಮುತ್ತಿದನು. ಚೆನ್ನವ್ವನು ಯುದ್ಧದ ಸಿದ್ಧತೆಯನ್ನು ಮಾಡಿಯೆ ಇಟ್ಟಿದ್ದಳು. ಒಂದೆರಡು ದಿನ ದಾರಿಕಾಯ್ದು, ಆ ವೀರರಾಣಿಯು ಕೋಟೆಯ ಬಾಗಿಲನ್ನು ತೆರೆದು, ತನ್ನ ದಂಡಿನೊಡನೆ ವೈರಿಗಳ ಮೇಲೆ ಬಿದ್ದಳು. ಎರಡೂ ದಂಡಿನವರಿಗೆ ಕೈಗೆ ಕೈ ಹತ್ತಿತು. ರಾಣಿಯ ಹೊಡೆತಕ್ಕೆ ಇಂಗ್ಲಿಷರ ದಂಡಿನವರು ದಿಕ್ಕೋಪಾಲಾಗಿ ಓಡಿಹೋದರು. ಥ್ಯಾಕರೆ ಸಾಹೇಬನು ಗುಂಡುತಾಗಿ ಮಡಿದನು.

ಅಂದಿನ ಯುದ್ಧದಲ್ಲಿ ಚೆನ್ನಮ್ಮನು ತೋರಿಸಿದ ಸಾಹಸ-ಪರಾಕ್ರಮಗಳನ್ನು ಕಂಡು ಜನರು ಬೆರಗಾದರು. ಪ್ರಜೆಗಳೆಲ್ಲರೂ ಆಕೆಯನ್ನು

ಮತ್ತಿಷ್ಟು ಪ್ರೀತಿಸಹತ್ತಿದರು. ಚೆನ್ನಮ್ಮರಾಣಿ ಶೂರಳಿದ್ದಷ್ಟೇ ಕೋಮಲ ಹೃದಯದವಳೂ ಇದ್ದಳು. ಯುದ್ಧದಲ್ಲಿ ಸೆರೆಸಿಕ್ಕ ಇಂಗ್ಲಿಷರ ಎಳ ವಯಸ್ಸಿನ ಮಕ್ಕಳನ್ನು ಅವಳು ಪ್ರೀತಿಸಿ ಮುದ್ದಾಡಿದಳು. ಆ ಹುಡುಗರನ್ನು ಅವರವರ ತಂದೆ-ತಾಯಿಗಳ ಕಡೆಗೆ ಕಳುಹುವ ವ್ಯವಸ್ಥೆ ಮಾಡಿದಳು.

ಸೋಲಿನ ಸುದ್ದಿಯನ್ನು ಕೇಳಿ ಇಂಗ್ಲಿಷರು, ಬೆಳಗಾವಿಯಿಂದ ದೊಡ್ಡ ದಂಡಿನೊಡನೆ ಚಾಪ್ಲಿನ್‌ಸಾಹೇಬನನ್ನು ಕಳುಹಿದರು. ಆ ದೊಡ್ಡ ಸೈನ್ಯದ ಮುಂದೆ ವೀರರಾಣಿಯ ಆಟ ನಡೆಯಲಿಲ್ಲ. ಕ್ರಿ. ಶ. ೧೮೨೪ರಲ್ಲಿ ಕಿತ್ತೂರು ಇಂಗ್ಲಿಷರ ವಶವಾಯಿತು. ಚಾಪ್ಲಿನ್‌ಸಾಹೇಬನು ಚೆನ್ನಮ್ಮರಾಣಿಯನ್ನೂ ಶಿವಲಿಂಗರುದ್ರಸರ್ಜನ ಹೆಂಡತಿಯಾದ ಅವ್ವವೀರವ್ವನನ್ನೂ ಬಂಧಿಸಿದನು. ಅವರನ್ನು ಒಯ್ದು ಬೈಲಹೊಂಗಲದ ಕೋಟೆಯಲ್ಲಿ ಬಂಧನದಲ್ಲಿ ಇರಿಸಿದನು. ಮುಂದೆ ೫ ವರುಷಗಳ ತರುವಾಯ ಚೆನ್ನಮ್ಮರಾಣಿಯು ಅಲ್ಲಿಯೇ ಮರಣ ಹೊಂದಿದಳು. ಕಿತ್ತೂರುನಾಡಿನ ಜನರು ತಮ್ಮ ಪ್ರೀತಿಯ ರಾಣಿಯ ಕೀರ್ತಿಯನ್ನು ಈಗಲೂ ಕೊಂಡಾಡುತ್ತಾರೆ. ಆ ಭಾಗದ ಜನರು ಕೃತ್ತಿಕಾ ನಕ್ಷತ್ರ ಪುಂಜಕ್ಕೆ "ಚೆನ್ನಮ್ಮನ ದಂಡೆ" ಎಂದೂ, ಮೃಗಶಿರಾ ನಕ್ಷತ್ರಕ್ಕೆ 'ಚೆನ್ನಮ್ಮನ ಮಂಚ' ಎಂದೂ ಹೇಳುತ್ತಾರೆ. ಇದು ಚೆನ್ನಮ್ಮರಾಣಿಯ ವಿಷಯದಲ್ಲಿ ಜನರಲ್ಲಿರುವ ಪ್ರೀತಿ-ಭಕ್ತಿಗಳ ಗುರುತಾಗಿದೆ.

## ಅಭ್ಯಸನಗಳು

೧. ಚೆನ್ನಮ್ಮನು ಯಾವ ಮನೆತನದವಳು? ಇವಳು ಯಾರನ್ನು ಮದುವೆ-ಯಾದಳು?

೨. ಶಿವಲಿಂಗರುದ್ರಸರ್ಜನನು ಸಾಯುವ ಮುಂದೆ ಯಾರನ್ನು ಅವನಿಗೆ ದತ್ತಕ-ಮಾಡಿದರು?

೩. ಸವಾಯಿ ಮಲ್ಲಸರ್ಜನು ಸಣ್ಣವನಿದ್ದಾಗ ಕಿತ್ತೂರಿನ ಕಾರಭಾರವನ್ನು ಯಾರು ನೋಡುತ್ತಿದ್ದರು?

೪. ಕಿತ್ತೂರ ಸಂಸ್ಥಾನದ ಬಗ್ಗೆ ಅಲ್ಲದ-ಸಲ್ಲದ ವಿಷಯವನ್ನು ಇಂಗ್ಲಿಷರಿಗೆ ಯಾರು ಹೇಳಿದರು?

೫. ಚೆನ್ನಮ್ಮನು ಇಂಗ್ಲಿಷರ ಕೂಡ ಯಾಕೆ ಯುದ್ಧಮಾಡಿದಳು?

೬. ಈ ಯುದ್ಧದಲ್ಲಿ ಯಾರಿಗೆ ಗೆಲುವು ಆಯಿತು?

೭. ಚೆನ್ನಮ್ಮನನ್ನು ಈಗಲೂ ಕಿತ್ತೂರುನಾಡಿನ ಜನರು ಯಾಕೆ ಕೊಂಡಾಡುತ್ತಾರೆ?

೮. ಕಿತ್ತೂರ ಚೆನ್ನಮ್ಮನ ಕಥೆಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೩೭. ರಾಜಾ ರಾಮಮೋಹನ ರಾಯ

ಇವರು ಬಂಗಾಲಿಗಳು. ರಾಧಾನಗರವೆಂಬ ಸಣ್ಣ ಹಳ್ಳಿ ಇವರ ಜನ್ಮ ಸ್ಥಳವು. ತಂದೆ ರಾಮಕಾಂತರಾಯರು; ತಾಯಿ ತಾರಿಣೀದೇವಿ. ಇವರು ವೈಷ್ಣವಸಂಪ್ರದಾಯಕ್ಕೆ ಸೇರಿದವರು. ೧೭೭೪ನೆಯ ಇಸವಿಯಲ್ಲಿ ರಾಮ ಮೋಹನರು ಹುಟ್ಟಿದರು.

ಬಾಲಕ ರಾಮಮೋಹನನು ಬಹಳ ಬುದ್ಧಿವಂತನಾಗಿದ್ದನು. ಆಗಿನ ಕಾಲದಲ್ಲಿ ಎಲ್ಲರೂ ಪಾರಸಿ-ಉರ್ದು ಭಾಷೆಗಳನ್ನೇ ವಿಶೇಷವಾಗಿ ಕಲಿಯು-ತ್ತಿದ್ದರು. ಅದರಂತೆ ರಾಮಮೋಹನನು, ಮೊದಲು ಪಾಟಣಾದಲ್ಲಿದ್ದು ಆ ಭಾಷೆಗಳನ್ನೇ ಕಲಿಯತೊಡಗಿದನು. ಸ್ವಲ್ಪ ಕಾಲದಲ್ಲಿಯೆ ಇವನು ಅವೆ



ರಾಮಮೋಹನ ರಾಯ

ರಡೂ ಭಾಷೆಗಳನ್ನು ಚೆನ್ನಾಗಿ ಕಲಿತುಕೊಂಡನು. ಮುಂದೆ ಸಂಸ್ಕೃತ ಅಭ್ಯಾಸವನ್ನೂ ಮಾಡಬೇಕೆಂಬ ವಿಚಾರ ನಡೆಯಿತು. ಕಾಶೀಪಟ್ಟಣವು ಆಗ ಸಂಸ್ಕೃತ ವಿದ್ಯೆಗೆ ಮುಖ್ಯ ಕೇಂದ್ರವಾಗಿತ್ತು. ಆದುದರಿಂದ ರಾಮಮೋಹ ನನು ಸಂಸ್ಕೃತದ ಅಧ್ಯಯನಕ್ಕಾಗಿ ಕಾಶೀಪಟ್ಟಣಕ್ಕೆ ಹೋದನು. ಆಗ ಇವ ನಿಗೆ ಇನ್ನೂ ೧೦ ವರುಷ; ಮುಂದೆ ನಾಲ್ಕು ವರುಷಗಳ ವರೆಗೆ ಕಾಶಿಯಲ್ಲಿ ಇದ್ದುಕೊಂಡು ಸಂಸ್ಕೃತ ಭಾಷೆಯಲ್ಲಿ ಅಸಾಧಾರಣವಾದ ಪಾಂಡಿತ್ಯವನ್ನು ಗಳಿಸಿದನು.

ಪರ್ಸಿಯನ್ ಮತ್ತು ಸಂಸ್ಕೃತ ಭಾಷೆಗಳಲ್ಲಿಯ ಧರ್ಮಗ್ರಂಥಗಳ ಅಭ್ಯಾಸದಿಂದ, ರಾಮಮೋಹನನಿಗೆ ಮೂರ್ತಿಪೂಜೆಯು ಸರಿಯಲ್ಲವೆಂದು ಎನಿಸಿತು. ಆದುದರಿಂದ 'ಹಿಂದುಗಳು ಮೂರ್ತಿಗಳನ್ನು ಪೂಜಿಸಬಾರದು' ಎಂದು ಹೇಳುವ ಒಂದು ಪುಸ್ತಕವನ್ನು ಅವನು ಬರೆದನು. ಆ ಪುಸ್ತಕವು ಪರ್ಸಿಯನ್ ಭಾಷೆಯಲ್ಲಿ ಇತ್ತು. 'ಇವನ ಮೇಲೆ ಮುಸಲ್ಮಾನ ಧರ್ಮದ ಪರಿಣಾಮವಾಗಿದೆ; ಎಂತಲೇ ಇವನು ಹಿಂದುಧರ್ಮವನ್ನು ಟೀಕಿಸುತ್ತಾನೆ' ಎಂದು ಹಿಂದುಜನರು ಸಿಟ್ಟಿಗೆದ್ದರು. ರಾಮಮೋಹನನ ತಂದೆಗೂ ಕೋಪ ಬಂದಿತು. ಅವನು ಮಗನನ್ನು ಮನೆಯಿಂದ ಹೊರಗೆ ಹಾಕಿದನು.

ಆಗ ರಾಮಮೋಹನನು ನಮ್ಮ ದೇಶದ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿದನು. ಜನರ ಪರಿಸ್ಥಿತಿಯನ್ನು ಪ್ರತ್ಯಕ್ಷ ಕಂಡು ಅನುಭವಪಡೆದನು. ಕಾಲುನಡಿಗೆಯಿಂದ ಹಿಮಾಲಯವನ್ನು ದಾಟಿ ತಿಬೇಟ ದೇಶಕ್ಕೂ ಹೋದನು; ಅಲ್ಲಿಯ ಜನರ ಧರ್ಮ ಮತ್ತು ಭಾಷೆಗಳನ್ನು ಅಭ್ಯಾಸಮಾಡಿದನು. ಹೀಗೆ ನಾಲ್ಕು ವರುಷಗಳ ವರೆಗೆ ದೇಶಸಂಚಾರಮಾಡಿ ರಾಮಮೋಹನನು ತಿರುಗಿ ಮನೆಗೆ ಬಂದನು. ಇಷ್ಟರಲ್ಲಿಯೇ ರಾಮಮೋಹನನ ಹೆಂಡತಿಯು ತೀರಿಕೊಂಡಿದ್ದಳು. ಇನ್ನೊಂದು ಲಗ್ನ ಮಾಡಿದರೆ ಮಗನು ಮನೆ ಹಿಡಿದುಕೊಂಡು ಇರುವನೆಂದು ತಿಳಿದು ತಂದೆ-ತಾಯಿಗಳು ಇವನ ಮದುವೆಯ ಸಿದ್ಧತೆಯನ್ನು ನಡೆಸಿದರು. ಆದರೆ ರಾಮಮೋಹನನು ಅದಕ್ಕೆ ಒಪ್ಪಲಿಲ್ಲ. 'ಸಂಘಗಳನ್ನು ಕಟ್ಟಬೇಕು, ಅವುಗಳ ಮುಖಾಂತರ ಸಮಾಜ ಸುಧಾರಣೆಯನ್ನು ಮಾಡಬೇಕು' ಎಂದು ಇವನು ವಿಚಾರಮಾಡಿದನು. ಧರ್ಮದ ವಿಷಯದಲ್ಲಿ ಇವನು ತಂದೆ-ತಾಯಿಗಳ ಮಾತನ್ನು ಮೀರಿದುದರಿಂದ, ಮತ್ತೆ ಇವನಿಗೆ ಮನೆಬಿಟ್ಟು ಹೊರಗೆ ಹೋಗುವ ಪ್ರಸಂಗ ಬಂತು.

ಇಷ್ಟಾದರೂ ರಾಮಮೋಹನನು ತನ್ನ ನಿಶ್ಚಯವನ್ನು ಬಿಡಲಿಲ್ಲ; ಹಿಂದು ಮತ್ತು ಇಸ್ಲಾಂ ಧರ್ಮಗಳನ್ನು ಆಳವಾಗಿ ಅಭ್ಯಾಸಮಾಡಿದನು. ಗ್ರೀಕ್ ಮತ್ತು ಹೆಬ್ರೂ ಭಾಷೆಗಳನ್ನೂ ಕಲಿತುಕೊಂಡನು. ಆ ಭಾಷೆಗಳ ಮುಖಾಂತರ ಕ್ರಿಸ್ತಧರ್ಮದ ಅಭ್ಯಾಸವನ್ನು ಮಾಡಿದನು. 'ಎಲ್ಲ ಧರ್ಮಗಳ ತಳಹದಿಯು ಒಂದೇ ಆಗಿರುವುದು. ದೇವರು ಒಬ್ಬನೇ ಇರುವನು. ಆದರೆ ಅವನನ್ನು ಕಾಣುವ ಮಾರ್ಗಗಳು ಮಾತ್ರ ಹಲವು ಇರುವುವು' ಎಂದು ರಾಮಮೋಹನನಿಗೆ ಮನವರಿಕೆಯಾಯಿತು. ಇದನ್ನೇ ಇವನು ಒಂದು ಗ್ರಂಥರೂಪದಿಂದ ಪ್ರಕಟಿಸಿದನು. ಧರ್ಮದ ಬಗೆಗೆ ಜನರಲ್ಲಿ ಇರುವ ತಪ್ಪುತಿಳಿವಳಿಕೆಯನ್ನು ಹೋಗಲಾಡಿಸಲು ಇವನು ಪ್ರಚಾರವನ್ನು ನಡಿಸಿದನು; ಉಪನ್ಯಾಸಗಳನ್ನು

ಮಾಡತೊಡಗಿದನು. ಇದರಿಂದಂತೂ ಹಳೆಯ ಸಂಪ್ರದಾಯದ ಜನರು ಇವನ ಮೇಲೆ ಮತ್ತಿಷ್ಟು ರೇಗಿದರು.

ಈ ಅವಧಿಯಲ್ಲಿ ರಾಮಮೋಹನನ ತಂದೆಯು ತೀರಿಕೊಂಡನು. ಇದರಿಂದ ಇವನಿಗೇ ಪೂರ್ಣ ಸ್ವಾತಂತ್ರ್ಯವು ಸಿಕ್ಕಿತು. ಆದರೆ "ಇವನು ಧರ್ಮ ಬಿಟ್ಟವನು ಇರುವನು; ಆದುದರಿಂದ ಇವನಿಗೆ ತಂದೆಯ ಆಸ್ತಿಯು ದೊರೆಯಕೂಡದು" ಎಂದು ಹೇಳಿ, ವಿರೋಧಿಗಳು ಇವನ ತಾಯಿಯ ಮನಸ್ಸನ್ನು ಕೆಡಿಸಿದರು. ನ್ಯಾಯಾಲಯದ ಮುಂದೆ ವ್ಯಾಜ್ಯವು ಹೋಯಿತು. "ನಾನು ನನ್ನ ತಂದೆಯ ಧರ್ಮವನ್ನು ಎಂದೂ ಬಿಟ್ಟಿಲ್ಲ. ಆದರೆ ಆ ಧರ್ಮಪಾಲನೆಯ ಬಗೆಗೆ ಜನರಲ್ಲಿ ಇರುವ ತಪ್ಪುಕಲ್ಪನೆಗಳನ್ನು ತೆಗೆದುಹಾಕಲು ಯತ್ನಿಸಿದ್ದೇನೆ" ಎಂದು ರಾಮಮೋಹನನು ನ್ಯಾಯಾಲಯದಲ್ಲಿ ಸಿದ್ಧಮಾಡಿ ತೋರಿಸಿದನು. ತೀರ್ಪು ಇವನಿಗೆ ಅನುಕೂಲವಾಗಿ ಸಿಕ್ಕಿತು. ಆದರೆ ಇವನು ಆಸ್ತಿಯನ್ನು ಮುಟ್ಟದೆ ತಾಯಿಗೇ ಅದನ್ನು ಬಿಟ್ಟುಕೊಟ್ಟನು.

"ಸರಕಾರೀ ಅಧಿಕಾರವಿಲ್ಲದೆ ಜನರು ತನಗೆ ಗೌರವಕೊಡುವುದಿಲ್ಲ; ತನ್ನ ಮಾತನ್ನು ಅವರು ನಂಬುವದಿಲ್ಲ. ಆದುದರಿಂದ ಇಂಗ್ಲಿಷ್ ಭಾಷೆಯನ್ನು ಕಲಿತು ಸರಕಾರದಲ್ಲಿ ಅಧಿಕಾರದ ಸ್ಥಾನವನ್ನು ಸಂಪಾದಿಸಬೇಕು" ಎಂದು ರಾಮಮೋಹನನಿಗೆ ಎನಿಸಿತು. ಆದುದರಿಂದ ಇವನು ಇಂಗ್ಲಿಷ್ ಭಾಷೆಯ ಅಭ್ಯಾಸವನ್ನು ಪ್ರಾರಂಭಿಸಿದನು. ಕೆಲವೇ ದಿನಗಳಲ್ಲಿ ಇವನಿಗೆ ಇಂಗ್ಲಿಷ್ ಚೆನ್ನಾಗಿ ಓದಲು-ಬರೆಯಲು ಬರಹತ್ತಿತು. ರಂಗಪುರದ ಕಲೆಕ್ಟರನ ಸಹಾಯದಿಂದ ಸರಕಾರಿ ನೌಕರಿಯೂ ಸಿಕ್ಕಿತು.

ಸರಕಾರಿ ನೌಕರಿಯಲ್ಲಿ ಇರುವಾಗಲೂ ರಾಮಮೋಹನರು ಸಮಾಜ ಸೇವೆಯ ಕಾರ್ಯವನ್ನು ಬಿಟ್ಟಿರಲಿಲ್ಲ. ಇವರು ಮೇಲಧಿಕಾರಿಗಳಿಗೆ ಹೆದರಿ ನಡೆಯುತ್ತಿರಲಿಲ್ಲ. ಅವರ ಅನುಗ್ರಹವನ್ನು ಸಂಪಾದಿಸಬೇಕೆಂದು ಎಂದೂ ಅವರ ಮುಖಸ್ತುತಿಯನ್ನು ಮಾಡಲಿಲ್ಲ. ತಮ್ಮ ಗೌರವವನ್ನು ಕಾಯ್ದುಕೊಂಡು ದಕ್ಷತೆಯಿಂದ ಕೆಲಸ ಮಾಡಿದ್ದರಿಂದ ಇವರಿಗೆ ತಾನಾಗಿಯೆ ದೊಡ್ಡ ದೊಡ್ಡ ಹುದ್ದೆಗಳು ದೊರೆತುವು. ಇದರಿಂದ ಇವರ ಕೀರ್ತಿಯು ಬಂಗಾಲದ ತುಂಬ ಹಬ್ಬಿತು.

ಸರಕಾರೀ ಕೆಲಸದಲ್ಲಿಯೆ ರಾಮಮೋಹನರ ವೇಳೆ ಹೆಚ್ಚಾಗಿ ಹೋಗತೊಡಗಿತು. ಇದರಿಂದ ಸಮಾಜಸೇವೆಯ ಕಾರ್ಯಕ್ಕೆ ಅಡ್ಡಿಯಾಗುತ್ತದೆ ಎಂದು ಇವರಿಗೆ ಎನಿಸಿತು. ಆದುದರಿಂದ ಹದಿನಾಲ್ಕು ವರ್ಷಗಳ ತರುವಾಯ ಇವರು ನೌಕರಿಯನ್ನು ಬಿಟ್ಟುಬಿಟ್ಟರು. ಮುಂದೆ ಇವರು ಕಲಕತ್ತೆಗೆ ಹೋದರು; ಒಂದು ಸ್ಥಳವನ್ನು ಕೊಂಡುಕೊಂಡು ಅಲ್ಲಿ ಬ್ರಹ್ಮಸಮಾಜವನ್ನು

ಸ್ಥಾಪಿಸಿದರು. ಎಷ್ಟೋ ಬುದ್ಧಿವಂತರು ಈ ಸಮಾಜವನ್ನು ಸೇರಿದರು. ಆಗಿನ ಕಾಲದಲ್ಲಿ ಕ್ರಿಸ್ತ ಮಿಶನರಿಗಳು ಬಹಳ ಜನರನ್ನು ಧರ್ಮಾಂತರ ಮಾಡುತ್ತಿದ್ದರು. ಬಂಗಾಲದಲ್ಲಿ ಬ್ರಹ್ಮಸಮಾಜದ ಪ್ರಭಾವವು ಹೆಚ್ಚಾದಂತೆ, ಮಿಶನರಿಗಳ ಆಟವು ಸಾಗದಂತಾಯಿತು. ಅವರು ಆಗಿನ ಸರಕಾರದವರ ಸಹಾಯದಿಂದ ರಾಮಮೋಹನರನ್ನು ಬಗ್ಗುಬಡಿಯಲು ಯತ್ನಿಸಿದರು. ಆದರೆ ರಾಮಮೋಹನರು ಧೈರ್ಯದಿಂದ ಅವರನ್ನು ಎದುರಿಸಿ ಹಿಮ್ಮೆಟ್ಟಿಸಿದರು.

ಆ ಸಮಯಕ್ಕೆ ಲಾರ್ಡ್ ವಿಲಿಯಂ ಬೆಂಟಿಂಕ್ ಎಂಬವರು ಭಾರತದ ಗವ್ಹರ್ನರ್ ಜನರಲ್ ಆಗಿ ಬಂದರು. ಅವರಿಗೆ ರಾಮಮೋಹನರ ಪರಿಚಯವಾಯಿತು. ಸಾಮಾಜಿಕ ಸುಧಾರಣೆಗಳ ಬಗೆಗೆ ಇಬ್ಬರಲ್ಲಿಯೂ ಮಾತುಗಳಾದುವು. ರಾಮಮೋಹನರ ಸಲಹೆಯ ಮೇರೆಗೆ ಶಿಶುಹತ್ಯೆ, ಸಹಗಮನ ಮೊದಲಾದ ಅನಿಷ್ಟ ಪದ್ಧತಿಗಳನ್ನು ತಡೆದುಹಾಕುವ ಕಾಯ್ದೆಗಳು ಪ್ರಚಾರದಲ್ಲಿ ಬಂದುವು. ಇವರ ಪ್ರಯತ್ನದಿಂದಲೆ ಕಲಕತ್ತೆಯಲ್ಲಿ 'ಪ್ರೆಸಿಡೆನ್ಸಿ ಹಿಂದೂ ಕಾಲೇಜು' ಸ್ಥಾಪಿತವಾಯಿತು. ನ್ಯಾಯಾಲಯಗಳಲ್ಲಿ ಹಿಂದುಜನರೂ ಜ್ಯೂರರ್ ಆಗುವಂತೆ ಸವಲತ್ತು ಸಿಕ್ಕಿತು.

ಇಂಗ್ಲಂಡಿನಲ್ಲಿಯ ಬ್ರಿಟಿಷ್ ಸರಕಾರಕ್ಕೆ ಭಾರತದ ಜನರ ಬಗೆಗೆ ಸರಿಯಾದ ಜ್ಞಾನವಿರುವುದಿಲ್ಲವೆಂದು ರಾಮಮೋಹನರಿಗೆ ಎನಿಸಿತು. ಇಂಗ್ಲಂಡಿಗೆ ಹೋಗಿ ಇಲ್ಲಿಯ ಸ್ಥಿತಿಗತಿಗಳನ್ನು ಚೆನ್ನಾಗಿ ಮನನಮಾಡಿಕೊಡಬೇಕೆಂದು ಇವರಿಗೆ ಆಶೆಯಾಯಿತು. ಆ ಮೊದಲು ಸುಶಿಕ್ಷಿತರಾದ ಹಿಂದು ಜನರು ಯಾರೂ ಪರದೇಶಕ್ಕೆ ಹೋಗಿರಲಿಲ್ಲ. ರಾಮಮೋಹನರು ಇಂಗ್ಲಂಡಿಗೆ ಹೋಗಲು ಸಂಧಿಯನ್ನು ನೋಡತೊಡಗಿದರು. ಅದರಂತೆ ಸಂಧಿಯು ಸಿಕ್ಕಿತು. ಆಗಿನ ಮೊಗಲ್‌ಬಾದಶಹನಿಗೆ ಕಡಿಮೆ ಉಂಬಳಿ ಸಿಗುತ್ತಿತ್ತು. ಅದನ್ನು ಹೆಚ್ಚುಮಾಡಿಸಿಕೊಳ್ಳಬೇಕೆಂದು ಅವನು, ರಾಮಮೋಹನರಿಗೆ 'ರಾಜಾ' ಎಂಬ ಬಿರುದನ್ನು ಕೊಟ್ಟು ಇಂಗ್ಲಂಡಿಗೆ ಕಳುಹಿದನು.

ಇಂಗ್ಲಂಡಿನಲ್ಲಿಯೂ ರಾಮಮೋಹನರ ಪ್ರಭಾವವು ಹೆಚ್ಚಿತು. ನಮ್ಮ ದೇಶದಲ್ಲಿ ಇಂಗ್ಲಿಷ್ ಸರಕಾರದವರು ಮಾಡುತ್ತಿದ್ದ ಅನ್ಯಾಯಗಳನ್ನು ಇವರು ಇಂಗ್ಲಂಡಿನ ಜನರಿಗೆ ಚೆನ್ನಾಗಿ ತಿಳುಹಿದರು. ಹಿಂದುಗಳ ಸಂಸ್ಕೃತಿಯ ಬಗೆಗೆ ಎಷ್ಟೋ ವ್ಯಾಖ್ಯಾನಗಳನ್ನು ಕೊಟ್ಟರು. ತಿರುಗಿ ಸ್ವದೇಶಕ್ಕೆ ಬರುವ ಮೊದಲೆ ಇವರು ಬ್ರಿಸ್ಟಲಿನಲ್ಲಿ, ಕ್ರಿ. ಶ. ೧೮೩೩ರಲ್ಲಿ ಮರಣಹೊಂದಿದರು.

### ಅಭ್ಯಸನಗಳು

೧. ರಾಜಾರಾಮ ಮೋಹನರಾಯರ ತಂದೆ-ತಾಯಿಗಳಾರು?

೨. ಇವರು ಚಿಕ್ಕಂದಿನಲ್ಲಿ ಯಾವ ಯಾವ ಭಾಷೆಗಳ ಅಭ್ಯಾಸವನ್ನು ಮಾಡಿದರು?

೩. ಇವರ ತಂದೆಯು ಇವರನ್ನು ಮನೆಯಿಂದ ಏಕೆ ಹೊರಗೆ ಹಾಕಿದರು?
೪. ಇವರು ತಮ್ಮ ಸರಕಾರಿ ನೌಕರಿಯನ್ನು ಏಕೆ ಬಿಟ್ಟರು?
೫. ಇವರು ಯಾವ ಸಮಾಜವನ್ನು ಸ್ಥಾಪಿಸಿದರು?
೬. ಇವರು ಹೇಳುವ ಧಾರ್ಮಿಕ ವಿಚಾರಗಳು ಯಾವುವು?
೭. ಲಾರ್ಡ ವಿಲಿಯಂ ಬೆಂಟಿಂಕನು ರಾಮಮೋಹನ ರಾಯರ ಸಹಾಯದಿಂದ ಯಾವ ಯಾವ ಸಾಮಾಜಿಕ ಸುಧಾರಣೆ ಮಾಡಿದನು?
೮. ಇವರು ಇಂಗ್ಲಂಡಿಗೆ ಹೋಗಿ ಏನು ಮಾಡಿದರು?

# ೩೮. ರಣಜಿತಸಿಂಗ

ದೇಶದ ಇತಿಹಾಸದಲ್ಲಿ ಒಬ್ಬನ ಹೆಸರು ಮೆರೆಯಬೇಕಾದರೆ ಆ ಮನುಷ್ಯ ವೀರನಿರಬೇಕಾಗುವುದು; ಇಲ್ಲವೆ ವಿದ್ಯಾವಂತನಾಗಿರಬೇಕಾಗುವುದು. ರಣಜಿತ ಸಿಂಗನು ತನ್ನ ವೀರತನದಿಂದ ಇತಿಹಾಸದಲ್ಲಿ ಹೆಸರನ್ನು ಪಡೆದವನು.

ಗುರು ನಾನಕನು ಹೊಸತಾಗಿ ಸ್ಥಾಪಿಸಿದ ಸೀಖಧರ್ಮದ ವಿಷಯ ನಿಮಗೆ ಗೊತ್ತಿದೆಯಲ್ಲವೆ? ನಾನಕನ ತರುವಾಯ ಅವನ ಧರ್ಮವು ಪಂಜಾಬ ದೇಶ-ದಲ್ಲೆಲ್ಲ ಹಬ್ಬಿ ಹರಡಿತು. ಈ ಧರ್ಮಕ್ಕೆ ಸೇರಿದವರಲ್ಲಿ ಅನೇಕ ಜನರು ಸಣ್ಣ ಸಣ್ಣ ರಾಜ್ಯಗಳ ಒಡೆಯರಾಗಿದ್ದರು. ಅವರೆಲ್ಲ ತಮ್ಮಿಷ್ಟಕ್ಕೆ ತಾವು ಇದ್ದು-ಬಿಟ್ಟಿದ್ದರು. ಆದುದರಿಂದ ತಮ್ಮ ಧರ್ಮದ ಜನರಿಗೆ ಬೇರೆಯವರಿಂದ ಉಂಟಾ-ಗುವ ತೊಂದರೆಯನ್ನು ತಪ್ಪಿಸಲಿಕ್ಕೆ ಅವರು ಸಮರ್ಥರಾಗಿರಲಿಲ್ಲ. ಎಂತಲೇ ಸೀಖ ಧರ್ಮದವರು ಅನೇಕ ಕಷ್ಟ-ನಷ್ಟಗಳನ್ನು ಸಹಿಸಬೇಕಾಯಿತು. ಮೊಗಲ ಅರಸನಾದ ಔರಂಗಜೇಬನಂತೂ ಸೀಖರಿಗೆ ಬಹಳ ಉಪದ್ರವವನ್ನು ಕೊಟ್ಟ. ಆಗ ಅವರು ನಿರ್ವಾಹವಿಲ್ಲದೆ ಶಸ್ತ್ರಗಳನ್ನು ಹಿಡಿದು ಯುದ್ಧವನ್ನು ಮಾಡ-ಬೇಕಾಯಿತು. ಅದರಿಂದ, ಔರಂಗಜೇಬನು ಮುಂದೆ ಸೀಖರ ಗೊಡವೆಗೆ ಹೋಗುವುದನ್ನು ಬಿಟ್ಟುಬಿಟ್ಟನು.

ಸಣ್ಣಪುಟ್ಟ ಸೀಖ ಅರಸರಲ್ಲಿ ಸರಿಯಾದ ಹೊಂದಿಕೆಯಿರಲಿಲ್ಲ. ಮುಂದೆ ಕ್ರಿ. ಶ. ೧೯ನೆಯ ಶತಮಾನದಲ್ಲಿ, ಸೀಖರಲ್ಲೆಲ್ಲ ಒಕ್ಕಟ್ಟನ್ನು ಉಂಟುಮಾಡಿ-ದವನೆಂದರೆ ವೀರ ರಣಜಿತಸಿಂಗನು. ಇವನ ಕಾಲದಿಂದಲೇ 'ಸೀಖರೆಂದರೆ ರಣಶೂರರು' ಎಂಬ ಮಾತು ನಮ್ಮ ನಾಡಿನ ಜನರಿಗೆಲ್ಲ ಗೊತ್ತಾಯಿತು.

ರಣಜಿತಸಿಂಗನು ಸೀಖ ಧರ್ಮದವನೆ. ಇವನು ಕ್ರಿ. ಶ. ೧೭೮೦ರಲ್ಲಿ ಹುಟ್ಟಿದನು. ಇವನ ತಂದೆಯು ಪಂಜಾಬದಲ್ಲಿ ಒಬ್ಬ ಚಿಕ್ಕ ಪಾಳೆಯಗಾರ. ರಣಜಿತ ಸಿಂಗನು ಇನ್ನೂ ೧೪ ವರುಷದವನಿರುವಾಗಲೆ ತಂದೆಯು ತೀರಿಕೊಂಡನು.

ರಣಜಿತಸಿಂಗನ ತಾಯಿ ಅಷ್ಟು ಬುದ್ಧಿವಂತೆಯಾಗಿರಲಿಲ್ಲ. ಆದುದರಿಂದ ಸಂಸ್ಥಾನದ ಆಡಳಿತವನ್ನೆಲ್ಲ ಇವನ ಅತ್ತೆಯಾದ ಸದಕೌವರಳು ನೋಡಿಕೊಳ್ಳ-ತೊಡಗಿದಳು. ಮುಂದೆ ರಣಜಿತಸಿಂಗನು ವಯಸ್ಸಿಗೆ ಬಂದ ಬಳಿಕ ತಾನೇ ಪಾಳೆಯಗಾರನಾದನು.

ಆ ಕಾಲದಲ್ಲಿ ಅಫಗಣಿಸ್ತಾನದ ಅಮೀರನು ಪಂಜಾಬದ ಮೇಲೆ ದಾಳಿ-ಯನ್ನು ಮಾಡಿದನು. ಆಗ ರಣಜಿತಸಿಂಗನು ಅವನ ಗೆಳೆತನ ಮಾಡಿ ಅವನಿಗೆ ಸಹಾಯ ಮಾಡಿದನು. ಆದುದರಿಂದ ಅಮೀರನು ಲಾಹೋರ ಹಾಗು ಅದರ ಸುತ್ತಲಿನ ಸೀಮೆಯನ್ನು ಇವನಿಗೆ ಕೊಟ್ಟನಲ್ಲದೆ, 'ರಾಜ' ಎಂಬ ಬಿರುದನ್ನು



ಸೀಖರನ್ನು ಒಂದುಗೂಡಿಸಿದ ರಣಜಿತಸಿಂಗ

ಕೊಟ್ಟನು. ಇದರಿಂದ ರಣಜಿತಸಿಂಗನು ಲಾಹೋರವನ್ನು ತನ್ನ ರಾಜಧಾನಿ-ಯನ್ನಾಗಿ ಮಾಡಿಕೊಂಡು ಆಳಹತ್ತಿದನು.

ದಿನದಿನಕ್ಕೆ ರಣಜಿತಸಿಂಗನು ಪ್ರಬಲನಾದನು. ಇದನ್ನು ಕಂಡು ಇತರ ಪಾಳೆಯಗಾರರು ಹೊಟ್ಟೆಕಿಚ್ಚು ಪಡಹತ್ತಿದರು. ಆಗ ರಣಜಿತಸಿಂಗನು ಅವರ ಮೇಲೆ ಏರಿಹೋದನು; ಸೀಖರ ಮತ್ತೊಂದು ಮುಖ್ಯ ಸ್ಥಾನವಾದ ಅಮೃತ-ಸರವನ್ನು ವಶಪಡಿಸಿಕೊಂಡನು. ಇದರಿಂದ ಉಳಿದ ಚಿಕ್ಕಪುಟ್ಟ ಪಾಳೆಯ-ಗಾರರು ಹೆದರಿ, ತಾವಾಗಿಯೆ ಇವನ ಅಂಕಿತಕ್ಕೆ ಒಳಗಾದರು. ಸಣ್ಣ ರಾಜ-

ನಾಗಿದ್ದ ರಣಜಿತಸಿಂಗನು, ಮುಂದೆ ಸ್ವಲ್ಪ ಕಾಲದಲ್ಲಿಯೆ ಮಹಾರಾಜನಾದನು. ಪಂಜಾಬದಲ್ಲಿದ್ದ ಸೀಖರೆಲ್ಲರೂ ಇವನಿಗೆ ಅಂಕಿತರಾದರು. ರಣಜಿತಸಿಂಗನು ಸೀಖರಲ್ಲಿ ಧೈರ್ಯವನ್ನೂ ದೇಶಾಭಿಮಾನವನ್ನೂ ಧರ್ಮಾಭಿಮಾನವನ್ನೂ ತುಂಬಿ-ದನು. ತಮ್ಮ ರಾಜ್ಯದ ಬಗೆಗೆ ಅವರಲ್ಲಿ ಪ್ರೀತಿಯನ್ನು ಹುಟ್ಟಿಸಿದನು. ಚಿಕ್ಕ ಚಿಕ್ಕ ಪಾಳೆಯಗಾರರನ್ನು ಪ್ರೇಮ ಹಾಗು ಗೌರವಗಳಿಂದ ನಡೆಸಿಕೊಂಡನು. ಇದರಿಂದ ಸೀಖರೆಲ್ಲರೂ ರಣಜಿತಸಿಂಗನನ್ನು ತಮ್ಮ ಮುಂದಾಳೆಂದು ಒಪ್ಪಿ ಪ್ರೀತಿಸಹತ್ತಿದರು. ಅವನ ಸಲುವಾಗಿ ಬೇಕಾದವರ ಕೂಡ ಕಾದಾಡಲಿಕ್ಕೂ ಸಿದ್ಧರಾದರು.

ಮುಂದೆ ರಣಜಿತಸಿಂಗನು, ಮುಸಲ್ಮಾನರ ರಾಜ್ಯಗಳಾದ ಮುಲ್ತಾನ್, ಕಾಶ್ಮೀರ, ಪೇಶಾವರಗಳನ್ನು ಗೆದ್ದನು. ಇದರಿಂದ ಅವನ ಚಿಕ್ಕರಾಜ್ಯವು ಬೆಳೆದು ದೊಡ್ಡದಾಯಿತು. ಇವನ ರಾಜ್ಯದ ಪೂರ್ವದಿಕ್ಕಿನಲ್ಲಿ ಇಂಗ್ಲಿಷರ ರಾಜ್ಯವಿತ್ತು. ರಣಜಿತಸಿಂಗನು ಇಂಗ್ಲಿಷರೊಡನೆ ಯುದ್ಧಮಾಡಬೇಕಾದ ಅನೇಕ ಪ್ರಸಂಗಗಳನ್ನು ಯುಕ್ತಿಯಿಂದ ತಪ್ಪಿಸಿದನು. ಇದರಿಂದ ಇಂಗ್ಲಿಷರಿಗೂ ಇವನಿಗೂ ಗೆಳೆತನವಾಯಿತು. ಸೀಖರ ರಾಜ್ಯಕ್ಕೂ ಇಂಗ್ಲಿಷರ ರಾಜ್ಯಕ್ಕೂ ಶತದ್ರೂ (ಸತಲಜ) ನದಿಯು ಸೀಮೆಯಾಯಿತು, ಸೀಖರ ಒಕ್ಕಟ್ಟನ್ನೂ ರಣಜಿತಸಿಂಗನ ಶೌರ್ಯವನ್ನೂ ಕಂಡು, ಇಂಗ್ಲಿಷರು ಕೂಡ ಅವನಿಗೆ ಹೆದರು-ತ್ತಿದ್ದರು. ಆದುದರಿಂದಲೇ ಅವರು ಇವನ ಗೆಳೆತನ ಮಾಡಿದ್ದರು. ರಣಜಿತ ಸಿಂಗನು ಇಂಗ್ಲಿಷ್ ಸೈನಿಕರ ಶಿಸ್ತನ್ನು ಕಂಡು ಬಹಳ ಮೆಚ್ಚಿದನು. ಅವರಂತೆ ತನ್ನ ಸೀಖ ಸೈನಿಕರನ್ನೂ ತರಬೇತುಗೊಳಿಸಬೇಕೆಂದು ಇಚ್ಛೆಪಟ್ಟನು. ಇಂಗ್ಲಿಷ್ ಶಿಕ್ಷಕರಿಂದ ತನ್ನ ದಂಡಿನವರಿಗೆ ಕವಾಯಿತು ಕಲಿಸಿದನು. ಮೊದಲೇ ವೀರ-ರಾದ ಸೀಖರಲ್ಲಿ ಒಂದು ಬಗೆಯ ಶಿಸ್ತು ಬಂದಿತು. ಇದರಿಂದ ಸೀಖರ ಹೊಡೆತಕ್ಕೆ ಯಾರೂ ಇದಿರಾಗದಂತಾಯಿತು.

ಸತಲಜ ನದಿಯ ದಕ್ಷಿಣಕ್ಕಿರುವ ಭಾಗವನ್ನೂ ಗೆಲ್ಲಬೇಕೆಂದು ರಣಜಿತ ಸಿಂಗನು ಹೊಂಚುಹಾಕಿದನು. ಆದರೆ ಅಲ್ಲಿಯ ಪಾಳೆಯಗಾರರು ಇಂಗ್ಲಿಷ ರನ್ನು ಮೊರೆಹೊಕ್ಕರು. ಆದುದರಿಂದ ರಣಜಿತಸಿಂಗನು ಅವರ ಗೋಜಿಗೆ ಹೋಗಲಿಲ್ಲ. ಕೊನೆಯವರೆಗೆ ಇಂಗ್ಲಿಷರ ಗೆಳೆಯನಾಗಿ ಇದ್ದುಕೊಂಡು, ಕ್ರಿ. ಶ. ೧೮೩೯ರಲ್ಲಿ ಇವನು ಮರಣಹೊಂದಿದನು.

ರಣಜಿತಸಿಂಗನು ಬಹಳ ಎತ್ತರವೇನೂ ಇರಲಿಲ್ಲ. ಈತನ ಮುಖದ ತುಂಬ ಮೈಲಿಯ ಕಲೆಗಳು ಇದ್ದುವು. ಮೈಲಿಯ ಬೇನೆಯಿಂದ ಇವನ ಒಂದು ಕಣ್ಣು ಕುರುಡಾಗಿ ಹೋಗಿತ್ತು. ಇವನ ಗಡ್ಡಗಳು ಸಣ್ಣವಿದ್ದುವು. ಆದರೆ ಮುಖವು ಬಲು ಉಗ್ರವಾಗಿತ್ತು. ದರ್ಬಾರದಲ್ಲಿ ಎಲ್ಲರೂ ಇವನಿಗೆ ಹೆದರು-

ತ್ತಿದ್ದರು. ಇವನ ಎದುರಿಗೆ ನಿಂತು ಮಾತನಾಡುವ ಧೈರ್ಯವು ಯಾರಿಗೂ ಆಗುತ್ತಿರಲಿಲ್ಲ. ಆದರೂ ಇವನು ಬಹಳ ಸಾದಾ ಜೀವಿಯಾಗಿದ್ದನು. ವಿಶೇಷ ಉತ್ಸವಗಳಲ್ಲಿ ಮಾತ್ರ ಇವನು ತನ್ನ ಹತ್ತಿರವಿದ್ದ 'ಕೊಹಿನೂರ' ಎಂಬ ರತ್ನವನ್ನು ಧರಿಸುತ್ತಿದ್ದನು. 'ಕೊಹಿನೂರ್' ಎಂಬುದು ಬಹು ಬೆಲೆಯುಳ್ಳ ರತ್ನವೆಂದು ಈಗಲೂ ಪ್ರಸಿದ್ಧವಿದೆ.

ರಣಜಿತಸಿಂಗನು ವೀರನಿದ್ದಂತೆಯೆ ಉದಾರನೂ ಇದ್ದ. ಇವನ ದೊಡ್ಡ ಮನಸ್ಸು, ದಯಾಗುಣಗಳ ಬಗೆಗೆ ಒಂದು ಕತೆಯನ್ನು ಹೇಳುತ್ತಾರೆ: ಒಂದು ಸಲ ದೊಡ್ಡ ಬರಗಾಲ ಬಿದ್ದಿತು. ಜನರೆಲ್ಲರೂ ಹೊಟ್ಟೆಗಿಲ್ಲದೆ ತಳಮಳಿಸಹತ್ತಿದ್ದರು. ಆಗ ರಣಜಿತಸಿಂಗನು ಅರಮನೆಯ ಉಗ್ರಾಣದಿಂದ ಎಲ್ಲರಿಗೂ ಕಾಳು-ಕಡಿ ಸಿಗುವಂತೆ ಅಪ್ಪಣೆಮಾಡಿದನು. ಒಂದುದಿನ ರಣಜಿತಸಿಂಗನು ಸಾಮಾನ್ಯತರದ ಉಡಿಗೆ-ತೊಡಿಗೆಗಳನ್ನು ಧರಿಸಿ ಉಗ್ರಾಣದ ಬಳಿಯಲ್ಲಿ ನಿಂತಿದ್ದನು. ಸಂಜೆಯಾಗಿದ್ದಿತು. ಕೊಡುವವರಿಗೆಲ್ಲ ಕಾಳುಕಡಿಗಳನ್ನು ಕೊಟ್ಟಾಗಿತ್ತು. ಉಗ್ರಾಣದ ಬಾಗಿಲು ಮುಚ್ಚಿಬಿಟ್ಟಿತ್ತು. ಆಗ ಒಬ್ಬ ಬಡವನು ತನ್ನ ಸಣ್ಣ ಸಣ್ಣ ಮಕ್ಕಳನ್ನು ಕಟ್ಟಿಕೊಂಡು ಅಲ್ಲಿಗೆ ಬಂದನು. ಹಸಿವೆಯಿಂದ ಅವರೆಲ್ಲ ಕಂಗೆಟ್ಟು ಹೋಗಿದ್ದರು. ಆದರೂ ವೇಳೆಮಿಾರಿಹೋದುದರಿಂದ ಅವರಿಗೆ ಧಾನ್ಯವು ಸಿಗಲಿಲ್ಲ. ಬಡವನು ಎಷ್ಟೊಂದು ಬೇಡಿಕೊಂಡರೂ ಅವನಿಗೆ ಕಾಳು ಸಿಗಲಿಲ್ಲ. ಆಗ ರಣಜಿತಸಿಂಗನು ತಾನೇ ಉಗ್ರಾಣದ ಬಾಗಿಲನ್ನು ತೆರೆದನು. 'ನಿನಗೆ ಎಷ್ಟು ಬೇಕೋ ಅಷ್ಟು ಧಾನ್ಯವನ್ನು ತೆಗೆದುಕೋ' ಎಂದು ಹೇಳಿದನು. ಆ ಬಡವನಿಗೆ ಧಾನ್ಯವನ್ನು ಹೊತ್ತುಕೊಂಡು ಹೋಗುವುದಕ್ಕೆ ಶಕ್ತಿಯಿರಲಿಲ್ಲ. ಆಗ ರಣಜಿತಸಿಂಗನೆ ಆ ಧಾನ್ಯವನ್ನು ಹೊತ್ತುಕೊಂಡು ಹೋಗಿ ಅವನ ಮನೆಗೆ ಮುಟ್ಟಿಸಿದನು. ಮರಳಿ ಬರುವಾಗ ಒಬ್ಬ ಸಿಪಾಯಿ ಅವನಿಗೆ ನಮ್ರತೆಯಿಂದ ಸಲಾಂ ಮಾಡಿದನು. ಆಗ ಆ ಬಡವನು ಸಿಪಾಯಿಯನ್ನು 'ಇವರು ಯಾರು?' ಎಂದು ಕೇಳಿದನು. ಆಗ ಸಿಪಾಯಿ 'ಏನಪ್ಪಾ, ರಣಜಿತಸಿಂಗರ ರಾಜ್ಯದಲ್ಲಿ ಇರುತ್ತಿದ್ದು ಇವರು ಯಾರೆಂಬುದು ನಿನಗೆ ಗೊತ್ತಿಲ್ಲವೆ?' ಎಂದು ಕೇಳಿದನು. ಇದನ್ನು ಕೇಳಿ ಆ ಬಡವನಿಗೆ ತುಂಬ ಆಶ್ಚರ್ಯವೆನಿಸಿತು. ರಣಜಿತಸಿಂಗನ ವಿಷಯದಲ್ಲಿ ಅವನಿಗೆ ಬಹಳ ಆದರ-ಪ್ರೀತಿಗಳುಂಟಾದುವು.

## ಅಭ್ಯಾಸನಗಳು

೧. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ.

(ಅ) ರಣಜಿತಸಿಂಗನು......ಸಿರುವಾಗ......ಇವನ......ತೀರಿಕೊಂಡನು.

(ಒ) ಸಂಸ್ಥಾನದ ಆಡಳಿತವನ್ನೆಲ್ಲ ಇವನ ಅತ್ತೆಯಾದ ......ನೋಡಿ ಕೊಳ್ಳುತ್ತಿದ್ದಳು.
(ಕ) ......ಅಮೀರನು ರಣಜಿತಸಿಂಗನಿಗೆ......ನೆಂಬ ಬಿರುದನ್ನು ಕೊಟ್ಟನು.
(ಡ) ರಣಜಿತಸಿಂಗನು......ಗಳಲ್ಲಿ ......ರತ್ನವನ್ನು ಧರಿಸುತ್ತಿದ್ದನು.
(ಫ) ರಣಜಿತಸಿಂಗನು ಮುಸಲ್ಮಾನ ರಾಜ್ಯಗಳಾದ ೧) ...... ೨)...... ೩)......ಗಳನ್ನು ಗೆದ್ದನು.

೨. ರಣಜಿತಸಿಂಗನ ದಯಾಳುತನದ ಬಗ್ಗೆ ನಿಮಗೆ ಗೊತ್ತಿದ್ದ ಸಂಗತಿಯನ್ನು ಹೇಳಿರಿ.

೩. ರಣಜಿತಸಿಂಗನ ಕಥೆಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೩೮. ಝಾಂಸಿಯ ಲಕ್ಷ್ಮೀಬಾಯಿ

ಎರಡನೆಯ ಬಾಜೀರಾಯನು ರಾಜ್ಯವನ್ನು ಕಳೆದುಕೊಂಡು ಗಂಗಾ ತೀರದ ಬ್ರಹ್ಮಾವರ್ತದಲ್ಲಿ ಇರತೊಡಗಿದ. ಅವನು ಬ್ರಹ್ಮಾವರ್ತಕ್ಕೆ ಹೋಗು ವಾಗ, ತನ್ನ ಸಂಗಡ ಕೆಲವು ಮಹಾರಾಷ್ಟ್ರ ಕುಟುಂಬಗಳನ್ನು ಕರೆದುಕೊಂಡು ಹೋಗಿದ್ದ. ಅವುಗಳಲ್ಲಿ ಮೋರೋಪಂತ ತಾಂಬೇ ಎಂಬವನದೂ ಒಂದು. ಈತನ ಹೆಂಡತಿಯ ಹೆಸರು ಭಾಗೀರಥಿಬಾಯಿ. ಇವರಿಗೆ ಒಬ್ಬಳೇ ಒಬ್ಬಳು ಹೆಣ್ಣುಮಗಳಿದ್ದಳು. ಅವಳ ಹೆಸರು ಮನೂತಾಯಿ. ಭಾಗೀರಥಿಬಾಯಿಯು ಬೇಗನೆ ತೀರಿಕೊಂಡಳು. ತಾಯಿಯಿಲ್ಲದ ತಬ್ಬಲಿ ಮನೂ, ಬಾಜೀರಾಯ ಪೇಶ್ವೆಯ ಮನೆಯಲ್ಲಿಯೆ ಬೆಳೆಯತೊಡಗಿದಳು.

ಮನೂತಾಯಿ ಆರೋಗ್ಯವಂತೆಯಾದ ಹುಡುಗಿ. ಚೆಲುವೆಯೂ ಅಹುದು. ಸೂಕ್ಷ್ಮವಾದ ಬುದ್ಧಿ ಆಕೆಯದು. ಆದುದರಿಂದ ಎಲ್ಲರೂ ಆವಳನ್ನು ಪ್ರೀತಿಸು ತ್ತಿದ್ದರು. ಬಾಜೀರಾಯನ ದತ್ತಕಮಗನಾದ ನಾನಾಸಾಹೇಬನಂತೂ ಅವಳನ್ನು ತಂಗಿಯಂತೆ ತಿಳಿಯುತ್ತಿದ್ದನು. ಮನೂತಾಯಿ ಓದು-ಬರೆಹ ಗಳನ್ನು ಕಲಿತಳು; ಚಿಕ್ಕವಯಸ್ಸಿನಲ್ಲಿಯೆ ಕತ್ತಿ-ಭಲ್ಲೆಗಳ ವಿದ್ಯೆಯನ್ನೂ ಗುರಿ- ಹೊಡೆಯುವುದನ್ನೂ ಅಭ್ಯಾಸಮಾಡಿದಳು. ಕುದುರೆಯ ಏರಾಟವೆಂದರೆ ಮನೂತಾಯಿಗೆ ಬಲುಪ್ರೀತಿ.

ಉತ್ತರಭಾರತದಲ್ಲಿ ಆಗ ಝಾಂಸಿ ಎಂಬುದೊಂದು ಸಣ್ಣ ಸಂಸ್ಥಾನ ವಿದ್ದಿತು. ನೇವಾಳಕರ ಎಂಬ ಮನೆತನದವರು ಆ ಸಂಸ್ಥಾನವನ್ನು ಆಳು ತ್ತಿದ್ದರು. ಈ ಮನೆತನದ ಗಂಗಾಧರರಾಯನೆಂಬವನೊಡನೆ ಮನೂತಾಯಿಯ ಮದುವೆಯಾಯಿತು. ಆಗ ಅವಳು ಇನ್ನೂ ಏಳು ವರುಷದ ಹುಡುಗಿ.

ಅತ್ತೆಯ ಮನೆಯವರು ಅವಳಿಗೆ "ಲಕ್ಷ್ಮೀಬಾಯಿ" ಎಂದು ಹೆಸರನ್ನಿರಿಸಿದರು.

ಮದುವೆಯಾಗಿ ಒಂಬತ್ತುವರ್ಷಗಳ ಮೇಲೆ ಲಕ್ಷ್ಮೀಬಾಯಿ ಒಂದು ಗಂಡುಮಗುವನ್ನು ಹೆತ್ತಳು; ಆದರೆ ಅದು ಹುಟ್ಟಿದ ಮೂರೇ ತಿಂಗಳಲ್ಲಿ ಸತ್ತುಹೋಯಿತು. ಅವಳ ಪತಿಯಾದ ಗಂಗಾಧರರಾಯನ ಆರೋಗ್ಯವೂ ದಿನದಿನಕ್ಕೆ ಕೆಡುತ್ತ ನಡೆಯಿತು. ಆದರಿಂದ ದಂಪತಿಗಳಿಬ್ಬರೂ ವಿಚಾರ ಮಾಡಿ, ದಾಮೋದರ ಎಂಬ ಹೆಸರಿನ ಚಿಕ್ಕ ಮಗುವನ್ನು ದತ್ತಕ ಮಾಡಿಕೊಂಡರು. ಮುಂದೆ ಸ್ವಲ್ಪ ದಿನಗಳಲ್ಲಿಯೇ ಗಂಗಾಧರರಾಯನು ತೀರಿಕೊಂಡನು.



ಲಕ್ಷ್ಮೀಬಾಯಿಯು ಇಂಗ್ಲಿಷರೊಡನೆ ಕಾದುತ್ತಿರುವಳು

ಆ ಕಾಲಕ್ಕೆ ಡಾಲ್‌ಹೌಸಿಯು ಭಾರತದ ಗವ್ಹರ್ನರ್ ಜನರಲನಾಗಿದ್ದನು. 'ದತ್ತಕ ಮಕ್ಕಳಿಗೆ ಸಂಸ್ಥಾನಗಳ ಮುಂದಿನ ಆಡಳಿತವು ದೊರೆಯಬಾರದು' ಎಂಬ ಕಾಯಿದೆಯು ಅವನ ಕಾಲದಲ್ಲಿಯೆ ಪ್ರಚಾರದಲ್ಲಿ ಬಂದಿತು. ಆ ಕಾಯಿದೆಯಂತೆ ದತ್ತಕಮಗ ದಾಮೋದರನಿಗೆ ಝಾಂಸಿಯ ಒಡೆತನವು ದೊರೆಯಲಿಲ್ಲ. ಈ ತಾಯಿಮಕ್ಕಳಿಗೆ ವರ್ಷಾಶನವನ್ನು ಗೊತ್ತುಮಾಡಿ, ಇಂಗ್ಲಿಷರು ಝಾಂಸಿಯ ಆಡಳಿತವನ್ನು ತಮ್ಮ ಕಡೆಗೆ ತೆಗೆದುಕೊಂಡರು. ಆಗ ಲಕ್ಷ್ಮೀಬಾಯಿಗೆ ಪತಿಯು ಅಗಲಿದ ದುಃಖ ಒಂದು ಕಡೆಗೆ, ಸಂಸ್ಥಾನದ

ಒಡೆತನವನ್ನು ಕಳೆದುಕೊಂಡ ದುಃಖ ಇನ್ನೊಂದೆಡೆಗೆ—ಹೀಗಾಗಿ, ಅವಳು ಒಳಗೊಳಗೆ ಬಹಳ ಸಂತಾಪಗೊಂಡಳು. ಆದರೆ ಆಗ ಅವಳು ಏನು ಮಾಡು-ವಂತೆಯೂ ಇರಲಿಲ್ಲ.

ಮುಂದೆ ಲಕ್ಷ್ಮೀಬಾಯಿ ವ್ರತ-ನಿಯಮಗಳಲ್ಲಿ ವೇಳೆಗಳೆಯತೊಡಗಿದಳು. ನಿತ್ಯವೂ ತುಳಸಿಯ ಪೂಜೆ, ದೇವರ ಪೂಜೆಗಳನ್ನು ಮಾಡುವಳು. ಮಹಾ-ಭಾರತ-ರಾಮಾಯಣ-ಭಾಗವತ ಪುರಾಣಗಳನ್ನು ಹೇಳಿಸಿ ಕೇಳುವಳು. ದಾನ-ಧರ್ಮಗಳನ್ನು ಮಾಡುವಳು. ದತ್ತಕಮಗನು ದೊಡ್ಡವನಾದುದರಿಂದ ಆತನ ಮುಂಜಿಯನ್ನು ಮಾಡಿ ಮುಗಿಸಿದಳು. ಆಗ ಗೊತ್ತುಮಾಡಿದ ವರ್ಷಾಶನದ ಹಣವೂ ಬರಲಿಲ್ಲ. ಇದರಿಂದಂತೂ ಅವಳು ಸಂಪೂರ್ಣವಾಗಿ ನೊಂದುಕೊಂಡಳು.

ಇದೇ ಕಾಲದಲ್ಲಿ ಭಾರತದ ಸೈನಿಕರು ಇಂಗ್ಲಿಷರ ವಿರುದ್ಧ ಅಲ್ಲಲ್ಲಿ ದಂಗೆ ಎಬ್ಬಿಸಿದರು. ಭಾರತದ ಸೈನಿಕರು ಹಲವು ಜನ ಇಂಗ್ಲಿಷರನ್ನು ಕೊಂದರು. ಇಂಗ್ಲಿಷರನ್ನು ಹೊರಗೆ ತಳ್ಳಿ ಭಾರತವನ್ನು ಸ್ವತಂತ್ರಗೊಳಿಸ ಬೇಕೆಂಬುದೇ ಅವರ ಉದ್ದೇಶವಾಗಿತ್ತು. ಈ ದಂಗೆಯ ಪರಿಣಾಮವು ಝೂಂಸಿ ನಗರದಲ್ಲಿಯೂ ಆಯಿತು. ಅಲ್ಲಿಯ ಭಾರತೀಯ ಸೈನಿಕರು, ನಗರದಲ್ಲಿದ್ದ ಕೆಂಪುಮೋರೆಯವರನ್ನು ಕೊಂದುಬಿಡಬೇಕೆಂದು ಹೊರಟರು. ಆದರೆ ಕರುಣಾಹೃದಯದ ಲಕ್ಷ್ಮೀಬಾಯಿಯು ಎಷ್ಟೋ ಜನ ಇಂಗ್ಲಿಷ ಗಂಡಸರನ್ನೂ ಹೆಂಗಸರನ್ನೂ ಸಂಕಟದಿಂದ ಪಾರುಮಾಡಿ ಜೀವವುಳಿಸಿದಳು.

ಆಗ ಝೂಂಸಿಯಲ್ಲಿ ಇಂಗ್ಲಿಷ್ ಅಧಿಕಾರಿಗಳು ಯಾರೂ ಉಳಿಯಲಿಲ್ಲ. ಆದುದರಿಂದ ಲಕ್ಷ್ಮೀಬಾಯಿ ಮುಂದೆಬಂದು ಸೈನಿಕರನ್ನೆಲ್ಲ ಒಟ್ಟುಗೂಡಿಸಿ ದಳು; ಸಂಸ್ಥಾನದ ಆಡಳಿತವನ್ನು ತಾನೇ ವಹಿಸಿದಳು. ನಡೆದಿರುವ ದಂಗೆಗೂ ತನಗೂ ಸಂಬಂಧವಿಲ್ಲವೆಂದೂ ಇಂಗ್ಲಿಷರೊಡನೆ ಸ್ನೇಹದಿಂದಿರಲು ಬಯಸುವೆ ನೆಂದೂ ಅವಳು ಮೇಲಧಿಕಾರಿಗಳಿಗೆ ಬರೆದು ತಿಳುಹಿದಳು. ಆದರೆ ಲಕ್ಷ್ಮೀ-ಬಾಯಿಯ ಶೌರ್ಯವು ಭಾರತದಲ್ಲಿ ಮೆರೆಯಬೇಕೆಂದು ದೈವದ ಇಚ್ಛೆಯಿರ ಬಹುದು. ಅವಳು ಬರೆದ ಪತ್ರ ಇಂಗ್ಲಿಷ್ ಅಧಿಕಾರಿಗಳ ಕೈಗೆ ಸಿಗಲೇ ಇಲ್ಲ.

ನತ್ಥೇಖಾನ್ ಎಂಬವನು ಮೊದಲು ದಂಗೆಗಾರನಾಗಿದ್ದು ಆ ಮೇಲೆ ಬ್ರಿಟಿಶರ ಕಡೆಗೆ ಸೇರಿದ್ದ. ಆ ಮೋಸಗಾರನ ಮಾತನ್ನು ಬ್ರಿಟಿಶ ಅಧಿಕಾರಿ ಗಳು ನಂಬಿದರು. ಝೂಂಸಿಯಲ್ಲಾದ ಬಂಡಾಯಕ್ಕೆ ಲಕ್ಷ್ಮೀಬಾಯಿಯೇ ಕಾರಣಳೆಂದು ಅವರು ತಿಳಿದರು. ಇಂಗ್ಲಿಷ್ ಸರಕಾರದ ಆಜ್ಞೆಯಂತೆ ಸರ್ ಹ್ಯು ರೋಜ್ ಎಂಬ ಸೇನಾಪತಿಯು ಝೂಂಸಿಯ ಮೇಲೆ ಏರಿಬಂದನು. ಅವನು ಸಂಪೂರ್ಣ ಶರಣಾಗತಳಾಗಬೇಕೆಂದು ಲಕ್ಷ್ಮೀಬಾಯಿಗೆ ಹೇಳಿ

ಕಳುಹಿದನು. ಇದರಿಂದ ಅವಳು ನೊಂದುಕೊಂಡಳು. ಅವಳಿಗೆ ತುಂಬ ಕೋಪವೂ ಬಂದಿತು. ಇಂಗ್ಲಿಷರ ವಿಷಯದಲ್ಲಿ ಇದುವರೆಗೆ ಇದ್ದ ಸ್ನೇಹ ಭಾವವು ಅಳಿದುಹೋಗಿ ಅವಳಲ್ಲಿ ದ್ವೇಷವು ತಲೆಯೆತ್ತಿ ನಿಂತಿತು. ಆಗ ಆ ರಾಣಿಯು ಸರ್ ಹ್ಯು ರೋಜನ ಪತ್ರಕ್ಕೆ ಉತ್ತರ ಕೊಡದೆ, ಕೋಟೆಯ ಬಾಗಿಲುಗಳನ್ನು ಮುಚ್ಚಿಸಿ ಯುದ್ಧದ ಸಿದ್ಧತೆಯನ್ನು ಮಾಡಿದಳು; ಧೈರ್ಯ ದಿಂದ ಶತ್ರುಗಳ ಮುತ್ತಿಗೆಯನ್ನು ಎದುರಿಸಿದಳು; ಕೋಟೆಯ ಮೇಲಿನ ತೋಫುಗಳನ್ನು ಹಾರಿಸಿ ತಂಡ-ತಂಡವಾಗಿ ಇಂಗ್ಲಿಷ್ ಸೈನಿಕರನ್ನು ಸಂಹರಿಸಿ ದಳು. ಆಗಿನ ಅವಳ ವೀರಶ್ರೀಯನ್ನು ಅನೇಕ ಜನರು ಹೊಗಳಿಹಾಡಿದ್ದಾರೆ.

ಇಂಗ್ಲಿಷರ ಪ್ರಬಲವಾದ ಸೈನ್ಯವು, ಕೊನೆಗೆ ಕೋಟೆಯನ್ನು ಮುರಿದು ಒಳಗೆ ನುಗ್ಗಿತು. ಆಗ ಲಕ್ಷ್ಮೀಬಾಯಿಯು ಇನ್ನು ತಾನು ಸೆರೆಯಾಳಾಗುವೆನು ಎಂದು ತಿಳಿದಳು; ಸರಿರಾತ್ರಿಯಲ್ಲಿಯೆ ಮಗನನ್ನು ಬೆನ್ನಿಗೆ ಕಟ್ಟಿಕೊಂಡು, ಗುಪ್ತಮಾರ್ಗವಾಗಿ ಕೋಟೆಯಿಂದ ಹೊರಬಿದ್ದಳು. ಕೂಡಲೆ ಕುದುರೆ ಯನ್ನೇರಿ, ಒಂದೇಸವನೆ ೧೦೦ ಮೈಲು ಪ್ರಯಾಣಮಾಡಿ ಕಾಲ್ಪಿಯಲ್ಲಿರುವ ನಾನಾಸಾಹೇಬನ ಪಾಳೆಯವನ್ನು ಸೇರಿದಳು. ಕಾಲ್ಪಿಯು ಅಷ್ಟೊಂದು ಸುರಕ್ಷಿತವಾದ ಸ್ಥಳವಾಗಿರಲಿಲ್ಲ. ಆದುದರಿಂದ ಎಲ್ಲರೂ ಗ್ವಾಲ್ಹೇರದ ಕಡೆಗೆ ನಡೆದರು.

ಗ್ವಾಲ್ಹೇರದ ಕೋಟೆ ಭದ್ರವಾಗಿತ್ತು. ಅಲ್ಲಿಯ ರಾಜನಾದ ಜಯಾಜಿ ಸಿಂಧ್ಯನು ಇಂಗ್ಲಿಷರ ಬಾಲಬಡಿಯುವವನು. ಆದುದರಿಂದ ಲಕ್ಷ್ಮೀಬಾಯಿಗೆ ನೆರವನ್ನು ಕೊಡಲಿಕ್ಕೆ ಅವನು ಒಪ್ಪಲಿಲ್ಲ. ಆಗ ಲಕ್ಷ್ಮೀಬಾಯಿಯು ಅವ- ನೊಡನೆ ಯುದ್ಧಮಾಡಿ, ಗ್ವಾಲೇರ ಕೋಟೆಯನ್ನು ವಶಪಡಿಸಿಕೊಂಡಳು. ಜಯಾಜಿಯು ಇಂಗ್ಲಿಷರ ಆಶ್ರಯಕ್ಕೆ ಹೋದನು. ಕೂಡಲೆ ಸರ್ ಹ್ಯು- ರೋಜನು ಗ್ವಾಲ್ಹೇರ ಕೋಟೆಯನ್ನು ಮುತ್ತಿದನು. ಭಯಂಕರ ಕಾಳಗ ನಡೆಯಿತು. ಅಲ್ಲಿಯೂ ಇಂಗ್ಲಿಷರ ಕೈಮೇಲಾಗಿ ಲಕ್ಷ್ಮೀಬಾಯಿಯ ಸೈನ್ಯ ಸೋತುಹೋಯಿತು. ಆದರೂ ಅವಳು ೧೦–೧೫ ಜನ ಕಾವಲುಗಾರರೊಂದಿಗೆ ಶತ್ರುಸೈನ್ಯವನ್ನು ಭೇದಿಸಿ ಪಾರಾಗಿ ಓಡಿದಳು. ಹೋಗುವಾಗ ತನ್ನ ಜೊತೆ ಯಲ್ಲಿರುವ ಸೈನಿಕರಿಗೆ "ನನ್ನ ನಂಬುಗೆಯ ಬಂಟರೆ, ಜೀವಸಹಿತ ನಾನೆಂದೂ ಶತ್ರುಗಳ ಕೈಗೆ ಸಿಗುವುದಿಲ್ಲ. ಒಂದು ವೇಳೆ ಹೋರಾಟದಲ್ಲಿ ನಾನು ಸತ್ತರೆ, ಪದ್ಧತಿಯಂತೆ ನನ್ನ ಶವವನ್ನು ದಹನಮಾಡಿರಿ" ಎಂದು ಹೇಳಿದಳು.

ಹೀಗೆ ಹೇಳಿ ಮುಂದೆ ನಡೆದಿರುವಾಗ, ಹಾದಿಯಲ್ಲಿ ಒಂದು ಹಳ್ಳವು ಬಂದಿತು. ವಿಶೇಷವಾಗಿ ದಣಿದ ಆಕೆಯ ಕುದುರೆಗೆ ಆ ಹಳ್ಳವನ್ನು ದಾಟುವು ದಾಗಲಿಲ್ಲ. ಅಷ್ಟರಲ್ಲಿಯೆ ಅವಳನ್ನು ಹಿಂಬಾಲಿಸಿದ ಶತ್ರುಗಳು ಮೇಲೆ ಏರಿ

ಬಂದರು. ಲಕ್ಷ್ಮೀಬಾಯಿ ಧೈರ್ಯದಿಂದ ನಿಂತು ಹಲವರನ್ನು ಕೊಂದುಹಾಕಿದಳು. ಆದರೆ ಶತ್ರುಸೈನಿಕನೊಬ್ಬನು ಹಿಂದಿನಿಂದ ಬಂದು ಲಕ್ಷ್ಮೀಬಾಯಿಯನ್ನು ಬರ್ಚಿಯಿಂದ ಇರಿದನು. ಇನ್ನೊಬ್ಬನು ಮುಂಬದಿಯಲ್ಲಿ ಕತ್ತಿಯ ಏಟನ್ನು ಹಾಕಿದನು. ಇಷ್ಟೊಂದು ಗಾಯಗೊಂಡವಳಾಗಿಯೂ ಲಕ್ಷ್ಮೀಬಾಯಿಯು ಎಷ್ಟೋ ಶತ್ರುಸೈನ್ಯದವರನ್ನು ಗುಂಡಿಕ್ಕಿ ಕೊಂದಳು. ಕೊನೆಗೆ ಹೆಚ್ಚಾಗಿ ರಕ್ತವು ಹರಿದು ನಿಶ್ಶಕ್ತಳಾಗಿ ಅವಳು ನೆಲಕ್ಕೆ ಬಿದ್ದಳು.

ಜೊತೆಯ ಸೈನಿಕರು ಅವಳನ್ನು ಒಂದು ಗುಡಿಸಿಲಿಗೆ ಒಯ್ದು ಮಲಗಿಸಿದರು. ಬಾಯಲ್ಲಿ ಪವಿತ್ರವಾದ ಗಂಗಾಜಲವನ್ನು ಹಾಕಿದರು. ಲಕ್ಷ್ಮೀಬಾಯಿ ಕೊನೆಗೆ ಮಗನನ್ನು ನಿಟ್ಟಿಸಿನೋಡಿ, ಅವನನ್ನು ನಂಬುಗೆಯ ಆಪ್ತರ ಕೈಗೆ ಒಪ್ಪಿಸಿ ಮರಣಹೊಂದಿದಳು (ಕ್ರಿ. ಶ. ೧೮೫೮). ಆಗ ಅವಳಿಗೆ ೨೨ ವರುಷದ ವಯಸ್ಸು. ಲಕ್ಷ್ಮೀಬಾಯಿಯ ವೀರಜೀವನವು ಭಾರತೀಯರ ಮನದಿಂದ ಎಂದೂ ಮರೆಯಾಗಲಾರದಂತಹದು.

## ಅಭ್ಯಸನಗಳು

೧. ಕೆಳಗೆ ಕೆಲವು ಸಂಗತಿಗಳನ್ನು ಮತ್ತು ಅದಕ್ಕೆ ಸಂಬಂಧಿಸಿದ ಕೆಲವು ಹೆಸರುಗಳನ್ನು ಕೊಟ್ಟಿದೆ. ಅವುಗಳನ್ನು ಹೊಂದಿಸಿ ಬರೆಯಿರಿ.

| | |
|---|---|
| (ಅ) ಮನೂಬಾಯಿಯ ಗಂಡನು | [ಅ] ಸರ್ ಹ್ಯುರೋಜ್ ಸಾಹೇಬನು |
| (ಬ) ಲಕ್ಷ್ಮೀಬಾಯಿಯ ದತ್ತಕ ಮಗನು | [ಬ] ನತ್ಥೇಖಾನ್ |
| (ಕ) ಮೊದಲು ಬಂಡುಗಾರನಿದ್ದು ಬಳಿಕ ಇಂಗ್ಲಿಷರ ಕಡೆಗೆ ಆದ ಮೋಸಗಾರ | [ಕ] ದಾಮೋದರರಾಯ |
| (ಡ) ಇಂಗ್ಲಿಷರ ಸೈನ್ಯದ ಸೇನಾಪತಿ | [ಡ] ಗಂಗಾಧರರಾಯ |

೨. ಲಕ್ಷ್ಮೀಬಾಯಿಯು ಚಿಕ್ಕಂದಿನಲ್ಲಿ ಯಾವ ಯಾವ ವಿದ್ಯೆಗಳನ್ನು ಕಲಿತು-ಕೊಂಡಳು?

೩. ಲಕ್ಷ್ಮೀಬಾಯಿಯು ಇಂಗ್ಲಿಷರ ಕೂಡ ಏಕೆ ಯುದ್ಧಮಾಡಬೇಕಾಯಿತು?

೪. ಲಕ್ಷ್ಮೀಬಾಯಿಯ ಮರಣವು ಹೇಗೆ ಆಯಿತು?

೫. ಲಕ್ಷ್ಮೀಬಾಯಿಯ ಗುಣಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೪೦. ಸ್ವಾಮಿ ದಯಾನಂದರು

ಗುಜರಾತ ಪ್ರಾಂತದ ಮೊರವೀ ಭಾಗದಲ್ಲಿ ಟಂಕಾರಾ ಎಂಬ ಊರು ಇದೆ. ಹಿಂದೆ ಅಲ್ಲೊಂದು ಶೈವಬ್ರಾಹ್ಮಣರ ಮನೆತನವಿದ್ದಿತು. ದಯಾನಂದರು ಆ ಮನೆತನದಲ್ಲಿ ಕ್ರಿ. ಶ. ೧೮೨೪ರಲ್ಲಿ ಜನ್ಮತಾಳಿದರು. ಇವರ ತಂದೆಯವರು ವೈದಿಕವೃತ್ತಿಯಿಂದ ಜೀವಿಸುತ್ತಿದ್ದರು. ಅವರು ನಿತ್ಯವೂ ದೇವರಪೂಜೆ-ಜಪ-ತಪ-ಮಂತ್ರಗಳಲ್ಲಿ ಬಹಳ ವೇಳೆಯನ್ನು ಕಳೆಯುತ್ತಿದ್ದರು. ತಂದೆಯವರ ವೃತ್ತಿಯ ಪ್ರಭಾವವು ಈ ಮಗನ ಮೇಲೆಯೂ ಬಿದ್ದಿತು.



ಸ್ವಾಮಿ ದಯಾನಂದರು

ದಯಾನಂದರ ಮೊದಲಿನ ಹೆಸರು ಮೂಲಶಂಕರ. ಮೂಲಶಂಕರನು ಚಿಕ್ಕವನಿರುವಾಗ, ಅವನ ತಂದೆಯವರೇ ಅವನಿಗೆ ಓದು-ಬರೆಹಗಳನ್ನು ಕಲಿಸಿ-ದರು. ಆಗಲೇ ಅವನಿಗೆ ಧಾರ್ಮಿಕ ಶಿಕ್ಷಣವನ್ನೂ ಕೊಡುತ್ತಿದ್ದರು. ನಿತ್ಯವೂ ಅವರು ಮಗನನ್ನು ಸಂಗಡ ಕರೆದುಕೊಂಡು ದೇವರ ದರ್ಶನಕ್ಕೆ ಹೋಗುತ್ತಿದ್ದರು. ಒಂದು ದಿವಸ ತಂದೆ-ಮಕ್ಕಳಿಬ್ಬರೂ ದೇವರ ದರ್ಶನಕ್ಕೆಂದು ಗುಡಿಗೆ

ಹೋದರು. ಆಗ ಒಂದು ಇಲಿಯು ದೇವರ ಮೂರ್ತಿಯ ಮೇಲೆ ಅಡ್ಡಾಡು-ತ್ತಿತ್ತು; ದೇವರ ಮೇಲೆ ಏರಿಸಿದ ಅಕ್ಕಿಯ ಕಾಳನ್ನು ತಿನ್ನುತ್ತಿತ್ತು. ಅದನ್ನು ಮೂಲಶಂಕರನು ನೋಡಿದನು. ಅವನು ತಂದೆಯನ್ನು "ಅಪ್ಪಾ! ಈ ಮೂರ್ತಿಯಲ್ಲಿ ನಿಜವಾಗಿಯೂ ದೇವರು ಇರುವನೆ? ಇರುವುದು ನಿಜವಾದರೆ, ಪಾಪ! ಅವನ ಮೇಲೆ ಈ ಇಲಿಯು ಏಕೆ ಓಡಾಡುತ್ತದೆ?" ಎಂದು ಕೇಳಿದನು. ಅದಕ್ಕೆ ತಂದೆಯಿಂದ ಸರಿಯಾದ ಉತ್ತರವು ದೊರೆಯಲಿಲ್ಲ. ಅಂದಿನಿಂದ ಮೂರ್ತಿಪೂಜೆಯ ವಿಷಯದಲ್ಲಿ ಅವನ ನಂಬುಗೆ ಹಾರಿಹೋಯಿತು. 'ಕಲ್ಲು-ಕಂಚಿನ ಮೂರ್ತಿಗಳನ್ನು ಪೂಜಿಸಿದರೆ ಪುಣ್ಯದ ಬದಲು ಪಾಪ ಬರುವುದು' ಎಂದು ಅವನು ಹೇಳತೊಡಗಿದನು.

ಮೂಲಶಂಕರನು ದೊಡ್ಡವನಾದ ಹಾಗೆ, ಅವನಿಗೆ ಸಮಾಜದ ಕುರುಡು ನಂಬುಗೆಗಳೂ ಭಾವಿಕ ಆಚಾರ-ವಿಚಾರಗಳೂ ಸರಿಬರದಾದುವು. ಅವನ ಮನಸ್ಸು ವೈರಾಗ್ಯದ ಕಡೆಗೆ ಹರಿಯತೊಡಗಿತು. ಮಗನ ಆ ಸ್ವಭಾವವನ್ನು ತಂದೆ-ತಾಯಿಗಳು ನೋಡಿದರು. ಬೇಗನೇ ಅವನ ಮದುವೆಮಾಡಿಬಿಡಬೇ-ಕೆಂದು ನಿಶ್ಚಯಮಾಡಿದರು. ಈ ಸಂಗತಿಯು ಮೂಲಶಂಕರನಿಗೆ ತಿಳಿಯಿತು. ಆಗ ಅವನು ಮನೆಬಿಟ್ಟು ಕಾಡಿಗೆ ಓಡಿಹೋದನು. ಕೊನೆಯವರೆಗೆ ಬ್ರಹ್ಮ-ಚಾರಿಯಾಗಿರಬೇಕೆಂದು ನಿಶ್ಚಯಮಾಡಿದ್ದನು. ಓಡಿಹೋದಾಗ, ತನ್ನ ಮೂಲ ಹೆಸರನ್ನು ಬದಲಿಸಿ 'ಶುದ್ಧಚೈತನ್ಯ' ಎಂದು ಬೇರೆ ಹೆಸರನ್ನು ಇಟ್ಟುಕೊಂಡನು. ಆಗ ಮೂಲಶಂಕರನ ತಂದೆ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಅವನ ಬೆನ್ನುಹತ್ತಿ ಹುಡುಕುತ್ತ ಹೋಗಿ ಅವನನ್ನು ಮನೆಗೆ ಕರೆದುಕೊಂಡು ಬಂದನು.

ಮುಂದೆ ಮೂಲಶಂಕರನು ಬಹಳ ದಿವಸ ಮನೆಯಲ್ಲಿ ಉಳಿಯಲಿಲ್ಲ. ಸಮಯಸಾಧಿಸಿ ಮನೆ-ಮಾರುಗಳನ್ನೆಲ್ಲ ತೊರೆದು ಅವನು ಮತ್ತೆ ನಡೆದನು. ದೇವರನ್ನು ಕಾಣಬೇಕೆಂದು ಆತನಿಗೆ ಹಂಬಲ. ಎಷ್ಟೋ ದಿನಗಳವರೆಗೆ ಅವನು ಅತ್ತಿತ್ತ ಅಡ್ಡಾಡಿದನು; ಬೇರೆ ಬೇರೆ ವೇದಾಂತಗ್ರಂಥಗಳನ್ನು ಅಭ್ಯಾಸ ಮಾಡಿದನು. ಆದರಿಂದ ಅವನಿಗೆ ಸಮಾಧಾನವೆನಿಸಲಿಲ್ಲ. ಬಳಿಕ ಸ್ವಾಮಿ ಪೂರ್ಣಾನಂದ ಎಂಬವರ ಹತ್ತಿರ ಹೋಗಿ ಅವನು ಸಂನ್ಯಾಸದೀಕ್ಷೆಯನ್ನು ತೆಗೆದುಕೊಂಡನು. ಸಂನ್ಯಾಸಿಯಾದ ಮೇಲೆ ಅವನಿಗೆ 'ದಯಾನಂದ ಸರಸ್ವತಿ' ಎಂಬ ಹೆಸರು ಬಂದಿತು.

ಇಷ್ಟರಿಂದಲೆ ದಯಾನಂದರಿಗೆ ಸಂತೋಷವೆನಿಸಲಿಲ್ಲ. ಅವರು ಸಂನ್ಯಾಸ ತೆಗೆದುಕೊಂಡ ಮೇಲೂ ತಮಗೆ ಬೇಕಾದ ಗುರುಗಳನ್ನು ಹುಡುಕತೊಡಗಿ-ದರು. ಸಾವಿರಾರು ಮೈಲುಗಳವರೆಗೆ ಬರಿಗಾಲಿನಿಂದ ಬೆಟ್ಟ-ಕಾಡುಗಳಲ್ಲಿ

ತಿರುಗಾಡಿದರು. ಕಲ್ಲು-ಮುಳ್ಳುಗಳು ತಾಗಿ ಕಾಲುಗಳು ರಕ್ತದಿಂದ ತೊಯ್ದುವು. ಅನೇಕ ಸಂಕಟಗಳನ್ನೂ ಅವರು ಅನುಭವಿಸಬೇಕಾಯಿತು. ಕೊನೆಗೆ 'ಮಥುರೆಯಲ್ಲಿ ಸ್ವಾಮಿ ವಿರಜಾನಂದರೆಂಬ ಪ್ರಸಿದ್ಧ ತತ್ತ್ವಜ್ಞಾನಿಗಳು ಇರುವರು' ಎಂಬುದು ಅವರಿಗೆ ತಿಳಿಯಿತು. ದಯಾನಂದರು ಅವರನ್ನು ಹುಡುಕುತ್ತ ಮಥುರೆಗೆ ಬಂದರು. ಅಲ್ಲಿ ಅವರಿಗೆ ವಿರಜಾನಂದರ ದರ್ಶನವಾಯಿತು. ಅವರ ಶಿಷ್ಯರಾಗಿ ಸುಮಾರು ಎರಡುವರೆ ವರುಷಗಳವರೆಗೆ ಅವರ ಸೇವೆಯನ್ನು ಮಾಡಿದರು; ನಿಜವಾದ ವೈದಿಕಧರ್ಮ ಹಾಗು ವೇದಾಂತಗಳನ್ನು ತಿಳಿದುಕೊಂಡರು. ಬಳಿಕ ಅವುಗಳ ಪ್ರಚಾರಕ್ಕೆಂದು ಹೊರಟರು. ಆಗ ಅವರು ೩೯ ವರುಷದ ವಯಸ್ಸಿನವರು.

ಸ್ವಾಮಿ ದಯಾನಂದರು ಹರಿದ್ವಾರಕ್ಕೆ ಹೋದರು. ಆ ವರುಷ ಅಲ್ಲಿ ಸುಪ್ರಸಿದ್ಧ 'ಕುಂಭಮೇಳಾ'ದ ಜಾತ್ರೆ ಕೂಡಿತ್ತು. ಭಾರತದಲ್ಲಿಯ ಅನೇಕ ಪಂಡಿತರು ಅಲ್ಲಿಗೆ ಬಂದಿದ್ದರು. ದಯಾನಂದರು ಅವರ ಸಂಗಡ ಧರ್ಮ ಹಾಗು ವೇದಾಂತಗಳ ಬಗೆಗೆ ಚರ್ಚೆ ಮಾಡಿದರು. ಬಳಿಕ ಅವರು ಕಾಶಿಗೆ ಹೋದರು; ಅಲ್ಲಿ ಎಷ್ಟೋ ಪಂಡಿತರನ್ನು ವಾದದಲ್ಲಿ ಸೋಲಿಸಿದರು. ತಮ್ಮ ಹೊಸ ವಿಚಾರಗಳನ್ನು ಜನರ ಮುಂದೆ ಇಟ್ಟರು. ಧರ್ಮಭ್ರಷ್ಟರೆಂದೂ ನಾಸ್ತಿಕರೆಂದೂ ಜನರು ಇವರನ್ನು ಬೈಯಹತ್ತಿದರು. ಅಲ್ಲದೆ ಕೆಲವು ಕಡೆ ದಯಾನಂದರ ಮೇಲೆ ಕಲ್ಲುಗಳನ್ನೂ ಒಗೆದರು. ಮುಂದೆ ಅವರು ಮಥುರೆಗೆ ಹೋದರು. ಅಲ್ಲಿಯ ಜನರೂ ಅವರಿಗೆ ಬಹಳ ತೊಂದರೆಕೊಟ್ಟರು. ಆದರೂ ಸ್ವಾಮಿ ದಯಾನಂದರು ತಮ್ಮ ದೃಢನಿರ್ಧಾರವನ್ನು ಬಿಡಲಿಲ್ಲ.

ಆ ಕಾಲದಲ್ಲಿ ಬಂಗಾಲದಲ್ಲಿ ಮಹರ್ಷಿ ದೇವೇಂದ್ರನಾಥ ಠಾಕೂರ ಹಾಗು ಕೇಶವಚಂದ್ರ ಸೇನರು ಪ್ರಸಿದ್ಧರಾಗಿದ್ದರು. ಸ್ವಾಮಿ ದಯಾನಂದರು ಬಂಗಾಲಕ್ಕೆ ಹೋಗಿ ಅವರ ಕೂಡ ಸಾಮಾಜಿಕ ಹಾಗು ಧಾರ್ಮಿಕ ವಿಚಾರಗಳನ್ನು ಕುರಿತು ವಿಚಾರವಿನಿಮಯ ಮಾಡಿದರು. ಆ ಮೇಲೆ ಬಂಗಾಲದ ಪ್ರವಾಸವನ್ನು ಮುಗಿಸಿಕೊಂಡು ಅವರು ಮುಂಬಯಿಗೆ ಬಂದರು. ಅಲ್ಲಿ ಕ್ರಿ. ಶ. ೧೮೭೫ರಲ್ಲಿ 'ಆರ್ಯಸಮಾಜ' ಎಂಬ ಹೊಸ ಪಂಥವನ್ನು ಸ್ಥಾಪಿಸಿದರು. ಮುಂದೆ ದಯಾನಂದರು ಪಂಜಾಬಕ್ಕೆ ಹೋದರು. ಅಮೃತಸರದಲ್ಲಿ ಸಭೆ ಕೂಡಿಸಿ ವ್ಯಾಖ್ಯಾನ ಮಾಡಿದರು. ಮೂಢಭಾವನೆಗಳಲ್ಲಿ ನಂಬುಗೆಯಿದ್ದ ಜನರು, ದಯಾನಂದರ ಮೇಲೆ ಸಿಟ್ಟಿಗೆದ್ದರು. ಅವರ ಮೈಮೇಲೆ ಕಲ್ಲು-ಇಟ್ಟಿಗೆಗಳನ್ನು ಒಗೆಯತೊಡಗಿದರು. ಅದನ್ನು ಕಂಡು ಸ್ವಾಮಿ ದಯಾನಂದರು—"ಯಾರು ಈ ಹೊತ್ತು ನನ್ನ ಮೇಲೆ ಕಲ್ಲನ್ನು ತೂರಿದರೋ ಅವರೇ ಒಂದು ದಿನ ನನ್ನ ಮೇಲೆ ಹೂವಿನ ಮಳೆಗರೆಯುವರು" ಎಂದು ಹೇಳಿ

ಅಲ್ಲಿಂದ ಹೊರಟುಹೋದರು. ಮುಂದೆ ಅವರು ಲಾಹೋರದಲ್ಲಿಯೂ ಆರ್ಯ ಸಮಾಜದ ಶಾಖೆಯನ್ನು ತೆರೆದರು.

ಸ್ವಾಮೀ ದಯಾನಂದರು ಭಾರತದೇಶದಲ್ಲೆಲ್ಲ ನೂತನವಾದ ಆರ್ಯ ಸಮಾಜದ ತತ್ತ್ವಗಳನ್ನು ಉಪದೇಶಮಾಡುತ್ತ ಒಂದೇಸವನೆ ಸುತ್ತಾಡಿದರು. ಕೊನೆಗೆ ಕ್ರಿ. ಶ. ೧೮೮೩ರಲ್ಲಿ ಜೋಧಪುರಕ್ಕೆ ಬಂದರು. ಅಲ್ಲಿ ಅವರ ವಿರೋಧಿಗಳು ಅವರಿಗೆ ವಿಷವನ್ನು ಹಾಕಿದರು; ಅದರಿಂದ ದಯಾನಂದರು ಅಲ್ಲಿಯೇ ತಮ್ಮ ದೇಹವನ್ನು ಬಿಟ್ಟರು.

ಆರ್ಯಸಮಾಜದ ತತ್ತ್ವಗಳನ್ನೆಲ್ಲ ಅವರು 'ಸತ್ಯಾರ್ಥಪ್ರಕಾಶ' ಎಂಬ ತಮ್ಮ ಗ್ರಂಥದಲ್ಲಿ ಬರೆದಿಟ್ಟಿದ್ದಾರೆ. "ಮನುಷ್ಯನು ಸತ್ಯ, ನ್ಯಾಯ, ದಯೆ ಮತ್ತು ಪ್ರೇಮಗಳಿಂದ ನಡೆಯಬೇಕು. ಮೂರ್ತಿಗಳನ್ನು ಪೂಜಿಸಬಾರದು. ಸ್ತ್ರೀಯರನ್ನು ಆದರದಿಂದ ಕಾಣಬೇಕು. ವೇದಗಳನ್ನು ನಂಬಬೇಕು. ಜಾತಿ-ಭೇದವನ್ನು ಗಣಿಸಲಾಗದು. ದೀನ-ದರಿದ್ರರ ಸೇವೆ ಮಾಡಬೇಕು" ಎಂದು ಮುಂತಾಗಿ ಅವರು ಬೋಧಿಸಿರುವರು.

## ಅಭ್ಯಸನಗಳು

೧. ಸ್ವಾಮೀ ದಯಾನಂದರು ಎಲ್ಲಿ ಹುಟ್ಟಿದರು?
೨. ಅವರಿಗೆ ಮೂರ್ತಿಪೂಜೆಯಲ್ಲಿ ತಿರಸ್ಕಾರ ಹುಟ್ಟಿದ್ದು ಏಕೆ?
೩. ಅವರು ಕೊನೆಗೆ ಯಾವ ತತ್ತ್ವಜ್ಞಾನಿಗಳ ಶಿಷ್ಯರಾದರು?
೪. ಸ್ವಾಮೀ ದಯಾನಂದರು ಸ್ಥಾಪಿಸಿದ ಪಂಥವು ಯಾವುದು?
೫. ಈ ಪಂಥದ ಮುಖ್ಯ ತತ್ತ್ವಗಳು ಯಾವುವು?
೬. ಕೆಳಗೆ ಕೆಲವು ಶಬ್ದಗಳನ್ನು ಕಂಸಗಳಲ್ಲಿ ಕೊಟ್ಟಿದೆ. ಅವುಗಳಲ್ಲಿ ಯೋಗ್ಯವಾದುವುಗಳನ್ನು ಸೇರಿಸಿ, ವಾಕ್ಯಗಳನ್ನು ಪೂರ್ತಿಗೊಳಿಸಿರಿ.

(ಅ) ಮೂಲಶಂಕರನು ಸಂನ್ಯಾಸದೀಕ್ಷೆಯನ್ನು (ಜಾತವೇದಮುನಿ, ಪೂರ್ಣಾನಂದ, ವಿರಜಾನಂದ) ಗುರುಗಳಿಂದ ಪಡೆದನು.

(ಬ) ದಯಾನಂದರು (ವೇದಗಳನ್ನು, ಸತ್ಯಾರ್ಥಪ್ರಕಾಶವನ್ನು, ರಾಮಾಯಣವನ್ನು) ಬರೆದರು.

(ಕ) ಸ್ವಾಮೀ ದಯಾನಂದರು (ಮುಂಬಯಿಯಲ್ಲಿ, ಲಾಹೋರದಲ್ಲಿ, ಜೋಧಪುರದಲ್ಲಿ) ಮಡಿದರು.

# ೪೧. ಶ್ರೀ ರಾಮಕೃಷ್ಣ ಪರಮಹಂಸರು

ಪೂರ್ವಬಂಗಾಲದಲ್ಲಿ ಕಾಮಾರಪುಕುರ್ ಎಂಬುದೊಂದು ಸಣ್ಣ ಹಳ್ಳಿ ಇದೆ. ಆ ಹಳ್ಳಿಯಲ್ಲಿ ೧೨೦ ವರುಷಗಳ ಹಿಂದೆ ಖುದಿರಾಮನೆಂಬ ಬಡ ಬ್ರಾಹ್ಮಣನು ಇರುತ್ತಿದ್ದನು. ಅವನಿಗೆ ಚಂದ್ರಮಣಿದೇವಿ ಎಂಬ ಹೆಂಡತಿ ಇದ್ದಳು. ಗಂಡ-ಹೆಂಡಿರು ಇದ್ದುದರಲ್ಲಿಯೆ ಸುಖ-ಸಮಾಧಾನಗಳಿಂದ ಬದುಕಿದ್ದರು. ಅವರಿಗೆ ನಾಲ್ಕುಜನ ಮಕ್ಕಳಿದ್ದರು. ಅವರಲ್ಲಿ ಕಡೆಯ ಮಗನ



ಶ್ರೀ ರಾಮಕೃಷ್ಣ ಪರಮಹಂಸರು

ಹೆಸರು ಗದಾಧರ. ಇವನು ಕ್ರಿ. ಶ. ೧೮೩೬ರಲ್ಲಿ ಹುಟ್ಟಿದನು. ಈ ಗದಾಧರನೇ ಮುಂದೆ ಶ್ರೀ ರಾಮಕೃಷ್ಣ ಪರಮಹಂಸನೆನಿಸಿಕೊಂಡನು.

ಗದಾಧರನು ಆ ಹಳ್ಳಿಯ ಬಡಮನೆಯಲ್ಲಿ ಬೆಳೆಯುತ್ತಿದ್ದನು. ಐದು ವರುಷಕ್ಕೆ ತಾಯಿ-ತಂದೆಗಳು ಅವನನ್ನು ಸಾಲೆಗೆ ಕಳುಹಿದರು. ಓದು-ಬರೆಹ

ಗಳನ್ನು ಬೇಗನೆ ಕಲಿತುಕೊಂಡನು; ಆದರೆ ಗಣಿತವೆಂದರೆ ಅವನಿಗೆ ಸೇರು-ತ್ತಿರಲಿಲ್ಲ. ಹುಡುಗರೊಡನೆ ಸೇರಿಕೊಂಡು ಅವನು ಮಣ್ಣಿನಗೊಂಬೆಗಳನ್ನು ಮಾಡುವನು; ಅವುಗಳನ್ನು ದೇವರೆಂದು ಪೂಜಿಸುವನು. ಹಾಡುತ್ತ ಭಜನೆ ಮಾಡುತ್ತ ಕಾಲಕಳೆಯುವನು. ಗದಾಧರನ ಧೈರ್ಯವನ್ನು ಕಂಡು ಹುಡುಗರೆಲ್ಲ ಆಶ್ಚರ್ಯಪಡುತ್ತಿದ್ದರು. ಏಕೆಂದರೆ, ದೆವ್ವ-ಪಿಶಾಚಿಗಳು ಇರುತ್ತವೆಂದು ಹೇಳಿದ ಸ್ಥಳಗಳಿಗೆ, ಗದಾಧರನು ಒಬ್ಬನೇ ಹೆದರದೆ ಹೋಗಿಬರುತ್ತಿದ್ದ.



ಶಾರದಾಮಣಿ ದೇವಿಯು

ಹಳ್ಳಿಗಳಲ್ಲಿ ಸುತ್ತುಮುತ್ತಣ ನೋಟವು ಸುಂದರವಾಗಿ ಇರುವುದು. ಗಿಡ-ಮರಗಳು ಹಳ್ಳಿಗೆ ಚೆಲುವನ್ನುಂಟು ಮಾಡಿರುವುವು. ಮೋಡಗಳು ಆಗಾಗ ಮಳೆಗರೆಯುವುವು. ಚೆಂದ-ಚೆಂದದ ಪಕ್ಷಿಗಳು ಆಕಾಶದಲ್ಲಿ ಹಾರಾಡುವುವು. ಇವೆಲ್ಲವನ್ನೂ ನೋಡಿದಾಗ ಗದಾಧರನು, ದೇವರ ಲೀಲೆಯೆಂದು ನೆನೆದು ಆನಂದಪಡುತ್ತಿದ್ದನು; ಆ ದೇವರನ್ನು ಮನವಾರೆ ಕೊಂಡಾಡುತ್ತಿದ್ದನು.

ಒಂದುದಿನ ಅವನು ಒಂದು ಗದ್ದೆಯಲ್ಲಿ ಸುತ್ತಾಡುತ್ತ ಇದ್ದನು. ಆಕಾಶದಲ್ಲಿ ಕಾರ್ಮೋಡಗಳು ಬಂದು ಕೂಡಿದುವು. ತಂಪುಗಾಳಿ ಬೀಸತೊಡಗಿತು. ಕೂಡಲೆ ನೂರಾರು ಬಿಳಿಯ ಕೊಕ್ಕರೆಗಳು ಸಾಲುಗಟ್ಟಿ ಹಾರಿಬಂದುವು. ನೋಟವು ಬಲು ಚೆಂದವಾಗಿತ್ತು. ನೋಡುತ್ತಿದ್ದ ಹಾಗೆಯೆ ಗದಾಧರನು ಮೈಮರೆದು ನೆಲಕ್ಕೆ ಬಿದ್ದನು. ಬಹಳ ಹೊತ್ತು ದೇವರ ಲೀಲೆಯನ್ನೇ ಮನನೆನೆಯುತ್ತ ಆ ಗದ್ದೆಯಲ್ಲಿ ಬಿದ್ದಿದ್ದನು. ಅವನಿಗೆ ಬೇರೆ ಯಾವುದರ ಅರಿವೇ ಇರಲಿಲ್ಲ. ಕಡೆಗೆ ಯಾರೋ ಅವನನ್ನು ನೋಡಿ ಮನೆಗೆ ಕರೆದುಕೊಂಡು ಹೋದರು.

ಗದಾಧರನು ಏಳು ವರುಷದವನಿದ್ದಾಗ ಅವನ ತಂದೆ ತೀರಿಕೊಂಡನು. ಆದರಿಂದ ತಾಯಿಗೆ ಬಹಳ ದುಃಖವಾಯಿತು. ಇದನ್ನು ಕಂಡು ಗದಾಧರನಲ್ಲಿ ಈ ಪ್ರಪಂಚದ ಬಗೆಗೆ ಉದಾಸೀನತೆ, ಭಗವಂತನಲ್ಲಿ ಭಕ್ತಿ ಬೆಳೆಯಿತು. ಹಳ್ಳಿಯ ಹತ್ತಿರದ ಛತ್ರಗಳಲ್ಲಿಯೂ ಗುಡಿ-ಗುಂಡಾರಗಳಲ್ಲಿಯೂ ಬಂದು ಇಳಿದುಕೊಳ್ಳುತ್ತಿದ್ದ ಸಾಧು-ಸಂತರ ಹತ್ತಿರ ಅವನು ಬರುವನು; ಅವರೊಡನೆ ಭಜನೆ, ದೇವರ ಧ್ಯಾನಗಳಲ್ಲಿ ಕಾಲಕಳೆಯುವನು. ಅವರು ತಾವು ನೋಡಿಬಂದ ಪುಣ್ಯಕ್ಷೇತ್ರಗಳ ವಿವರಗಳನ್ನೂ ಭಕ್ತರ ಕಥೆಗಳನ್ನೂ ಅವನಿಗೆ ಹೇಳುತ್ತಿದ್ದರು. ಗದಾಧರನು ಅವರು ಹೇಳುವುದನ್ನು ಭಕ್ತಿಯಿಂದ ಕೇಳುತ್ತಿದ್ದನು.

ಹಳ್ಳಿಯಲ್ಲಿ ಜನರು ಆಟಗಳನ್ನು ಮಾಡಿದರೆ, ಗದಾಧರನು ಅವುಗಳನ್ನು ನೋಡಲು ಹೋಗುವನು. ತಾನೂ ಆ ಆಟಗಾರರಂತೆ ನಟನೆಯನ್ನು ಮಾಡುವನು. ಒಂದುದಿನ ಶಿವರಾತ್ರಿಯ ಹಬ್ಬ; ಆ ಹಳ್ಳಿಯವರು ಒಂದು ಬಯಲಾಟ ಹೂಡಿದ್ದರು. ಗದಾಧರನೇ ಅದರಲ್ಲಿ ಶಿವನ ಪಾತ್ರವನ್ನು ವಹಿಸಿದ್ದನು. ಅವನನ್ನು ನೋಡಿ ಅಲ್ಲಿ ಕೂಡಿದ ಜನರೆಲ್ಲ ಶಿವನನ್ನೇ ಕಂಡಂತೆ ಆಶ್ಚರ್ಯಪಡುತ್ತಿದ್ದರು. ಗದಾಧರನು "ನಾನೇ ಶಿವ" ಎಂದು ಧ್ಯಾನಮಾಡುತ್ತಿದ್ದ. ಹಾಗೆಯೆ, ಮಾತುಗಳೆಲ್ಲವನ್ನೂ ಮರೆತುಬಿಟ್ಟನು. ಇಷ್ಟು ದೇವರಲ್ಲಿ ಭಕ್ತಿ ಅವನದು.

ತಂದೆ ತೀರಿಕೊಂಡಮೇಲೆ ಮನೆತನದ ಭಾರವನ್ನು ನಡೆಸುವುದು ಕಠಿಣವಾಯಿತು. ಅವರ ಅಣ್ಣನಾದ ರಾಮಕುಮಾರನು ಕಲಕತ್ತೆಗೆ ಹೋಗಿ, ಅಲ್ಲಿ ಒಂದು ಸಂಸ್ಕೃತ ಪಾಠಶಾಲೆಯನ್ನು ತೆರೆದನು. ಗದಾಧರನನ್ನೂ ಸಹಾಯಕ್ಕೆ ತೆಗೆದುಕೊಂಡನು. ಆದರೆ ಅವನಿಂದ ರಾಮಕುಮಾರನಿಗೆ ಏನೂ ಸಹಾಯವಾಗುವಂತಿರಲಿಲ್ಲ.

ಹೀಗಿರುವಾಗ, ರಾಣೀ ರಾಸಮಣಿ ಎಂಬ ಶ್ರೀಮಂತೆಯೊಬ್ಬಳು, ಕಲಕತ್ತೆ

ಯಿಂದ ಸ್ವಲ್ಪದೂರದಲ್ಲಿ, ಗಂಗಾನದಿಯ ದಂಡೆಯ ಮೇಲೆ ಇರುವ ದಕ್ಷಿಣೇ-ಶ್ವರದಲ್ಲಿ, ಕಾಳಿಕಾದೇವಿಯ ಗುಡಿಯನ್ನು ಕಟ್ಟಿಸಿದಳು. ಅಲ್ಲಿ ಗದಾಧರನ ಅಣ್ಣನನ್ನು ಪೂಜಾರಿಯನ್ನಾಗಿ ನೇಮಿಸಿದಳು. ಆಗ ಗದಾಧರನೂ ಆ ಕಾಳಿಕಾ ದೇವಿಯ ಗುಡಿಗೆ ಹೋಗಿ ಇರತೊಡಗಿದನು. ಮುಂದೆ ಗದಾಧರನೇ ದೇವಿಯ ಪೂಜಾರಿಯಾದನು. ಇವನೊಡನೆ ಇವನ ಸೋದರ ಅಳಿಯನಾದ ಹೃದಯನೂ ಬಂದು ದಕ್ಷಿಣೇಶ್ವರದಲ್ಲಿ ಇರಹತ್ತಿದನು.

ಮುಂದೆ ಕೆಲವು ದಿವಸಗಳ ಮೇಲೆ ಅಣ್ಣ ರಾಮಕುಮಾರನು ತೀರಿಕೊಂಡನು. ಇದರಿಂದ ಗದಾಧರನಿಗೆ ಮತ್ತಿಷ್ಟು ವೈರಾಗ್ಯ ಬಂದಿತು. ಅವನು ದಿನವೂ ದೇವಿಯ ಮುಂದೆ ನಿಂತು "ತಾಯಿ ನನಗೆ ಇನ್ನು ಯಾವ ಸುಖವೂ ಬೇಡ, ನಿನ್ನನ್ನು ನಾನು ನೋಡಬೇಕು" ಎಂದು ಬೇಡಿಕೊಳ್ಳುತ್ತಿದ್ದನು. ಅವನಿಗೆ ದೇವರ ಹುಚ್ಚು ಹೆಚ್ಚಾಯಿತು. ದೇವರನ್ನು ನೋಡಿಯೇ ಬಿಡಬೇಕೆಂದು ನಿರ್ಧಾರ ಮಾಡಿದನು. ಸಾಧನೆಗಳಿಂದ ಅವನಿಗೆ ದೇವರ ದರ್ಶನವೂ ಆಯಿತು. ಅಂದು ಗದಾಧರನು ಪರಮಹಂಸನಾದನು. ಅಂದಿನಿಂದ ಅವನ ಜೀವನವೇ ಬದಲಾಯಿತು.

ಜನರು ಗದಾಧರನನ್ನು ಶ್ರೀರಾಮಕೃಷ್ಣ ಎಂದು ಗೌರವದಿಂದ ಕರೆಯ ಹತ್ತಿದರು. ಮುಂದೆ ರಾಮಕೃಷ್ಣರು ಮೊದಲಿನಂತೆ ದೇವಿಯ ಪೂಜೆ ಮಾಡುವುದನ್ನು ಬಿಟ್ಟರು. ಜನರು "ಪೂಜಾರಿಗೆ ಹುಚ್ಚು ಹಿಡಿದಿದೆ" ಎಂದು ಕೂಗಾಡಿದರು. ಆದರೆ ಅವರಿಗೆ ಸಾಮಾನ್ಯ ಹುಚ್ಚು ಹಿಡಿದಿರದೆ ದೇವರ ಹುಚ್ಚು ಹಿಡಿದಿತ್ತು. ಈ ಸಂಗತಿ ಅವರ ತಾಯಿಗೆ ತಿಳಿಯಿತು. ಮಗನನ್ನು ಹಳ್ಳಿಗೆ ಕರೆಸಿಕೊಂಡಳು. ಶಾರದಾಮಣಿದೇವಿ ಎಂಬ ಕನ್ಯೆಯನ್ನು ಗೊತ್ತು ಮಾಡಿ ಅವರ ಲಗ್ನವನ್ನು ಮಾಡಿದಳು. ಶಾರದಾಮಣಿ ಗಂಡನಿಗೆ ತಕ್ಕ ಹೆಂಡತಿಯಾಗಿದ್ದಳು. ಗಂಡ, ಹೆಂಡತಿ ಇಬ್ಬರು ಕೂಡಿ ದಕ್ಷಿಣೇಶ್ವರದಲ್ಲಿ ಬಂದು ಇರಹತ್ತಿದರು.

ಒಂದುದಿನ ಶ್ರೀರಾಮಕೃಷ್ಣರು ದೇವಿಯ ಪೂಜೆಗೆ ಹೂವು ಕೊಯ್ಯು-ತ್ತಿರುವಾಗ, ಒಬ್ಬ ಸಂನ್ಯಾಸಿನಿಯ ದರ್ಶನವಾಯಿತು. ಅವಳು ಅವರಿಗೆ ಧ್ಯಾನ, ಯೋಗಸಾಧನೆ ಇವುಗಳನ್ನು ಉಪದೇಶಮಾಡಿದಳು. ಮುಂದೆ ಕೆಲವು ದಿನಗಳಲ್ಲಿ ತೋತಾಪುರಿಯೆಂಬ ಸಾಧುಗಳು ಅಲ್ಲಿಗೆ ಬಂದರು. ಅವರಿಂದ ರಾಮಕೃಷ್ಣರು ಸಂನ್ಯಾಸವನ್ನು ಸ್ವೀಕರಿಸಿದರು. ಶಾರದಾಮಣಿಯು ಪತಿಗೆ ಅನುಕೂಲೆಯಾಗಿ ತಾನೂ ಸಂನ್ಯಾಸ ದೀಕ್ಷೆಯನ್ನು ಪಡೆದಳು. ಇವರ ಕೀರ್ತಿ ಸುತ್ತೆಲ್ಲ ಹಬ್ಬಿತು.

ದಿನಾಲು ನೂರಾರು ಜನರು ರಾಮಕೃಷ್ಣರ ದರ್ಶನಕ್ಕೆ ಬರುತ್ತಿದ್ದರು.

ಕೇಶವಚಂದ್ರ ಸೇನ, ಈಶ್ವರಚಂದ್ರ ವಿದ್ಯಾಸಾಗರ ಮುಂತಾದ ಪಂಡಿತರೂ ಬಂದು ರಾಮಕೃಷ್ಣರೊಡನೆ ಜ್ಞಾನಚರ್ಚೆಯನ್ನು ಮಾಡತೊಡಗಿದರು. ಎಷ್ಟೋ ಸುಶಿಕ್ಷಿತ ಜನರು ಅವರ ಶಿಷ್ಯರಾದರು. ಒಂದು ದಿನ ಅವರಿಗೆ ನರೇಂದ್ರನೆಂಬುವನ ಭೇಟಿಯಾಯಿತು. ಆ ಹುಡುಗನ ತೇಜಸ್ಸನ್ನು ನೋಡಿ, ಅವನಿಗೆ ದಕ್ಷಿಣೇಶ್ವರಕ್ಕೆ ಬರಲು ಹೇಳಿದರು. ನರೇಂದ್ರನು ಅಲ್ಲಿಗೆ ಬಂದನು. ಪರಮಹಂಸರ ಅಗಾಧ ಶಕ್ತಿಯನ್ನು ಕಂಡು ಅವನು ಅವರ ಶಿಷ್ಯನಾದನು. ಅವನೇ ಮುಂದೆ "ಸ್ವಾಮಿ ವಿವೇಕಾನಂದ" ಎಂದು ಪ್ರಸಿದ್ಧಿ ಪಡೆದನು.

ರಾಮಕೃಷ್ಣ ಪರಮಹಂಸರ ಪವಿತ್ರಜೀವನವು ಎಲ್ಲ ಜನರ ಮನಸ್ಸನ್ನು ಸೆರೆ ಹಿಡಿಯಿತು. ಜೀವಿಸಿ ಇರುವವರೆಗೂ ತಮ್ಮ ಧರ್ಮೋಪದೇಶದ ಕಾರ್ಯವನ್ನು ಅವರು ಬಿಡಲಿಲ್ಲ. ಕೊನೆಗೆ ಅವರಿಗೆ ಗಂಟಲಿಗೇನೋ ನೋವಾಯಿತು. ಎಷ್ಟು ಪ್ರಯತ್ನಪಟ್ಟರೂ ಅದು ಗುಣವಾಗಲಿಲ್ಲ. ಅದರಲ್ಲಿಯೇ ಅವರು ದಿವಂಗತರಾದರು. ಅವರ ತರುವಾಯ ವಿವೇಕಾನಂದರು ಅವರ ಕೀರ್ತಿಯನ್ನು ಜಗತ್ತಿನ ತುಂಬ ಹಬ್ಬಿಸಿದರು. ರಾಮಕೃಷ್ಣರ ಮಠಗಳು ಈಗ ಎಲ್ಲ ದೇಶಗಳಲ್ಲಿಯೂ ಇದ್ದು, ಅವು ಸಮಾಜ ಸೇವೆಯನ್ನೂ ಧರ್ಮಬೋಧೆಯನ್ನೂ ಮಾಡುತ್ತವೆ.

## ಅಭ್ಯಸನಗಳು

೧. ಚಿಕ್ಕಂದಿನಲ್ಲಿ ಗದಾಧರನಲ್ಲಿ ಯಾವ ಯಾವ ಗುಣಗಳಿದ್ದುವು?

೨. ಶಿವರಾತ್ರಿಯಲ್ಲಿ ಮಾಡಿದ ಬಯಲಾಟದಲ್ಲಿ ಯಾವ ಪಾತ್ರವನ್ನು ಮಾಡಿದನು? ಅದು ಏಕೆ ಉತ್ತಮವಾಯಿತು?

೩. ಗದಾಧರನು ಪರಮಹಂಸನು ಹೇಗೆ ಆದನು?

೪. ಪರಮಹಂಸರ ಕೀರ್ತಿಯನ್ನು ಜಗತ್ತಿನ ತುಂಬ ಯಾರು ಹಬ್ಬಿಸಿದರು?

೫. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿ ವಾಕ್ಯಗಳನ್ನು ಪೂರ್ತಿಗೊಳಿಸಿರಿ.

(ಅ) ಗದಾಧರನ ತಂದೆಯು......ತಾಯಿ......

(ಬ) ಗದಾಧರನು ಶಾಲೆಯಲ್ಲಿ......ವನ್ನು ತೀವ್ರ ಕಲಿತನು......ಅವನಿಗೆ ಸೇರುತ್ತಿರಲಿಲ್ಲ.

(ಕ) ......ಇವಳು ದಕ್ಷಿಣೇಶ್ವರದಲ್ಲಿ......ಮಂದಿರವನ್ನು ಕಟ್ಟಿಸಿದಳು.

(ಡ) ಪರಮಹಂಸರು......ಸಾಧುಗಳಿಂದ ಸಂನ್ಯಾಸವನ್ನು ಸ್ವೀಕರಿಸಿದರು.

(ಇ) ಪರಮಹಂಸರಿಗೆ......ಹುಚ್ಚು ಹಿಡಿದಿತ್ತು.

# ೪೨. ಮಹಾತ್ಮಾ ಜ್ಯೋತೀರಾವ ಫುಲೇ

ಪುಣೆ ಜಿಲ್ಹೆಯಲ್ಲಿ ಖಾನವಡಿ ಎಂಬ ಹಳ್ಳಿ ಇದೆ. ಅಲ್ಲಿ ಗೋವಿಂದನೆಂಬ ಒಬ್ಬ ಬಡವನು ದನ-ಕುರಿಗಳನ್ನು ಸಾಕಿ, ತನ್ನ ಹೊಟ್ಟೆತುಂಬಿಕೊಳ್ಳುತ್ತಿದ್ದನು. ಉಳಿದ ವೇಳೆಯನ್ನು ಅವನು, ತನ್ನ ಮನೆಯ ಅಂಗಳದಲ್ಲಿ ಹೂವಿನ ಗಿಡ-ಬಳ್ಳಿಗಳನ್ನು ಬೆಳೆಸುವುದರಲ್ಲಿ ಕಳೆಯುತ್ತಿದ್ದನು. ಅವನ ಈ ತೋಟಗಾರಿಕೆಯನ್ನು ಕಂಡು ಎಲ್ಲ ಜನರೂ ‹ನೀನು ಮಾಳಿಯ ಕೆಲಸವನ್ನು ಚೆನ್ನಾಗಿ ಮಾಡುವೆ. ಆದುದರಿಂದ ದೊಡ್ಡ ನಗರದಲ್ಲಿ ಮಾಳಿಯಾಗಿ ಹೋಗು› ಎಂದು ಹೇಳುತ್ತಿದ್ದರು. ಇದೇ ವೇಳೆಗೆ ಪುಣೆಯಲ್ಲಿ, ಪೇಶ್ವೆಯರಿಗೆ ಒಬ್ಬ ಕುಶಲನಾದ



ಮಹಾತ್ಮಾ ಜ್ಯೋತೀರಾವ ಫುಲೇ

ಮಾಳಿಯು ಬೇಕಾಗಿದ್ದನು. ಗೋವಿಂದನ ಹೆಸರನ್ನು ಕೇಳಿ, ಪೇಶ್ವೆಯವರು ಅವನನ್ನು ಪುಣೆಗೆ ಕರೆಸಿದರು. ಅಂದಿನಿಂದ ಗೋವಿಂದನು ಪುಣೆಯಲ್ಲಿ ಇರಹತ್ತಿದನು. ಅವನು ಹೂ-ಗಿಡಗಳ ರಕ್ಷಣೆಯ ಕಾರ್ಯದಲ್ಲಿ ಒಳ್ಳೆಯ ಕುಶಲತೆಯನ್ನು ತೋರಿಸಿದ್ದರಿಂದ, ಅವನಿಗೆ ‹ಫುಲೇ› ಎಂದು ಅಡ್ಡ ಹೆಸರುಬಂದಿತು.

ಗೋವಿಂದ ಫುಲೇನಿಗೆ ಚಿಮಣಾಬಾಯಿ ಎಂಬ ಹೆಂಡಿತಿಯಿದ್ದಳು. ಈ ದಂಪತಿಗಳ ಹೊಟ್ಟೆಯಿಂದ ಜ್ಯೋತೀಬಾ, ಕ್ರಿ. ಶ. ೧೮೨೭ರಲ್ಲಿ ಜನ್ಮತಾಳಿದನು. ಮಗನು ಒಂಬತ್ತು ತಿಂಗಳದವನಿರುವಾಗಲೆ ಚಿಮಣಾಬಾಯಿ ತೀರಿಕೊಂಡಳು. ಮಗನನ್ನು ರಕ್ಷಿಸುವ ಭಾರವೆಲ್ಲ ತಂದೆಯ ಮೇಲೆಯೆ ಬಿದ್ದಿತು. ಹೂವಿನ ಗಿಡ-ಗಂಟಿಗಳನ್ನು ಬೆಳೆಸುವಂತೆ ಅವನು ಅಕ್ಕರೆಯಿಂದ ಮಗ

ಜ್ಯೋತಿಯನ್ನು ಬೆಳೆಸಿದನು. ಐದಾರು ವರುಷದವನಾದ ಬಳಿಕ ಮಗನನ್ನು ಸಾಲೆಗೆ ಹಾಕಿದನು.

ಬಾಲಕ ಜ್ಯೋತಿಯು ಸಾಲೆಯಲ್ಲಿ ಮನಸ್ಸುಗೊಟ್ಟು ಅಭ್ಯಾಸ ಮಾಡುತ್ತಿದ್ದನು. ೪ನೆಯ ಇಯತ್ತೆ ಕಲಿತಬಳಿಕ, ತಂದೆ ಅವನನ್ನು ಸಾಲೆ ಬಿಡಿಸಿದನು. ತನ್ನ ಮನೆಯ ಉದ್ಯೋಗವಾದ 'ಮಾಳಿ' ಕೆಲಸವನ್ನು ಕಲಿಸಲು ಪ್ರಾರಂಭಿಸಿದನು. ಜ್ಯೋತೀಬಾ ಅದರಲ್ಲಿಯೂ ತನ್ನ ಕುಶಲತನವನ್ನು ತೋರಿಸಹತ್ತಿದನು. ಬಾಲಕನ ಚುರುಕುಬುದ್ಧಿಯನ್ನು ಕಂಡು ಜನರು "ಇವನನ್ನು ಇಂಗ್ಲಿಷ್ ಸಾಲೆಗೆ ಹಾಕಿರಿ" ಎಂದು ಅವನ ತಂದೆಗೆ ಹೇಳತೊಡಗಿದರು. ಆಗಿನ ಕಾಲದಲ್ಲಿ ನಾಲ್ಕೈದು ಇಯತ್ತೆ ಇಂಗ್ಲಿಷ್ ಕಲಿತರೆ ದೊಡ್ಡ ದೊಡ್ಡ ಸರಕಾರೀ ನೌಕರಿಗಳು ಸಿಗುತ್ತಿದ್ದುವು. ಆದುದರಿಂದ ಗೋವಿಂದನು ಮಗನನ್ನು ಇಂಗ್ಲಿಷ್ ಸಾಲೆಗೆ ಹಾಕಿದನು. ಆಗ ಜ್ಯೋತೀಬಾನಿಗೆ ಹದಿನಾಲ್ಕು ವರುಷಗಳಾಗಿದ್ದುವು.

ಹರಿತವಾದ ಬುದ್ಧಿಯ ಜ್ಯೋತೀಬಾನಿಗೆ ಯಾವುದೂ ಕಠಿಣವೆನಿಸಲಿಲ್ಲ. ಪ್ರತಿಯೊಂದು ವಿಷಯದಲ್ಲಿಯೂ ಅವನ ಕೈಮೇಲು. ಆಟಗಳಲ್ಲಿಯೂ ಅವನು ಬಲು ಚತುರನಾಗಿದ್ದನು. ಓದುವುದರಿಂದ ಸಂತೋಷವಾಗುತ್ತಿದ್ದಂತೆ ಅವನಿಗೆ—ಆಡುವುದರಿಂದಲೂ ವ್ಯಾಯಾಮಮಾಡುವುದರಿಂದಲೂ ಆಗುತ್ತಿತ್ತು. ಇದರಿಂದ ಅವನು ಬಲವಂತನೂ ಬುದ್ಧಿವಂತನೂ ಆದನು. ಸಾಲೆಯಲ್ಲಿ ಜ್ಯೋತೀಬಾನು ಎಲ್ಲರ ಕೂಡ ಪ್ರೇಮದಿಂದ ನಡೆದುಕೊಳ್ಳುತ್ತಿದ್ದನು. ಆದುದರಿಂದ ಗುರುಗಳು ಅವನನ್ನು ಪ್ರೀತಿಸುತ್ತಿದ್ದರು; ವರ್ಗದ ಎಲ್ಲ ವಿದ್ಯಾರ್ಥಿಗಳೂ ಅವನನ್ನು ಅಕ್ಕರೆಯಿಂದ ಕಾಣುತ್ತಿದ್ದರು.

ಜ್ಯೋತೀಬಾ ಏಳು ವರ್ಷಗಳವರೆಗೆ ಇಂಗ್ಲಿಷ್ ಅಭ್ಯಾಸಮಾಡಿ ಸಾಲೆ-ಬಿಟ್ಟನು. ಆ ಏಳು ವರುಷಗಳು ಅವನ ಜೀವನದಲ್ಲಿ ಬಹಳ ಮಹತ್ತ್ವದುವು. ಅವನು ಸಾಲೆಕಲಿಯುವಾಗಲೇ ಸಮಾಜ ಸುಧಾರಣೆಯ ಬಗೆಗೆ ಯೋಚಿಸುತ್ತಿದ್ದನು. ಮೇಲಿನವರು-ಕೆಳಗಿನವರು, ಬಡವರು-ಶ್ರೀಮಂತರು, ಕಲಿತವರು-ಕಲಿಯದವರು—ಮುಂತಾದ ಸಮಾಜದಲ್ಲಿಯ ಭೇದ-ಭಾವಗಳ ಬಗೆಗೆ ಅವನು ಹಗಳಿರುಳೂ ಚಿಂತಿಸುತ್ತಿದ್ದನು. ಸ್ವತಂತ್ರತೆ, ಸಮತೆ, ಬಂಧು-ಭಾವಗಳು ಎಲ್ಲರಲ್ಲಿಯೂ ನೆಲೆಗೊಳ್ಳುವಂತೆ ಪ್ರಯತ್ನಿಸಬೇಕೆಂದು ಅವನು ಮನಸ್ಸು ಮಾಡಿದನು. ಸಾಲೆಯನ್ನು ಬಿಟ್ಟಬಳಿಕ ಅವನು ಅದೇ ಕೆಲಸವನ್ನು ಪ್ರಾರಂಭಿಸಿದನು.

ಜ್ಯೋತೀಬಾ ಸರಕಾರೀ ನೌಕರಿಯನ್ನು ಹಿಡಿಯಲಿಲ್ಲ. ಸಮಾಜ ಸುಧಾರಣೆಯನ್ನೇ ತನ್ನ ಮುಖ್ಯ ಕಾರ್ಯವನ್ನಾಗಿ ಮಾಡಿಕೊಂಡನು. ಆಗಿನ

ಕಾಲದಲ್ಲಿ ಸ್ತ್ರೀಯರಿಗೆ ಸಮಾಜದಲ್ಲಿ ತಕ್ಕ ಸ್ಥಾನವಿದ್ದಿಲ್ಲ. ಅವರಿಗೆ ಶಾಲೆ ಳಲ್ಲಿ ವಿದ್ಯೆಯನ್ನು ಕೂಡ ಕಲಿಸುತ್ತಿರಲಿಲ್ಲ. ಆದುದರಿಂದ ಜ್ಯೋತೀಬಾ ೧೮೪೮ರಲ್ಲಿ, ಪುಣೆಯಲ್ಲಿ ಹೆಣ್ಣುಮಕ್ಕಳ ಶಾಲೆಯನ್ನು ಮೊತ್ತಮೊದ ಲನೆಯದನ್ನಾಗಿ ತೆರೆದನು. ನಾಲ್ಕಾರು ಬಾಲಿಕೆಯರಿಂದ ಪ್ರಾರಂಭವಾದ ಆ ಸಾಲೆ, ಐದಾರು ವರುಷಗಳಲ್ಲಿ ನೂರಾರು ಬಾಲಿಕೆಯರಿಂದ ತುಂಬಿತು. ಜ್ಯೋತೀಬಾನ ಸಹಾಯಕ್ಕೆ ಅವನ ಧರ್ಮಪತ್ನಿಯಾದ ಸಾವಿತ್ರೀಬಾಯಿ ಕೂಡ ಮುಂದುವರಿದಳು. ಅವಳೂ ಶಿಕ್ಷಿಕೆಯ ಕೆಲಸ ಮಾಡಹತ್ತಿದಳು. ಮುಂದೆ ಅದು 'ಹುಜೂರ್‌ಪಾಗಾ ಸಾಲೆ' ಎಂದು ಪುಣೆಯಲ್ಲಿ ಪ್ರಸಿದ್ಧಿಯನ್ನು ಪಡೆಯಿತು.

ಹರಿಜನರಿಗಾಗಿಯೂ ಜ್ಯೋತೀಬಾ ಒಂದು ಸಾಲೆಯನ್ನು ತೆರೆದನು. ಆಗಿನ ಕಾಲದಲ್ಲಿ ಹರಿಜನರನ್ನು ಯಾರೂ ಮುಟ್ಟಿಸಿಕೊಳ್ಳುತ್ತಿದ್ದಿಲ್ಲ. ಕಾರಣ ಎಷ್ಟೋ ಜನರು ಇವನ ಈ ಕಾರ್ಯಕ್ಕೆ ವಿರೋಧಮಾಡಿದರು. ಆದರೂ ಜ್ಯೋತೀರಾವನು ಹೆದರಲಿಲ್ಲ. ತನ್ನ ಸಾಲೆಯನ್ನು ಉತ್ತಮರೀತಿಯಿಂದ ನಡೆಸಿಯೇ ಬಿಟ್ಟನು. ಅಲ್ಲದೆ ತನ್ನ ಮನೆಯಲ್ಲಿದ್ದ ನೀರಿನ ಹೌದನ್ನು, ಹರಿ-ಜನರು ನೀರು ತುಂಬಿಕೊಂಡು ಹೋಗುವಂತೆ ಮುಕ್ತಮಾಡಿಬಿಟ್ಟನು. ಇದರಿಂದ ಅವನ ಕೀರ್ತಿಯು ಎಲ್ಲಕಡೆಗೂ ಹಬ್ಬಿತು.

ಜ್ಯೋತೀಬಾ ರೈತರನ್ನು ಸುಧಾರಿಸಲು ರೈತಸಂಘಟನೆಯನ್ನು ಮಾಡಿ-ದನು. ಅಲ್ಲಲ್ಲಿ ತಿರುಗಾಡಿ ರೈತರಿಗೆ ಉಪದೇಶ ಮಾಡಿದನು. ಮಾದಕ ಪೇಯಗಳನ್ನು ಕುಡಿಯುವುದರಿಂದ ಉಂಟಾಗುವ ಅನರ್ಥಗಳನ್ನು ಜನರಿಗೆ ತಿಳಿಹೇಳಿದನು. ಸರಕಾರದವರು ಲೋಕಮಾನ್ಯ ಟಿಳಕ ಹಾಗು ಆಗರಕರರನ್ನು ಬಂಧಿಸಿದರು. ಆಗ ಜ್ಯೋತೀಬಾ ಸರಕಾರದವರನ್ನು ಬಹಿರಂಗವಾಗಿ ಸಭೆ-ಗಳಲ್ಲಿ ಟೀಕಿಸಿದನು. ಟಿಳಕರು ಮತ್ತು ಆಗರಕರರು ಸೆರೆಮನೆಯಿಂದ ತಿರುಗಿ ಬಂದಾಗ, ಅವರ ದೇಶಪ್ರೇಮ-ಸಮಾಜಕಾರ್ಯಗಳನ್ನು ಹೊಗಳಿ ಭಾಷಣಮಾಡಿ ಅವರನ್ನು ಸ್ವಾಗತಿಸಿದನು.

ಕ್ರಿ. ಶ. ೧೮೭೭ರಲ್ಲಿ, ಭಾರತದಲ್ಲಿ ದೊಡ್ಡ ಬರಬಿದ್ದಿತು. ಆಗ ಎಷ್ಟೋ ಜನರು ಹೊಟ್ಟಿಗಿಲ್ಲದೆ ಸತ್ತರು. ಅದನ್ನು ಕಂಡು ಜ್ಯೋತೀಬಾ ಮರಮರನೆ ಮರುಗಿದನು. ಬಡಬಗ್ಗರ ಮಕ್ಕಳಿಗಾಗಿ ಒಂದು ಅನ್ನಛತ್ರವನ್ನು ತೆರೆದನು. ಅದಕ್ಕೆ ತಾನು ಗಳಿಸಿದ ಎಲ್ಲ ಹಣವನ್ನೂ ವೆಚ್ಚಮಾಡಿದನು. ಅವನ ಜನ-ಸೇವೆ-ಬಂಧುಭಾವವನ್ನು ಕಂಡು ಸರಕಾರವೂ ಅವನನ್ನು ಹೊಗಳಿತು. ಜನರು ಅವನನ್ನು 'ಮಹಾತ್ಮಾ' ಎಂದು ಕರೆಯಹತ್ತಿದರು. ಮೊದಲಿನ ಸಾಮಾನ್ಯ ಜ್ಯೋತೀಬಾ 'ಮಹಾತ್ಮಾ ಜ್ಯೋತೀರಾವ್ ಫುಲೆ' ಆದರು. ಹೀಗೆ

ಜನಸೇವೆಮಾಡಿ ಕೀರ್ತಿಗಳಿಸಿ ಅವರು ಕ್ರಿ. ಶ. ೧೮೯೦ರಲ್ಲಿ ಸ್ವರ್ಗವಾಸಿಗಳಾದರು.

ಮಹಾತ್ಮಾ ಫುಲೆ ಅವರು ತುಂಬ ದಯಾಶಾಲಿಗಳು. ಪರೋಪಕಾರ ಬುದ್ಧಿಯವರು. ನಿಜವಾದ ಧರ್ಮವೆಂದರೆ ಏನೆಂಬುವದನ್ನು ಅವರು ತಿಳಿದು ಕೊಂಡಿದ್ದರು. ಅದರಂತೆ ಜನರಿಗೆ ಬೋಧಿಸಿದರು. ‘ನುಡಿದಂತೆ ನಡೆ’ ಎಂಬ ತತ್ತ್ವದಂತೆ, ಅವರು ಆಡಿದಂತೆ ಮಾಡಿಯೂ ತೋರಿಸಿ ಕೀರ್ತಿಗಳಿಸಿದರು.

## ಅಭ್ಯಸನಗಳು

೧. ಜ್ಯೋತೀಬಾ ಫುಲೆ ಇವರ ತಂದೆ-ತಾಯಿಗಳು ಯಾರು?
೨. ಇವರ ತಾಯಿಯು ಯಾವಾಗ ತೀರಿಕೊಂಡಳು?
೩. ಮೊದಲು ಜ್ಯೋತಿಯನ್ನು ಅವರ ತಂದೆಯು ಶಾಲೆಯಿಂದ ಏಕೆ ಬಿಡಿಸಿದನು?
೪. ಮುಂದೆ ಜ್ಯೋತಿಯನ್ನು ಅವನ ತಂದೆಯೇ ಇಂಗ್ಲಿಷ ಶಾಲೆಗೆ ಏಕೆ ಹಾಕಿದನು?
೫. ಜ್ಯೋತಿಯು ಶಾಲೆಬಿಟ್ಟ ಬಳಿಕ ಯಾವ ಕಾರ್ಯವನ್ನು ಕೈಕೊಂಡನು?
೬. ಜ್ಯೋತಿಬಾ ಫುಲೆಯವರು ಕೈಕೊಂಡ ಮಹತ್ತ್ವದ ಕಾರ್ಯಗಳಾವುವು?
೭. ಇವರನ್ನು “ಮಹಾತ್ಮ” ಎಂದು ಏಕೆ ಕರೆಯುತ್ತಿದ್ದರು?
೮. ಇದರಲ್ಲಿಯ ಮಹತ್ತ್ವದ ಗುಣಗಳಾವುವು?

# ೪೩. ಸ್ವಾಮೀ ವಿವೇಕಾನಂದರು

ರಾಮಕೃಷ್ಣ ಪರಮಹಂಸರಿಗೆ ಅನೇಕ ಜನ ಶಿಷ್ಯರಿದ್ದರು. ಅವರೆಲ್ಲರಲ್ಲಿ ಸ್ವಾಮೀ ವಿವೇಕಾನಂದರು ಪ್ರಸಿದ್ಧರು. ಇವರು ಜಗತ್ತಿನ ಎಲ್ಲ ದೇಶಗಳಲ್ಲಿಯೂ ತಮ್ಮ ಗುರುಗಳ ಕೀರ್ತಿಯನ್ನು ಹಬ್ಬಿಸಿದರು; ಪವಿತ್ರವಾದ ಹಿಂದು ಧರ್ಮದ ಕೀರ್ತಿಯನ್ನೂ ಬೆಳಗಿಸಿದರು. ‘ಭಾರತದ ಶ್ರೇಷ್ಠಯೋಗಿ’ ಎಂದು ಜಗತ್ತಿನ ಜನರಿಂದ ಇವರು ಹೊಗಳಿಸಿಕೊಂಡರು.

ವಿವೇಕಾನಂದರು ಬಂಗಾಲ ದೇಶದವರು. ವಿಶ್ವನಾಥದತ್ತರು ಇವರ ತಂದೆ; ತಾಯಿಯ ಹೆಸರು ಭುವನೇಶ್ವರೀದೇವಿ. ಬುದ್ಧಿಶಾಲಿಗಳೂ, ಸುಶೀಲರೂ ಆದ ಈ ತಂದೆ-ತಾಯಿಗಳ ಹೊಟ್ಟೆಯಿಂದ ಕ್ರಿ. ಶ. ೧೮೬೩ರಲ್ಲಿ ಇವರು ಹುಟ್ಟಿದರು. ಇವರಿಗೆ ಮೊದಲು ‘ನರೇಂದ್ರನಾಥ’ ಎಂದು ಹೆಸರು ಇತ್ತು. ಇವರ ಮನೆತನದವರು ಕಲಕತ್ತೆಯಲ್ಲಿ ಇರುತ್ತಿದ್ದರು.

ನರೇಂದ್ರನಾಥನು ಬಲು ಬುದ್ಧಿಶಾಲಿ. ಅವನು ಶಾಲೆಯಲ್ಲಿ ಗುರುಗಳ ಪ್ರೀತಿಗೆ ಪಾತ್ರನಾಗಿದ್ದನು. ಯಾವಾಗಲೂ ಹರಟೆಹೊಡೆಯುತ್ತ ಕುಳಿತಿರದೆ ಯಾವುದಾದರೊಂದು ವಿಚಾರದಲ್ಲಿಯೆ ಮನಸ್ಸನ್ನು ತೊಡಗಿಸಿರುತ್ತಿದ್ದನು.

ಮೊದಲಿನಿಂದಲೂ ಧರ್ಮದ ಕಡೆಗೆ ಅವನ ಒಲವು ಬಹಳ. ಎಲ್ಲಿಯಾದರೂ ಕೀರ್ತನ-ಪ್ರವಚನಗಳು ನಡೆದರೆ ಅಲ್ಲಿ ನರೇಂದ್ರನು ಇರುವವನೇ. ವ್ಯಾಯಾಮ-ಆಟಗಳಲ್ಲಿಯೂ ಆತನಿಗೆ ತುಂಬ ಪ್ರೀತಿ. ಆದುದರಿಂದ ಅವನ ಶರೀರವು ಸುದೃಢವಾಗಿ ಸುಂದರವಾಗಿತ್ತು. ಧ್ವನಿಯು ಬಹಳ ಇಂಪಾಗಿತ್ತು. ನರೇಂದ್ರನು ಮಧುರಧ್ವನಿಯಲ್ಲಿ ಸವಿಯಾಗಿ ಹಾಡುತ್ತಿದ್ದನು.

ಪ್ರಾಥಮಿಕ ಹಾಗು ಮಾಧ್ಯಮಿಕ ಸಾಲೆಗಳ ಅಭ್ಯಾಸವನ್ನು ಮುಗಿಸಿ ಉಚ್ಚ ಅಭ್ಯಾಸಕ್ಕಾಗಿ ನರೇಂದ್ರನು ಕಾಲೇಜನ್ನು ಸೇರಿದನು. ಅಲ್ಲಿ ಅವನು



ಸ್ವಾಮೀ ವಿವೇಕಾನಂದರು

ತತ್ತ್ವಜ್ಞಾನವನ್ನು ಅಭ್ಯಾಸಮಾಡಹತ್ತಿದನು. ಆಗಲೆ ಎಲ್ಲ ಧರ್ಮಗಳ ಪುಸ್ತಕಗಳನ್ನೂ ಓದಿಮುಗಿಸಿದನು. 'ಜೀವನದ ಗುರಿ ಏನು?' ಎಂದು ತಿಳಿಯಲು ಅವನು ಬಹಳ ಪ್ರಯತ್ನಪಡುತ್ತಿದ್ದನು. ಆಗಿನ ಕಾಲದ ಪಂಡಿತರನ್ನೂ ಧರ್ಮಗುರುಗಳನ್ನೂ ಆಗಾಗ ಕಾಣುತ್ತಿದ್ದನು. ಅವರೊಡನೆ ವಾದ-ಚರ್ಚೆ ನಡೆಸುತ್ತಿದ್ದನು. ಏನು ಮಾಡಿದರೂ ಅವನಿಗೆ ಸಮಾಧಾನವಾಗಲಿಲ್ಲ. ಕ್ರೈಸ್ತ ಪಾದ್ರಿಗಳ ಧರ್ಮಬೋಧನೆ ಕೇಳಲು ಹೋಗುತ್ತಿದ್ದನು; ಅದೂ ಅವನ ಮನ-

ಸ್ಸನ್ನು ಹಿಡಿಯಲಿಲ್ಲ. ‹ದೇವರಿದ್ದಾನೆಯೆ?' ಎಂಬ ಪ್ರಶ್ನೆ ಅವನನ್ನು ಹಗಲು ರಾತ್ರಿ ಕಾಡುತ್ತಿತ್ತು. ಒಂದುಸಲ ಕಾಲೇಜನ್ನು ಬಿಟ್ಟು, ನಡುವೇ ಹಿಮಾಲಯ ಪರ್ವತಕ್ಕೆ ಹೊರಟುಹೋದನು. ಅಲ್ಲಿ ಧ್ಯಾನಮಾಡುತ್ತ ಕುಳಿತನು. ಅಲ್ಲಿಯೂ ಅವನ ಮನಸ್ಸಿಗೆ ಶಾಂತಿ ಸಿಗಲಿಲ್ಲ. ತಿರುಗಿ ಬಂದು ಮತ್ತೆ ಕಾಲೇಜಿನಲ್ಲಿ ಓದಹತ್ತಿದನು.

ಒಂದು ದಿನ ನರೇಂದ್ರನ ಗೆಳೆಯನ ಮನೆಯಲ್ಲಿ ಒಂದು ಉತ್ಸವ ನಡೆದಿತ್ತು. ಆ ಉತ್ಸವಕ್ಕೆ ನರೇಂದ್ರನು ಹೋಗಿ ಕೆಲವು ಹಾಡುಗಳನ್ನು ಹಾಡಿದನು. ಅಲ್ಲಿಗೆ ರಾಮಕೃಷ್ಣ ಪರಮಹಂಸರೂ ಬಂದಿದ್ದರು. ಅವರು ಹುಡುಗನ ತೇಜಸ್ಸನ್ನು ಕಂಡರು. ದಕ್ಷಿಣೇಶ್ವರದಲ್ಲಿರುವ ಕಾಳಿಕಾ ದೇವ-ಸ್ಥಾನಕ್ಕೆ ಬರಬೇಕೆಂದು ಅವನಿಗೆ ಅವರು ಹೇಳಿದರು. ಕೆಲವು ದಿವಸಗಳಾದ ಬಳಿಕ ನರೇಂದ್ರನು ದಕ್ಷಿಣೇಶ್ವರಕ್ಕೆ ಹೋದನು. ಪರಮಹಂಸರು ಅವನಿಗೆ ಹಾಡಲು ಹೇಳಿದರು. ನರೇಂದ್ರನು ಭಕ್ತಿಗೀತಗಳನ್ನು ಇಂಪಾಗಿ ಹಾಡಿದನು. ಶ್ರೀರಾಮಕೃಷ್ಣರಿಗೆ ಬಹಳ ಆನಂದವಾಯಿತು. ಅವನನ್ನು ತಮ್ಮ ಕೋಣೆಗೆ ಕರೆದುಕೊಂಡು ಹೋಗಿ "ಏಕೆ ನೀನು ಇಷ್ಟು ದಿನಗಳಾದ ಮೇಲೆ ಬಂದೆ? ನಿನಗಾಗಿ ಕಾದು ಕಾದು ಸಾಕಾಗಿದೆ ನನಗೆ" ಎಂದು ಅಳುತ್ತ ಹೇಳಿದರು. ಇದೆಲ್ಲ ಡಂಭಾಚಾರವೆಂದು ನರೇಂದ್ರ ಭಾವಿಸಿದನು. ಆಗ ಅವನು "ಅದು ಇರಲಿ! ನೀವು ದೇವರನ್ನು ನೋಡಿದ್ದೀರಾ" ಎಂದು ಕೇಳಿದನು. ಅದಕ್ಕೆ ಪರಮ ಹಂಸರು ‹ಹೌದು' ಎಂದು ಹೇಳಿದರು. "ನಿನ್ನನ್ನು ನೋಡಿದಂತೆಯೇ ಅವ ನನ್ನೂ ನೋಡುತ್ತೇನೆ; ಅವನೊಡನೆ ಮಾತಾಡುತ್ತೇನೆ" ಎಂದು ಹೇಳಿದರು. ಇದನ್ನು ಕೇಳಿ ನರೇಂದ್ರನಿಗೆ ಆಶ್ಚರ್ಯವಾಯಿತು. ಇಂತಹ ಉತ್ತರವನ್ನು ಅವ-ನೆಂದೂ ಕೇಳಿದ್ದಿಲ್ಲ. ಇದರಲ್ಲಿ ಅವನಿಗೆ ವಿಶ್ವಾಸ ಹುಟ್ಟಿತು. ಅಂದಿನಿಂದ ನರೇಂದ್ರನು ಪರಮಹಂಸರ ಶಿಷ್ಯನಾದನು.

ಮುಂದೆ ನರೇಂದ್ರನು ಮೇಲಿಂದಮೇಲೆ ದಕ್ಷಿಣೇಶ್ವರಕ್ಕೆ ಬರಹತ್ತಿದನು. ಒಂದು ದಿನ ಪರಮಹಂಸರಿಗೆ, ಇನ್ನು ತಾವು ಸಾಯುವುದು ನಿಶ್ಚಿತವೆನಿಸಿತು. ಅವರು ನರೇಂದ್ರನನ್ನು ನೋಡುತ್ತ ನೋಡುತ್ತ "ನರೇಂದ್ರಾ! ನನ್ನ ಎಲ್ಲ ಶಕ್ತಿಗಳನ್ನು ನಿನಗೆ ದಾನಮಾಡಿದ್ದೇನೆ. ಇನ್ನು ನನ್ನಲ್ಲಿ ಏನೂ ಇಲ್ಲ. ನೀನು ಜಗತ್ತಿಗೆ ದೊಡ್ಡ ಉಪಕಾರ ಮಾಡಬೇಕು" ಎಂದು ಹೇಳಿದರು. ಆಗ ನರೇಂದ್ರನ ಮೈಯಲ್ಲಿ ಮಿಂಚು ಸಂಚರಿಸಿದಂತಾಯಿತು. ಅವನಿಗೆ ಜ್ಞಾನ-ವುಂಟಾಯಿತು. ಗುರುಗಳ ಮರಣದ ನಂತರ ಅವನು ಪರಮಹಂಸರ ಶಿಷ್ಯರಿ-ಗೆಲ್ಲ ನಾಯಕನಾದನು. ಅಂದಿನಿಂದ ಅವನು ‹ಸ್ವಾಮಿ ವಿವೇಕಾನಂದ' ಎಂದು ಹೆಸರಾದನು.

ಸ್ವಾಮಿ ವಿವೇಕಾನಂದರು ಕಾಲುನಡಿಗೆಯಿಂದಲೇ ಭಾರತದೇಶದ ತುಂಬ ತಿರುಗಾಡಿದರು. ನಮ್ಮ ದೇಶದ ಜನರ ಭಯಂಕರ ಬಡತನ, ತಿಳಿಗೇಡಿತನ, ಅಸೂಯೆ, ದ್ವೇಷ, ದುರಾಸೆ ಇವುಗಳನ್ನು ಕಂಡು ಕಣ್ಣೀರು ಸುರಿಸಿದರು. ಭಾರತ ದೇಶವನ್ನು ಸುಧಾರಿಸಲು ಪ್ರಯತ್ನಮಾಡಿದರು. ನಿಜವಾದ ಧರ್ಮವು ಯಾವುದೆಂಬುದನ್ನು ಎಲ್ಲರಿಗೂ ತಿಳುಹಿದರು. ಸಂನ್ಯಾಸಿಗಳ ಕರ್ತವ್ಯವೇನೆಂಬುದನ್ನು ಹೇಳಿಕೊಟ್ಟರು. "ಏಳಿರಿ, ಎಚ್ಚರಾಗಿರಿ! ಗುರಿ ಮುಟ್ಟುವವರೆಗೆ ನಿಲ್ಲದೆ ಮುನ್ನುಗ್ಗಿರಿ!!" ಎಂದು ಭಾರತೀಯರನ್ನು ಎಚ್ಚರಿಸಿದರು.

ಅಮೇರಿಕೆಯ ಚಿಕ್ಯಾಗೋ ಪಟ್ಟಣದಲ್ಲಿ ಒಮ್ಮೆ ಸರ್ವಧರ್ಮಗಳ ಸಭೆಯಾಗಿತ್ತು. ಅಲ್ಲಿಗೆ ವಿವೇಕಾನಂದರು ಹೋದರು. ಹಿಂದುಧರ್ಮದ ಹಿರಿಮೆಯನ್ನು ಅಲ್ಲಿ ಅವರು ಹೇಳಿದರು. ಅಲ್ಲಿಯ ಜನರನ್ನೆಲ್ಲ ಅವರು ಬೆರಗುಗೊಳಿಸಿದರು. ಅಲ್ಲಿ ರಾಮಕೃಷ್ಣಾಶ್ರಮವನ್ನು ಸ್ಥಾಪಿಸಿದರು. ಎಷ್ಟೋ ಜನರು ಅವರ ಶಿಷ್ಯರಾದರು. ಹಾಗೆಯೇ ಅವರು ಇಂಗ್ಲಂಡಿಗೆ ಬಂದರು. ಅಲ್ಲಿಯೂ ಪರಮಹಂಸರ ಕೀರ್ತಿಯನ್ನು ಸಾರಿ ಹೇಳಿದರು. ಭಾರತಧರ್ಮದ ಬಗೆಗೆ ಪ್ರಚಾರ ಮಾಡಿದರು. ಹೀಗೆ ಯುರೋಪ ಮತ್ತು ಅಮೇರಿಕಾಖಂಡಗಳಲ್ಲಿ ತಿರುಗಾಡಿ, ತಾಯ್ನಾಡಿನ ಕೀರ್ತಿಯನ್ನು ಹಬ್ಬಿಸಿ ಅವರು ತಿರುಗಿ ಭಾರತಕ್ಕೆ ಬಂದರು. ಬಳಿಕ ಕೆಲವು ವರುಷಗಳ ಕಾಲ ಭಾರತೀಯರಲ್ಲಿದ್ದ ಧರ್ಮ-ಕರ್ತವ್ಯಗಳ ತಪ್ಪುತಿಳಿವಳಿಕೆಗಳನ್ನು ತೆಗೆದುಹಾಕಲು ಪ್ರಯತ್ನಿಸಿದರು. ಅಲ್ಲಲ್ಲಿ ರಾಮಕೃಷ್ಣಮಠಗಳನ್ನು ಸ್ಥಾಪಿಸಿ ಅವುಗಳ ಮೂಲಕ ಜನರಲ್ಲಿ ತಿಳಿವಳಿಕೆಯನ್ನು ಹುಟ್ಟಿಸಿದರು. ಅವರು ಇನ್ನೂ ಚಿಕ್ಕವಯಸ್ಸಿನಲ್ಲಿಯೆ ದಿವಂಗತರಾದರು. ಆಗ ಅವರಿಗೆ ೪೦ ವರುಷಗಳಾಗಿದ್ದುವಷ್ಟೆ!

ವಿವೇಕಾನಂದರು ಶ್ರೇಷ್ಠರಾದ ಸಂನ್ಯಾಸಿಗಳು. ಅವರಿಗೆ ಎಲ್ಲ ವಿಷಯಗಳಲ್ಲಿಯೂ ಅಗಾಧ ಜ್ಞಾನವಿತ್ತು. ಇಂಗ್ಲಿಷ್, ಸಂಸ್ಕೃತ ಭಾಷೆಗಳಲ್ಲಿ ಅವರು ಪಂಡಿತರಾಗಿದ್ದರು. ಅವರು ಬರೆದ 'ಭಕ್ತಿಯೋಗ' 'ಕರ್ಮಯೋಗ' 'ಜ್ಞಾನಯೋಗ' ಮೊದಲಾದ ಪುಸ್ತಕಗಳು ಜಗತ್ತಿನ ಜನರ ಪ್ರೀತಿಗೆ ಪಾತ್ರವಾಗಿವೆ.

## ಅಭ್ಯಸನಗಳು

೧. ಸ್ವಾಮಿ ವಿವೇಕಾನಂದರ ತಂದೆ-ತಾಯಿಗಳಾರು?
೨. ಚಿಕ್ಕಂದಿನಲ್ಲಿ ಇವರ ಒಲವು ಏತರ ಕಡೆಗೆ ಇತ್ತು?
೩. ಇವರು ತಮ್ಮ ಕಾಲೇಜಿನ ಅಭ್ಯಾಸವನ್ನು ಬಿಟ್ಟು ಹಿಮಾಲಯಕ್ಕೆ ಏಕೆ ಹೋದರು?

೪. ಇವರಿಗೂ ರಾಮಕೃಷ್ಣ ಪರಮಹಂಸರಿಗೂ ಎಲ್ಲಕ್ಕೂ ಮೊದಲು ಪರಿಚಯವು ಹೇಗೆ ಆಯಿತು?
೫. ನರೇಂದ್ರನು ಸ್ವಾಮಿ ವಿವೇಕಾನಂದನು ಹೇಗೆ ಆದನು?
೬. ವಿವೇಕಾನಂದರಿಗೆ ಭಾರತದ ಹೀನಸ್ಥಿತಿಯನ್ನು ಕಂಡು ಹೇಗಾಯಿತು?
೭. ಇವರು ಭಾರತದ ಸ್ಥಿತಿಯನ್ನು ಸುಧಾರಿಸಲು ಏನು ಮಾಡಿದರು?
೮. ಇವರು ಬರೆದ ಮಹತ್ತ್ವದ ಗ್ರಂಥಗಳಾವುವು?

# ೪೪. ದಾದಾಭಾಯಿ ನವರೋಜಿ

ದಾದಾಭಾಯಿ ನವರೋಜಿಯವರು ಭಾರತದ ಸ್ವಾತಂತ್ರ್ಯ ಚಳವಳಿಯ ಪಿತಾಮಹರು. (ಪಿತಾಮಹ ಎಂದರೆ 'ಅಜ್ಜ' ಎಂದು ಅರ್ಥ.) ಇವರು ಕ್ರಿ. ಶ. ೧೮೨೫ರಲ್ಲಿ ನವಸಾರಿಯಲ್ಲಿ ಜನಿಸಿದರು. ಇನ್ನೂ ನಾಲ್ಕು ವರುಷದವರಿರುವಾಗಲೆ ಇವರ ತಂದೆಯವರು ತೀರಿಕೊಂಡರು. ಇವರನ್ನು ಜೋಕೆಮಾಡುವ ಭಾರವೆಲ್ಲ ಇವರ ತಾಯಿಯಾದ ಮಾಣಿಕಬಾಯಿಯವರ ಮೇಲೆ ಬಿತ್ತು. ಮಾಣಿಕಬಾಯಿಯವರು ಬಡವರಾದರೂ ಬಹಳ ಬುದ್ಧಿವಂತರೂ ಧೈರ್ಯಶಾಲಿಗಳೂ ಆಗಿದ್ದರು. ದಾದಾಭಾಯಿಯವರ ಒಬ್ಬ ಸೋದರಮಾವ ಮುಂಬಯಿಯಲ್ಲಿ ಇರುತ್ತಿದ್ದರು. ಆದುದರಿಂದ ಇವರು ಮುಂಬಯಿಗೆ ಬಂದು ಸೋದರಮಾವನ ಬಳಿ ನೆಲಸಿದರು. ಮುಂಬಯಿಯಲ್ಲಿಯೆ ಇವರ ವಿದ್ಯಾಭ್ಯಾಸ ಪ್ರಾರಂಭವಾಯಿತು.


ದಾದಾಭಾಯಿ ನವರೋಜಿ

ದಾದಾಭಾಯಿಯವರ ಬುದ್ಧಿ ಬಲು ಹದನಾದುದು. ಅಭ್ಯಾಸದಲ್ಲಿಯೂ ಆಟದಲ್ಲಿಯೂ ಇವರನ್ನು ಸರಿಗಟ್ಟುವವರು ಆ ಶಾಲೆಯಲ್ಲಿ ಯಾರೂ ಇರಲಿಲ್ಲ. ಆದುದರಿಂದ ಗುರುಗಳು ಇವರನ್ನು ಬಹಳ ಪ್ರೀತಿಸುತ್ತಿದ್ದರು. ಪ್ರತಿಯೊಂದು ತರಗತಿಯಲ್ಲಿಯೂ ಇವರು ಮೊದಲನೆಯವರಾಗಿ ತೇರ್ಗಡೆಹೊಂದುತ್ತಿದ್ದರು. ಅಲ್ಲದೆ ಯಾವುದೇ ಬಹುಮಾನವನ್ನೂ ಇವರು ಬಿಡುತ್ತಿದ್ದಿಲ್ಲ. ಹೈಸ್ಕೂಲ್ ಅಭ್ಯಾಸವನ್ನು ಮುಗಿಸಿ ಇವರು ಕಾಲೇಜಿನಲ್ಲಿ ಓದುತ್ತಿದ್ದರು. ಇವರ ಬುದ್ಧಿ

ಕುಶಲತೆಯನ್ನು ಕಂಡು, ಜನರು ಅಲ್ಲಿಯೂ ಹೊಗಳಹತ್ತಿದರು. ಇವರ ಜಾಣ್ಮೆಗೆ ಮೆಚ್ಚಿ, ಇವರನ್ನು ನ್ಯಾಯಶಾಸ್ತ್ರದ ಅಭ್ಯಾಸಕ್ಕಾಗಿ ಇಂಗ್ಲಂಡಿಗೆ ಕಳುಹಬೇಕೆಂದು ವಿಚಾರಮಾಡಿದರು; ಮತ್ತು ಅದಕ್ಕೆ ತಗಲುವ ವೆಚ್ಚದ ಬಹುಭಾಗವನ್ನು ತಾವು ಕೊಡುವುದಾಗಿಯೂ ಕೆಲವು ಜನರು ಹೇಳಿದರು. ಆದರೆ ಹಳೆಯ ಸಂಪ್ರದಾಯದ ಪಾರ್ಸೀ ಜನರಲ್ಲಿ, ಸಮುದ್ರಪರ್ಯಟನಕ್ಕೆ ಧರ್ಮದ ಸಮ್ಮತಿಯಿದ್ದಿಲ್ಲ. ಆದುದರಿಂದ ಇವರು ಆ ಪ್ರಯಾಣವನ್ನು ನಿಲ್ಲಿಸಿ ಬಿಟ್ಟರು. ಮುಂದೆ ಇವರು ತಮ್ಮ ಅಭ್ಯಾಸವನ್ನು ಅಷ್ಟಕ್ಕೇ ಕೊನೆಗಾಣಿಸಿದರು.

ದಾದಾಭಾಯಿಯವರು ತಾವು ಕಲಿತ ಶಾಲೆಯಲ್ಲಿಯೇ ಶಿಕ್ಷಕರಾಗಿ ಕೆಲಸಮಾಡಹತ್ತಿದರು. ಗಣಿತವು ಅವರ ಪ್ರೀತಿಯ ವಿಷಯವಾಗಿತ್ತು. ಅವರು ಶಿಕ್ಷಣದ ಕೆಲಸವನ್ನು ಬಹಳ ದಕ್ಷತೆಯಿಂದ ಮಾಡಿದರು. ತಮ್ಮ ದೇಶವು ಮುಂದೆ ಬರಲೆಂದು ಅವರು ಮನವಿಟ್ಟು ಪ್ರಯತ್ನಿಸುತ್ತಿದ್ದರು. ಕೆಲವೇ ದಿನಗಳಲ್ಲಿ ಅವರು ಸಾಲೆಯ ಎಲ್ಲ ವಿದ್ಯಾರ್ಥಿಗಳ ಪ್ರೇಮಕ್ಕೆ ಪಾತ್ರರಾದರು. 'ಗಂಡುಮಕ್ಕಳಂತೆ ಹೆಣ್ಣುಮಕ್ಕಳೂ ವಿದ್ಯೆಕಲಿತರೆ ದೇಶಕ್ಕೆ ಹಿತವಾಗುವುದು, ಎಂದು ಬಗೆದು, ಅವರು ಹೆಣ್ಣುಮಕ್ಕಳ ಸಾಲೆಯನ್ನು ಪ್ರಾರಂಭಿಸಿದರು. ಜನರಲ್ಲಿ ಜಾಗ್ರತಿಯನ್ನು ಹುಟ್ಟಿಸಲು 'ರಾಸ್ತ್‌ಗೋಪ್ತಾರ್' ಎಂದರೆ 'ಸತ್ಯವಾದಿ' ಎಂಬ ಗುಜರಾಥಿ ವೃತ್ತಪತ್ರಿಕೆಯನ್ನು ಹೊರಡಿಸಹತ್ತಿದರು. ರಾಜಕೀಯ ಹಾಗು ಸಾಮಾಜಿಕ ವಿಷಯಗಳ ಮೇಲೆ ಆಗಾಗ ವ್ಯಾಖ್ಯಾನಗಳನ್ನೂ ಕೊಡ-ಹತ್ತಿದರು. ಮುಂದೆ ಕೆಲವು ದಿನಗಳ ನಂತರ ಶಿಕ್ಷಕನ ಕೆಲಸವನ್ನು ಬಿಟ್ಟರು; 'ಕಾಮಾಕಂಪನಿ' ಎಂಬ ಪಾರ್ಸೀ ವರ್ತಕರ ಸಂಘದ ಮ್ಯಾನೇಜರರೆಂದು ಕೆಲಸಮಾಡಲು ಇಂಗ್ಲಂಡಿಗೆ ತೆರಳಿದರು (೧೮೫೫).

ದಾದಾಭಾಯಿಯವರು ಸ್ವದೇಶವನ್ನು ತುಂಬ ಪ್ರೀತಿಸುವವರು. ಇಂಗ್ಲಂಡಿನಲ್ಲಿ ಕಂಪನಿಯ ಕೆಲಸಮಾಡುತ್ತಿರುವಾಗಲೆ ಅವರು ತಮ್ಮ ದೇಶದ ಹಿತಸಂಬಂಧ ಹಾಗು ಸಂಸ್ಕೃತಿಗಳ ಬಗೆಗೆ ಅಲ್ಲಲ್ಲಿ ವ್ಯಾಖ್ಯಾನಗಳನ್ನು ಕೊಡುತ್ತಿದ್ದರು. ಪತ್ರಿಕೆಗಳಲ್ಲಿ ಲೇಖನಗಳನ್ನೂ ಬರೆಯುತ್ತಿದ್ದರು. ಇವರು ಲಂಡನಿನಲ್ಲಿ 'ಲಂಡನ್ ಇಂಡಿಯನ್ ಅಸೋಶಿಯೇಶನ್' ಮತ್ತು 'ಈಸ್ಟ್ ಇಂಡಿಯನ್ ಸೊಸಾಯಿಟಿ' ಎಂಬ ಸಂಘಗಳನ್ನು ಸ್ಥಾಪಿಸಿದರು. ಅವುಗಳ ಮುಖಾಂತರ ಭಾರತದೇಶದ ಪರಿಸ್ಥಿತಿಯನ್ನು ಜನರಲ್ಲಿ ಹರಡಹತ್ತಿದರು. ಮುಂದೆ ಇವರು ಕಾಮಾಕಂಪನಿಯ ಕೆಲಸಬಿಟ್ಟು ಸ್ವತಂತ್ರವಾಗಿ ವ್ಯಾಪಾರ ಮಾಡಹತ್ತಿದರು. ಕೆಲವು ವರುಷ ಇಂಗ್ಲಂಡಿನಲ್ಲಿದ್ದು ಭಾರತಕ್ಕೆ ಮರಳಿ ಬಂದರು.

ಮರಳಿ ಬಂದಮೇಲೆ ದಾದಾಭಾಯಿಯವರು ಬಡೋದೆಯ ಮುಖ್ಯ

ಮಂತ್ರಿಗಳಾದರು. ಎರಡು ವರುಷಗಳ ವರೆಗೆ ಸತತ ಪ್ರಯತ್ನಮಾಡಿ, ಆ ಸಂಸ್ಥಾನವನ್ನು ಒಳ್ಳೆಯ ಊರ್ಜಿತಾವಸ್ಥೆಗೆ ತಂದರು. ಮುಂದೆ ಅದನ್ನು ಬಿಟ್ಟು ಮುಂಬಯಿಯಲ್ಲಿ ಬಂದು ನಿಂತರು. ಮುಂಬಯಿಯ ನಗರಸಭೆಯ ಸದಸ್ಯರಾದರು. ಅಷ್ಟರಲ್ಲಿ ಭಾರತೀಯರಲ್ಲಿ ಸ್ವಲ್ಪ ಜಾಗ್ರತಿಯಾಗಿತ್ತು. ತಮ್ಮ ಹಿತವನ್ನು ಹೇಗೆ ಸಾಧಿಸಿಕೊಳ್ಳಬೇಕೆಂದು ಕಲಿತ ಮುಂದಾಳುಗಳು ಕೆಲವರು ವಿಚಾರಮಾಡುತ್ತಿದ್ದರು. ಆ ವಿಚಾರದಲ್ಲಿ ನವರೋಜಿಯವರೂ ಭಾಗವಹಿಸಿದರು. ಅನೇಕ ಪ್ರಮುಖರು ಕೂಡಿ (ಕ್ರಿ. ಶ. ೧೮೮೫) ಭಾರತ ಕಾಂಗ್ರೆಸನ್ನು (ರಾಷ್ಟ್ರೀಯ ಸಭೆ) ಸ್ಥಾಪಿಸಿದರು. ಇವರಲ್ಲಿ ದಾದಾಭಾಯಿಯವರ ಕಾರ್ಯವು ಮುಖ್ಯವಾಗಿತ್ತು. ಕಾಂಗ್ರೆಸಿನ ವೃಕ್ಷಕ್ಕೆ ನೀರು ಹಾಕಿ ಜೋಕೆ ಮಾಡಿದ ಕೀರ್ತಿಯು ದಾದಾಭಾಯಿಯವರಿಗೆ ಸಲ್ಲುವುದು.

ಕೆಲವು ಕಾಲದ ತರುವಾಯ ದಾದಾಭಾಯಿಯವರು ಮತ್ತೆ ಇಂಗ್ಲಂಡಿಗೆ ಹೋದರು. ಪಾರ್ಲಿಮೆಂಟಿನ ಸದಸ್ಯರಾಗಿ ಭಾರತದ ಸ್ಥಿತಿಗಳ ಬಗೆಗೆ ಚರ್ಚೆ ಮಾಡುವುದು ಒಳಿತೆಂದು ಇವರಿಗೆನಿಸಿತು. ಆಗ ಪಾರ್ಲಿಮೆಂಟಿನ ಚುನಾವಣೆಗೆ ಹೋರಾಡಿದರು. ಚುನಾವಣೆಯಲ್ಲಿ ಇವರು ಆರಿಸಿಬಂದರು. ಇದರಿಂದ ಭಾರತೀಯರಿಗೆ ಬಹಳ ಸಂತೋಷವಾಯಿತು. ಭಾರತದ ಬಗೆಗೆ ಇಂಗ್ಲಿಷರು ಮಾಡುವ ಅನ್ಯಾಯಗಳನ್ನು, ಹೆದರದೆ ಬೆದರದೆ ಎತ್ತಿ ಪಾರ್ಲಿಮೆಂಟಿನಲ್ಲಿ ಇವರು ಹೇಳುತ್ತಿದ್ದರು. ಭಾರತೀಯರಿಗೆ ಬೇಕಾದ ಎಲ್ಲ ಅನುಕೂಲತೆಗಳನ್ನು ಇಂಗ್ಲಿಷ್ ಸರಕಾರದವರು ಮಾಡಿಕೊಡಬೇಕೆಂದು ಮೇಲಿಂದ ಮೇಲೆ ವಾದಿಸುತ್ತಿದ್ದರು. ಆಯ್. ಸಿ. ಎಸ್. ಪರೀಕ್ಷೆ ಭಾರತದಲ್ಲಿಯೂ ಜರುಗುವಂತೆ ಮಾಡಿದರು. ಬೇಕಾದಷ್ಟು ಒಳ್ಳೆಯ ಸ್ಥಿತಿಯಲ್ಲಿದ್ದರೂ ಭಾರತೀಯರು ಪರಕೀಯರ ಆಡಳಿತಕ್ಕೆ ಒಳಗಾಗದೆ, ಸ್ವತಂತ್ರವಾಗಿ ಇರಬೇಕೆಂದು ಇವರು ಹೇಳುತ್ತಿದ್ದರು.

ದಾದಾಭಾಯಿಯವರು ತಮ್ಮ ಆಯುಷ್ಯದ ಕೊನೆಗಾಲವನ್ನು, ಮುಂಬಯಿಯ ಬಳಿ ಸಮುದ್ರತೀರದ ವರ್ಸೋವಾದಲ್ಲಿ ಕಳೆದರು. ಇವರಿಗೆ ಎಲ್ಲ ತರದ ಸಂಪತ್ತು ಇತ್ತು. ಮಕ್ಕಳ-ಮರಿಗಳ ಕೊರತೆಯಿರಲಿಲ್ಲ. ಇವರ ಆಚರಣೆಯು ಬಹಳ ಒಳ್ಳೆಯದಿತ್ತು. ಹೊಗೆಸೊಪ್ಪನ್ನು ಕೂಡ ಇವರು ಸೇದುತ್ತಿರಲಿಲ್ಲ. ಆದುದರಿಂದ ಇವರ ಆರೋಗ್ಯವು ಬಹಳ ಚೆನ್ನಾಗಿತ್ತು. ಇವರು ೯೦ ವರುಷಗಳ ಕಾಲ ಬದುಕಿದರು. ಜನರು ಮೂರು ಸಲ ಇವರನ್ನು ಕಾಂಗ್ರೆಸಿಗೆ ಅಧ್ಯಕ್ಷರನ್ನಾಗಿ ಆರಿಸಿದರು. ಇದರಿಂದ ಇವರು ಎಷ್ಟು ಜನಪ್ರಿಯರಾಗಿದ್ದರೆಂಬುದು ಕಂಡುಬರುತ್ತದೆ. ಜನಪ್ರಿಯರಾಗಿದ್ದಂತೆ ಇವರು ರಾಜಕಾರಣದಲ್ಲಿ ಪಂಡಿತರೂ ಆಗಿದ್ದರು. ಮಹಾತ್ಮಾಗಾಂಧಿಯವರು

ಇವರನ್ನು ತಮ್ಮ ಗುರುಗಳೆಂದು ಮನ್ನಿಸುತ್ತಿದ್ದರು. ಹೀಗೆ ಜನರಿಂದ ಮರ‍್ಯಾದೆ ಹೊಂದಿ ಕ್ರಿ. ಶ. ೧೯೧೭ರಲ್ಲಿ ಇವರು ಮರಣಹೊಂದಿದರು.

## ಅಭ್ಯಾಸನಗಳು

೧. ಕೆಳಗೆ ಕೆಲವು ವಾಕ್ಯಗಳನ್ನೂ ಅವುಗಳ ಮುಂದೆ ಕಂಸಿನಲ್ಲಿ ಮೂರು ಮೂರು ಪದಗಳನ್ನೂ ಕೊಟ್ಟಿದೆ. ಅವುಗಳಲ್ಲಿ ಆಯಾ ವಾಕ್ಯಗಳಿಗೆ ಸಂಬಂಧಿಸಿದ ಪದಗಳನ್ನು ಬಿಟ್ಟು ಉಳಿದವುಗಳನ್ನು ಹೊಡೆದುಹಾಕಿರಿ.

(ಅ) ದಾದಾಭಾಯಿಯವರ ಅಭ್ಯಾಸವು ಪ್ರಾರಂಭವಾದ ಊರು
(ಮುಂಬಯಿ, ಕಲಕತ್ತೆ, ಲಂಡನ್)

(ಬ) ಶಾಲೆಯಲ್ಲಿ ಇವರಿಗೆ ಪ್ರೀತಿಯ ವಿಷಯವು
(ಭೂಗೋಲ, ಗಣಿತ, ಭಾಷೆ)

(ಕ) ಇವರು ಮುಖ್ಯ ಮಂತ್ರಿಯಾದ ಸಂಸ್ಥಾನವು
(ಕೊಲ್ಹಾಪುರ, ಬಡೋದೆ, ಹೈದರಾಬಾದ)

(ಡ) ಇವರು ತಮ್ಮ ಆಯುಷ್ಯದ ಕೊನೆಯ ಭಾಗವನ್ನು ಕಳೆದ ಊರು
(ಮುಂಬಯಿ, ಕಲಕತ್ತೆ, ವರ್ಸೋವಾ)

(ಇ) ಇವರು ಭಾರತದಲ್ಲಿ ಬೆಳೆಸಿದ ಸಂಸ್ಥೆಯು
(ಸಮಾಜವಾದಿಪಕ್ಷ, ಕಾಂಗ್ರೆಸ್ಸು, ಕಮ್ಯುನಿಸ್ಟ)

೨. ದಾದಾಭಾಯಿಯವರು ವಿದ್ಯಾಭ್ಯಾಸ ಮುಗಿಸಿದ ಬಳಿಕ ಯಾವ ಕೆಲಸ ಕೈಕೊಂಡರು?

೩. ಇವರು ಇಂಗ್ಲಂಡಿಗೆ ಎಲ್ಲಕ್ಕೂ ಮೊದಲು ಏಕೆ ಹೋದರು?

# ೪೫. ಲೋಕಮಾನ್ಯ ಟಿಳಕ

ಬ್ರಿಟಿಷರ ಒತ್ತಾಯದ ಆಳಿಕೆಯ ಕಾಲ. ಆಗ "ಸ್ವರಾಜ್ಯ" "ಸ್ವಾತಂತ್ರ್ಯ" ಎಂಬ ಮಾತುಗಳನ್ನು ಆಡುವುದೂ ಕಠಿಣವಿಷಯವಾಗಿತ್ತು. ಅಂತಹ ಕಾಲದಲ್ಲಿ ಧೈರ್ಯದಿಂದ ಮುಂದೆ ಬಂದು "ಸ್ವರಾಜ್ಯವು ನನ್ನ ಜನ್ಮಸಿದ್ಧ ಅಧಿಕಾರ. ಅದನ್ನು ನಾನು ದೊರಕಿಸುವವನೇ" ಎಂದು ಖಂಡಿತವಾಗಿ [illegible] ಲೋಕಮಾನ್ಯ ಟಿಳಕರು. ಭಾರತದ ಸ್ವಾತಂತ್ರ್ಯಕ್ಕಾಗಿ ಸೆರೆಮನೆಯನ್ನು ಸೇರಿದ ಮೊದಲನೆಯ ದೇಶಸೇವಕರು ಇವರೇ!



ಲೋಕಮಾನ್ಯ ಟಿಳಕ

ಕೊಂಕಣ ಪ್ರಾಂತದ ರತ್ನಾಗಿರಿ ಎಂಬ ನಗರದಲ್ಲಿ, ಒಬ್ಬ ಪ್ರಾಥಮಿಕ ಶಾಲೆಯ ಶಿಕ್ಷಕರು ಇದ್ದರು. ಗಂಗಾಧರಪಂತರು ಎಂದು ಅವರ ಹೆಸರು. ಮುಂದೆ ಅವರು ಶಾಲೆಗಳನ್ನು ನಿರೀಕ್ಷಿಸುವ ಅಧಿಕಾರಿಗಳೂ ಆಗಿದ್ದರು. ಅವರಿಗೆ ೧೮೫೬ರಲ್ಲಿ ಒಬ್ಬ ಗಂಡುಮಗನು ಹುಟ್ಟಿದನು. ತಂದೆ-ತಾಯಿಗಳು ಪ್ರೀತಿಯಿಂದ "ಬಾಳ" ಎಂದು ಮಗನನ್ನು ಕರೆಯತೊಡಗಿದರು. ಈತ ಹದಿನಾರು ವರುಷದವನಾಗುವುದರಲ್ಲಿಯೆ ತಂದೆ ಗಂಗಾಧರಪಂತರು ತೀರಿ-

ಹೋದರು. ಆದರೂ ಬುದ್ಧಿಶಾಲಿಯಾದ ಬಾಳನು ಧೈರ್ಯಗುಂದದೆ, ತನ್ನ ಶಾಲೆಯ ಅಭ್ಯಾಸವನ್ನು ಸಾಗಿಸಿದನು.

ಬೇಗನೆ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಡೆಕ್ಕನ್ ಕಾಲೇಜಿಗೆ ಹೆಸರು ಹಚ್ಚಿದನು. ಮುಂದೆ ನಾಲ್ಕು ವರುಷಗಳಲ್ಲಿಯೆ ಬಿ. ಎ. ಪರೀಕ್ಷೆಯನ್ನು ಪಾಸಾದನು. ಆ ಮೇಲೆ ಮೂರು ವರುಷಗಳಲ್ಲಿಯೆ ಎಲ್‌ಎಲ್. ಬಿ. ಪರೀಕ್ಷೆಯಲ್ಲಿಯೂ ಉತ್ತೀರ್ಣನಾದನು. ಆಗಲೆ ಎಮ್. ಎ. ಪರೀಕ್ಷೆಗಾಗಿಯೂ ಅವನು ಪ್ರಯತ್ನಮಾಡಿದ; ಆದರೆ ಅದರಲ್ಲಿ ಬಾಳನಿಗೆ ಗೆಲುವು ಸಿಗಲಿಲ್ಲ. ಬೆಳೆದು ದೊಡ್ಡವನಾದ ಮೇಲೆ "ಬಾಳಗಂಗಾಧರ ಟಿಳಕ" ಎಂಬ ಹೆಸರಿನಿಂದ ಅವನು ಜನರಿಗೆ ಪರಿಚಿತನಾದ.

ಬಾಳ ಟಿಳಕರು ವಿದ್ಯಾರ್ಥಿಗಳಿದ್ದಾಗ ಎಲ್ಲರೂ ಅವರನ್ನು ಪ್ರೀತಿಸುತ್ತಿದ್ದರು. ವರ್ಗದ ಗೆಳೆಯರಂತೂ ಅವರ ಬಗೆಗೆ ಬಹಳ ಅಭಿಮಾನ ತಾಳುತ್ತಿದ್ದರು. ಪ್ರತಿದಿನವೂ ವ್ಯಾಯಾಮಮಾಡುವುದೆಂದರೆ ಟಿಳಕರಿಗೆ ಬಲು ಹಿಗ್ಗು. ಕುಸ್ತಿ ಹಿಡಿಯುವುದು, ಈಸುವುದು ಅವರಿಗೆ ಬಹಳ ಸೇರುತ್ತಿತ್ತು. ತಮ್ಮ ಗೆಳೆಯರನ್ನು ಕೂಡಿಕೊಂಡು ಅವರು ವ್ಯಾಯಾಮ ಮಾಡಲು ಆಟದ ಬಯಲಿಗೆ ಹೋಗುತ್ತಿದ್ದರು. ಟಿಳಕರು ಸುಮ್ಮಸುಮ್ಮನೆ ಎಂದೂ ವೇಳೆಗಳೆಯುತ್ತಿದ್ದಿಲ್ಲ. ಸೋಮಾರಿ ಹುಡುಗರನ್ನು ಕಂಡರೆ ಅವರಿಗೆ ಬಲು ಸಿಟ್ಟು. ತಾವು ದುಂದುಗಾರಿಕೆಯನ್ನು ಎಂದೂ ಮಾಡುತ್ತಿದ್ದಿಲ್ಲ. ಹಾಗೆ ಮಾಡುವವರನ್ನು ಅವಮಾನಗೊಳಿಸುತ್ತಿದ್ದರು. ಅವರಲ್ಲಿ ಚಿಕ್ಕಂದಿನಿಂದಲೂ ನ್ಯಾಯ, ಪ್ರೀತಿ, ಸಾಹಸ, ನೀತಿವಂತಿಕೆ ಮತ್ತು ದೇಶಾಭಿಮಾನ ಇವೆಲ್ಲ ಎದ್ದುಕಾಣುತ್ತಿದ್ದುವು. ಬಾಳ ಟಿಳಕರು ದೃಢನಿಶ್ಚಯದವರು. ಕೈಕೊಂಡ ಕೆಲಸವನ್ನು ಕೊನೆಗಾಣಿಸದೆ ಎಂದೂ ಬಿಡುವವರಲ್ಲ. ಅವರು ವಿದ್ಯಾರ್ಥಿಗಳಿದ್ದಾಗಲೇ ಈ ಗುಣವು ಪ್ರಕಟವಾಯಿತು. ಅವರ ಒಳ್ಳೆಯ ಗುಣಗಳಿಗೆ ಮೆಚ್ಚಿ ಎಷ್ಟೋ ಜನರು ಅವರ ಗೆಳೆತನವನ್ನು ಮಾಡಿದರು. ಅಂಥವರಲ್ಲಿ ಆಗರಕರ ಎಂಬವರೂ ಒಬ್ಬರು. ಇವರಿಬ್ಬರೂ ಸರಕಾರೀ ನೌಕರಿಯನ್ನು ಮಾಡದೆ ದೇಶಸೇವೆಗಾಗಿ ನಡುಕಟ್ಟಿ ನಿಂತರು.

ಬಾಳಗಂಗಾಧರ ಟಿಳಕ ಮತ್ತು ಆಗರಕರರು ಕೂಡ ಪುಣೆಯಲ್ಲಿ "ನ್ಯೂ ಇಂಗ್ಲಿಷ್ ಸ್ಕೂಲ್" ಎಂಬ ಸಾಲೆಯನ್ನು ಪ್ರಾರಂಭಿಸಿದರು. ಅದು ನಾಲ್ಕಾರು ವರ್ಷಗಳಲ್ಲಿ ಬೆಳೆದು ದೊಡ್ಡದಾಯಿತು. ಸಾವಿರಕ್ಕಿಂತಲೂ ಹೆಚ್ಚು ವಿದ್ಯಾರ್ಥಿಗಳು ಕೂಡಿದರು. ಮುಂದೇ ಅದೇ ಸಂಸ್ಥೆ ಬೆಳೆದು "ಡೆಕ್ಕನ್ ಎಜ್ಯುಕೇಶನ್ ಸೊಸಾಯಿಟಿ" ಎಂಬ ಹೆಸರಿನ ಶಿಕ್ಷಣಸಂಸ್ಥೆಯಾಯಿತು. ಅದರ ಮುಖಾಂತರ ಫರ್ಗ್ಯುಸನ್ ಕಾಲೇಜು ಪ್ರಾರಂಭವಾಯಿತು. ಅಲ್ಲಿ ಟಿಳಕರು ಗಣಿತ ಹಾಗು

ಸಂಸ್ಕೃತಗಳನ್ನು ಕಲಿಸುವ ಪ್ರಾಧ್ಯಾಪಕರಾದರು. ಟಿಳಕರಿಗೆ ಇಷ್ಟರಿಂದಲೆ ಸಮಾಧಾನವಾಗಲಿಲ್ಲ. ದೇಶದ ತರುಣರಲ್ಲಿ ಹಾಗು ಎಲ್ಲ ಜನರಲ್ಲಿ ಜಾಗ್ರತಿ ಯನ್ನು ಉಂಟುಮಾಡಲು "ಕೇಸರಿ" ಹಾಗು "ಮರಾಠಾ" ಎಂಬ ಎರಡು ವರ್ತಮಾನಪತ್ರಗಳನ್ನು ಪ್ರಾರಂಭಮಾಡಿದರು. ಅವರ ವಿದ್ಯಾಮಂದಿರಗಳೂ ವೃತ್ತಪತ್ರಿಕೆಗಳೂ ಸ್ವಲ್ಪ ಕಾಲದಲ್ಲಿಯೇ ಜನರ ಮನಸ್ಸನ್ನು ಎಳೆದುವು. ಅವುಗಳ ಕೀರ್ತಿ ಮಹಾರಾಷ್ಟ್ರ ಹಾಗು ನೆರೆಯ ಪ್ರಾಂತಗಳಲ್ಲಿ ಹರಡಿಕೊಂಡಿತು. ಮುಂದೆ ಕೆಲವು ದಿವಸಗಳಲ್ಲಿಯೆ ಟಿಳಕರು ಶಿಕ್ಷಕವೃತ್ತಿಯನ್ನು ಬಿಟ್ಟು ಕೇವಲ ರಾಜಕೀಯ ಕಾರ್ಯಕ್ಕೆ ನಿಂತುಬಿಟ್ಟರು.

ಟಿಳಕರು ರಾಜಕೀಯ ಜಾಗ್ರತಿಯ ತಮ್ಮ ಕಾರ್ಯವನ್ನು ಧರ್ಮದ ತಳ-ಹದಿಯ ಮೇಲೆಯೆ ಪ್ರಾರಂಭಿಸಿದರು. ಗಣೇಶಚತುರ್ಥಿ, ಶಿವಜಯಂತಿ, ವಸಂತೋತ್ಸವ ಮುಂತಾದವುಗಳಿಗೆ ರಾಷ್ಟ್ರೀಯ ಸ್ವರೂಪವನ್ನು ಕೊಟ್ಟರು. ತರುಣರಲ್ಲಿ ಉತ್ಸಾಹತುಂಬಲು "ಶಿವಾಜಿಯ ಸಂದೇಶ" ಎಂಬ ಕಾವ್ಯ ಬರೆದರು. ಟಿಳಕರ ಈ ಬಗೆಯ ಕಾರ್ಯ ಸರಕಾರದವರಿಗೆ ಸಹನವಾಗಲಿಲ್ಲ. ಏನೇನೋ ಆರೋಪಹೊರಿಸಿ, ಇವರಿಗೆ ೧೮ ತಿಂಗಳು ಶಿಕ್ಷೆಯನ್ನು ವಿಧಿಸಿದರು. ಇದರಿಂದ ಟಿಳಕರ ಕೀರ್ತಿ ನಾಡಿನ ತುಂಬೆಲ್ಲ ಹಬ್ಬಿತು. ಜನರು ಇವರನ್ನು ಬಹಳ ಪ್ರೀತಿಸಹತ್ತಿದರು.

ಟಿಳಕರು ಮುಂದೆ ಕಾಂಗ್ರೆಸಿನಲ್ಲಿ ಸೇರಿದರು. ತಮ್ಮ ಕೇಸರೀ ಪತ್ರಿಕೆಯಲ್ಲಿ ಲೇಖನಗಳನ್ನು ಬರೆದು ಜನರನ್ನು ಹುರಿದುಂಬಿಸಹತ್ತಿದರು. ಲಾರ್ಡ ಕರ್ಝನ್ ದೊರೆಯು ಬಂಗಾಲವನ್ನು ಒಡೆದು ಎರಡು ಪ್ರಾಂತಗಳನ್ನು ಮಾಡಿದನು. ಆಗ ಟಿಳಕರು ಸಿಂಹದಂತೆ ಗರ್ಜನೆಮಾಡಿ ಸರಕಾರವನ್ನು ವಿರೋಧಿ-ಸಿದರು. ಅವರು ರಾಷ್ಟ್ರಭಕ್ತಿಯ ಪರಿಣಾಮವಾಗಿ ಆಗಿನ ಸರಕಾರ ಅವರಿಗೆ ಆರು ವರುಷಗಳ ಸೆರೆಮನೆಯ ಶಿಕ್ಷೆಯನ್ನು ವಿಧಿಸಿತು. ಆಗ ಟಿಳಕರು ಬ್ರಹ್ಮ-ದೇಶದಲ್ಲಿರುವ ಮಂಡಾಲೆಯ ಸೆರೆಮನೆಯಲ್ಲಿ ಇರಬೇಕಾಯಿತು. ಅಲ್ಲಿ ಇರುವಾಗಲೆ ಅವರು "ಗೀತಾರಹಸ್ಯ" ಎಂಬ ಪುಸ್ತಕವನ್ನು ಬರೆದರು.

ಜೇಲಿನಿಂದ ಹೊರಗೆ ಬಂದಮೇಲೆ, ಟಿಳಕ ಹಾಗು ಗಾಂಧಿಯವರ ಭೆಟ್ಟಿಯಾಯಿತು. ರಾಜಕಾರಣದ ಬಗೆಗೆ ಇಬ್ಬರೂ ಚರ್ಚೆಮಾಡಿದರು. ಭಾರತದ ಆಗಿನ ರಾಜಕಾರಣದಲ್ಲಿ ಗಾಂಧೀಜಿಯವರು ಇನ್ನೂ ಹೊಸಬರಾಗಿದ್ದರು. ಟಿಳಕರು ಬ್ರಿಟಿಶರ ರಾಜತಂತ್ರಗಳನ್ನೆಲ್ಲ ಬಲ್ಲವರಾಗಿದ್ದರು. ಅಲ್ಲದೆ ಅವರು ಕಾಂಗ್ರೆಸ್ಸಿನ ಉಗ್ರಪಕ್ಷದ ಮುಂದಾಳುಗಳು. ಕೇಳುವುದೇನು! ಸ್ವಾತಂತ್ರ್ಯವನ್ನು ದೊರಕಿಸಿಯೇ ತೀರಬೇಕೆಂದು ಅವರು ಹಟತೊಟ್ಟರು. ಅದಕ್ಕಾಗಿ "ಹೋಮರೂಲ್‌ಲೀಗ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು.

ದೇಶದಲ್ಲಿ ಚಳವಳಿಯನ್ನು ಪ್ರಾರಂಭಿಸಿದರು. ಇದು ಭಾರತದ ತುಂಬೆಲ್ಲ ಹಬ್ಬಿತು. ೧ನೆಯ ಮಹಾಯುದ್ಧದಲ್ಲಿ ತೊಡಗಿದ ಇಂಗ್ಲಿಷರು ಮೊದಮೊದಲು ಇದನ್ನು ಲಕ್ಷ್ಯಕ್ಕೆ ತರಲಿಲ್ಲ. ಮುಂದೆ ಭಾರತದ ಶಿಷ್ಟಮಂಡಳದ ಸಂಗಡ ಟಿಳಕರು ಇಂಗ್ಲಂಡಿಗೆ ಹೋಗಿಬಂದರು. ಅಲ್ಲಿಯ ಜನರಿಗೆ ಭಾರತದ ಪರಿಸ್ಥಿತಿಯನ್ನು ಮನಸ್ಸು ಕರಗುವಂತೆ ವಿವರಿಸಿ ಹೇಳಿದರು. ತರುವಾಯ ಕ್ರಿ. ಶ. ೧೯೨೦ನೆಯ ಅಗಸ್ಟ್ ೧ನೆಯ ತಾರೀಖಿನ ದಿನ ಅವರು ಕಾಲವಾದರು.

ಟಿಳಕರು ದೊಡ್ಡ ವಿದ್ವಾಂಸರು. ಅವರಿಗೆ ಗಣಿತ, ಜ್ಯೋತಿಷ, ವೇದಾಂತ ಇವುಗಳಲ್ಲಿ ಅಪಾರಪಾಂಡಿತ್ಯವಿತ್ತು. ದೇಶದ ಬಗೆಗೆ ಅತ್ಯಂತ ಪ್ರೇಮವಿತ್ತು. ಅವರ ದೇಶಭಕ್ತಿಯನ್ನು ಕಂಡು ಎಲ್ಲರೂ ಅವರಿಗೆ ಗೌರವಾದರಗಳನ್ನು ತೋರಿಸುತ್ತಿದ್ದರು. "ಜನಸೇವೆಯೇ ಜನಾರ್ದನನ ಸೇವೆ" ಎಂದು ತಿಳಿದು ಅವರು ಬದುಕಿರುವವರೆಗೂ ಆ ಕಾರ್ಯವನ್ನೇ ಮಾಡಿದರು. ಏನೂ ಗೊತ್ತಿಲ್ಲದ ಜನತೆಯನ್ನು ಎಚ್ಚರಿಸಿ ಅವರು ದೇಶಸೇವೆಗೆ ತೊಡಗಿಸಿದರು. ಜನರು ಅವರನ್ನು "ಲೋಕಮಾನ್ಯ" ಎಂದು ಕರೆಯಹತ್ತಿದರು.

ದಿಲ್ಲಿಯ ಕಾಂಗ್ರೆಸ್ಸಿನ ಅಧ್ಯಕ್ಷರನ್ನಾಗಿ ಮಾಡಿ ಭಾರತೀಯರು ಟಿಳಕರಿಗೆ ತಮ್ಮ ಗೌರವ ಸಲ್ಲಿಸಿದರು. ಲೋಕಮಾನ್ಯ ಟಿಳಕರು ಜನರಲ್ಲಿ ಸ್ವಾತಂತ್ರ್ಯದ ಬೀಜವನ್ನು ಬಿತ್ತಿದರು. ಅಂದು ಅವರು ನಟ್ಟ ಬೀಜವು ಇಂದು ಮರವಾಗಿ, ಹೂವಾಗಿ, ಕಾಯಾಗಿ, ಹಣ್ಣಾಗಿದೆ. ಆ ಸ್ವಾತಂತ್ರ್ಯದ ಹಣ್ಣಿನ ಸವಿಯನ್ನು ಟಿಳಕರು ಸವಿಯಲಿಲ್ಲ. ಅದರ ಸವಿಯನ್ನು ಉಣ್ಣುವ ಜನರು ಆ ಗಿಡವನ್ನು ನೆಟ್ಟ ಪುಣ್ಯಾತ್ಮನನ್ನು ಹಾಡಿ ಹರಸದೆ ಇದ್ದರೆ ಕರ್ತವ್ಯಗೇಡಿಗಳಾಗುವರು.

## ಅಭ್ಯಸನಗಳು

೧. ಕೆಳಗೆ ಕೆಲವು ಮಾತುಗಳನ್ನೂ ಅವುಗಳ ಮುಂದೆ ಕಂಸದಲ್ಲಿ ಅವುಗಳಿಗೆ ಸಂಬಂಧಿಸಿದ ಮೂರು ಮೂರು ಸಂಗತಿಗಳನ್ನೂ ಕೊಟ್ಟಿದೆ. ಅವುಗಳಲ್ಲಿ ಸರಿಯಾದುದನ್ನು ಇಟ್ಟುಕೊಂಡು ಉಳಿದೆರಡನ್ನು ಹೊಡೆದುಹಾಕಿರಿ.

(ಅ) ಲೋಕಮಾನ್ಯರು ಹುಟ್ಟಿದ ಊರು (ಪುಣೆ, ಮಂಡಾಲೆ, ರತ್ನಾಗಿರಿ)

(ಬ) ಟಿಳಕರ ಪ್ರೀತಿಯ ಗೆಳೆಯರು (ಕರ್ಝನ್, ಗಂಗಾಧರಪಂತ, ಆಗರಕರ)

(ಕ) ಟಿಳಕರು ಸೆರೆಮನೆಯಲ್ಲಿ ಬರೆದ ಪುಸ್ತಕ (ಕೇಸರಿ, ಗೀತಾಂಜಲಿ, ಗೀತಾರಹಸ್ಯ)

(ಡ) ಟಿಳಕರಿಗೆ ೧೮ ತಿಂಗಳ ಶಿಕ್ಷೆಯಾಯಿತು. (ರಾಷ್ಟ್ರಗೀತೆ ಅಂದದ್ದಕ್ಕಾಗಿ, ಕೇಸರಿಯಲ್ಲಿ ಲೇಖನ ಬರೆದದ್ದಕ್ಕಾಗಿ, ಶಿವಾಜಿ ಸಂದೇಶಕಾವ್ಯಕ್ಕಾಗಿ)

(ಇ) ಲೋಕಮಾನ್ಯರು ಮಾಡಿದ ಘೋಷಣೆ (ಜನಸೇವೆಯೇ ಜನಾರ್ದನನ ಸೇವೆಯು, ಸ್ವಾತಂತ್ರ್ಯವು ಜನ್ಮಸಿದ್ಧ ಹಕ್ಕು, ಹೋಮರೂಲಲೀಗ)

೨. ಚಿಕ್ಕವರಿದ್ದಾಗ ಲೋಕಮಾನ್ಯರಿಗೆ ಯಾವ ಯಾವ ವಿಷಯಗಳಲ್ಲಿ ಪ್ರೀತಿ ಇತ್ತು?

೩. ಲೋಕಮಾನ್ಯ ಟಿಳಕರು ಸ್ಥಾಪಿಸಿದ ಶಿಕ್ಷಣಸಂಸ್ಥೆ ಯಾವುದು?

೪. ಇವರು ಹೊರಡಿಸಿದ ವೃತ್ತಪತ್ರಿಕೆಗಳಾವುವು?

೫. ಇವರಿಗೆ ಆರುವರ್ಷ ಶಿಕ್ಷೆ ಏಕೆ ಆಯಿತು?

೬. ಜನರು ಟಿಳಕರನ್ನು ಲೋಕಮಾನ್ಯರೆಂದು ಏಕೆ ಕರೆಯುತ್ತಿದ್ದರು?

---

# ೪೬. ದೇಶಬಂಧು ದಾಸ

ದೇಶಬಂಧು ಚಿತ್ತರಂಜನ ದಾಸರು ಬಂಗಾಲ ಪ್ರಾಂತದವರು. ಇವರ ತಂದೆಯವರಾದ ಭುವನ ಮೋಹನದಾಸರು ಕಲಕತ್ತೆಯಲ್ಲಿ ಇರುತ್ತಿದ್ದರು. ಅವರು ಸಿರಿವಂತರೂ ಉದಾರರೂ ಆಗಿದ್ದರು. ಅವರ ಮನೆಯಲ್ಲಿ ಅನೇಕ ಬಡ ವಿದ್ಯಾರ್ಥಿಗಳಿಗೆ ಆಶ್ರಯ ದೊರೆಯುತ್ತಿತ್ತು. ಹೊಟ್ಟೆಗಿಲ್ಲದ ಬಡವರು ಬಂದು ನಿತ್ಯವೂ ಅವರಲ್ಲಿ ಊಟ ಮಾಡುತ್ತಿದ್ದರು. ಇಂತಹ ಮನೆತನದಲ್ಲಿ ಚಿತ್ತರಂಜನ ದಾಸರು ಕ್ರಿ. ಶ. ೧೮೭೦ರಲ್ಲಿ ಜನ್ಮತಾಳಿದರು.



ಚಿತ್ತರಂಜನ ದಾಸ

ಚಿತ್ತರಂಜನದಾಸರ ಶಿಕ್ಷಣವೆಲ್ಲ ಕಲಕತ್ತೆಯಲ್ಲಿಯೇ ನಡೆಯಿತು. ಬುದ್ಧಿಶಾಲಿಯಾದ ವಿದ್ಯಾರ್ಥಿ ಅವರು. ಬಿ. ಎ. ಪರೀಕ್ಷೆಯಲ್ಲಿ ಆಡಾಡುತ್ತಲೇ ಪಾಸಾದರು. ತಂದೆಯವರು ಚಿತ್ತರಂಜನರನ್ನು, ಆಯ್. ಸಿ. ಎಸ್. ಪರೀಕ್ಷೆಯ ಸಲುವಾಗಿ ಇಂಗ್ಲಂಡಿಗೆ ಕಳುಹಿದರು. ಅವರು ಇಂಗ್ಲಂಡಿನಲ್ಲಿ ತಮ್ಮ ಅಭ್ಯಾಸದ ಕಡೆಗೆ ಹೆಚ್ಚು ಲಕ್ಷ್ಯ ಕೊಡಲಿಲ್ಲ. ಸ್ವದೇಶಾಭಿಮಾನದಿಂದ, ಪಾರ್ಲಿಮೆಂಟಿಗೆ ಹುರಿಯಾಳಾಗಿ ನಿಂತ ದಾದಾಭಾಯಿ ನವರೋಜಿಯವರನ್ನು ಆರಿಸಿ ತರಲು ಪ್ರಚಾರಮಾಡಹತ್ತಿದರು. ಇಂಗ್ಲಂಡಿನಲ್ಲಿಯ ತರುಣ ಭಾರತೀಯರನ್ನೆಲ್ಲ ಒಟ್ಟುಗೂಡಿಸಿದರು. ಅಲ್ಲಲ್ಲಿ ವ್ಯಾಖ್ಯಾನಮಾಡಿದರು. ವರ್ತಮಾನ ಪತ್ರಿಕೆಗಳಲ್ಲಿ ಭಾರತದ ಜನತೆ ಹಾಗು ಇಂಗ್ಲಿಷರ ಅನ್ಯಾಯದ ಆಳಿಕೆಗಳ ಬಗೆಗೆ ಲೇಖನಗಳನ್ನು ಬರೆದರು. ದಾಸರ ದೇಶಪ್ರೇಮವನ್ನು ಕಂಡು

ಬ್ರಿಟಿಶರು ಬೆರಗುಗೊಂಡರು. ಅವರ ಈ ಸ್ವದೇಶಪ್ರೀತಿಯು ಐ. ಸಿ. ಎಸ್. ಪರೀಕ್ಷೆಯಲ್ಲಿ ಪಾಸಾಗದಂತೆ ಅವರಿಗೆ ತೊಂದರೆಯನ್ನು ಕೊಟ್ಟಿತು.

ಐ. ಸಿ. ಎಸ್. ಪರೀಕ್ಷೆ ಪಾಸಾಗದಿದ್ದರೂ ಚಿತ್ತರಂಜನರು ನಿರುತ್ಸಾಹಿಗಳಾಗಲಿಲ್ಲ. ಬ್ಯಾರಿಸ್ಟರ್ ಪ್ರಶಸ್ತಿಯನ್ನು ಪಡೆದುಕೊಂಡು ಭಾರತಕ್ಕೆ ಮರಳಿಬಂದರು. ಕಲಕತ್ತೆಯಲ್ಲಿ ಅವರು ವಕೀಲಿಯನ್ನು ಪ್ರಾರಂಭಿಸಿದರು. ಮೊದಮೊದಲು ಕೆಲವು ದಿವಸಗಳ ವರೆಗೆ ಅವರ ವಕೀಲಿ ಸರಿಯಾಗಿ ನಡೆಯಲಿಲ್ಲ. ಆಗ ದಾಸರ ಮನೆತನದ ಪರಿಸ್ಥಿತಿಯೂ ಕೆಟ್ಟುಹೋಗಿತ್ತು. ಅವರ ತಂದೆಯವರು ತಮ್ಮ ಉದಾರತನದ ಮೂಲಕ ತುಂಬ ಸಾಲಮಾಡಿದ್ದರು. ಸಾಲಕೊಟ್ಟವರು ಕೋರ್ಟಿನಲ್ಲಿ ದಾವೆ ಹೂಡಿದ್ದರು. ಆದರೂ ಚಿತ್ತರಂಜನರು ಹೆದರಲಿಲ್ಲ; ತಾವೇ ದುಡಿದು ಗಳಿಸಿ, ತಂದೆಯವರು ಮಾಡಿದ ಸಾಲವನ್ನೆಲ್ಲ ಕೋರ್ಟಿನ ಮುಖಾಂತರವಾಗಿಯೆ ತೀರಿಸಿದರು. ಇದನ್ನು ನೋಡಿ ನ್ಯಾಯಾಧೀಶರು, ಚಿತ್ತರಂಜನರ ಪ್ರಾಮಾಣಿಕತನವನ್ನು ಹೊಗಳಿದರು. ಜನರೆಲ್ಲ ಅವರ ಪಿತೃಭಕ್ತಿಯನ್ನು ಕೊಂಡಾಡಿದರು. ಇದರಿಂದ ಅವರ ಹೆಸರು ನಾಡಿನ ತುಂಬ ಹಬ್ಬಿತು.

ವಂಗಭಂಗ ಚಳವಳಿಯಲ್ಲಿ ದಾಸರು ತುಂಬ ಪ್ರಸಿದ್ಧಿಯನ್ನು ಪಡೆದರು. ಅವರು 'ವಂದೇ ಮಾತರಂ' ಎಂಬ ಇಂಗ್ಲಿಷ್ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಅದು ಬಂಗಾಲದಲ್ಲಿ ಒಂದು ಕ್ರಾಂತಿಯನ್ನೇ ಎಬ್ಬಿಸಿತು. ಸರಕಾರದವರು ಚಿತ್ತರಂಜನರ ಮೇಲೂ ಇನ್ನಿತರ ಮುಖಂಡರ ಮೇಲೂ ಖಟ್ಲೆಗಳನ್ನು ಹಾಕಿದರು. ಆಗ ಮಿಕ್ಕ ವಕೀಲರೆಲ್ಲರೂ ಹೆದರಿ ಹಿಂಜರಿದರು; ಆದರೆ ವೀರರಾದ ಚಿತ್ತರಂಜನ ದಾಸರು ಈ ಖಟ್ಲೆಗಳನ್ನು ನಡೆಸಲು ಟೊಂಕಕಟ್ಟಿದರು. ಇದರಲ್ಲಿ ಅವರು ತೋರಿಸಿದ ಪಾಂಡಿತ್ಯವು ಎಲ್ಲರನ್ನೂ ಆಶ್ಚರ್ಯಗೊಳಿಸಿತು. ಅವರ ಧೈರ್ಯ, ಬುದ್ಧಿಮತ್ತೆ, ಕಾಯ್ದೆಗಳ ಜ್ಞಾನಗಳನ್ನು ಕಂಡು ನ್ಯಾಯಾಧೀಶರೂ ಇತರ ವಕೀಲರೂ ಬೆರಳುಕಚ್ಚಿದರು. ಇದರಿಂದ ಚಿತ್ತರಂಜನರ ಕೀರ್ತಿ, ಬಂಗಾಲದಲ್ಲಿ ಅಷ್ಟೇ ಅಲ್ಲದೆ ಭಾರತದ ತುಂಬ ಹಬ್ಬಿತು. ದೊಡ್ಡ ದೊಡ್ಡ ಜಮೀನುದಾರರು, ದೇಸಾಯಿಯವರು, ಶ್ರೀಮಂತರು ತಮ್ಮ ಖಟ್ಲೆಗಳನ್ನು ನಡೆಸಬೇಕೆಂದು ಕೇಳಲು ಅವರ ಮನೆಗೆ ಬರಹತ್ತಿದರು. ದಾಸರ ತಿಂಗಳ ಉತ್ಪನ್ನವು ೫೦ ಸಾವಿರಕ್ಕಿಂತ ಹೆಚ್ಚಾಯಿತು. ಎಲ್ಲರ ಬಾಯಲ್ಲಿಯೂ ಆಗ ದಾಸರ ಹೆಸರೇ ಹೆಸರು!

ಮೊದಲನೆಯ ಮಹಾಯುದ್ಧ ನಡೆಯಿತಲ್ಲವೆ? ಆಗ ಸರಕಾರದವರು ಬಂಗಾಲದಲ್ಲಿ ಎಷ್ಟೋ ಜನರನ್ನು ಹಿಡಿದು ತುರಂಗಕ್ಕೆ ಹಾಕಿದರು. ಕೆಲವರನ್ನು ಹದ್ದುಪಾರ ಮಾಡಿದರು. ಹೀಗೆ ಮಾಡುವುದರಿಂದ ನೂರಾರು ಕುಟುಂಬ

ಗಳು ಗತಿಗೇಡಿಗಳಾದುವು. ಆ ಕುಟುಂಬಗಳ ಜನರ ಯೋಗ-ಕ್ಷೇಮಗಳನ್ನು ದಾಸರು ನೋಡಿಕೊಳ್ಳಹತ್ತಿದರು. ಅವರ ಈ ಉದಾರಗುಣವನ್ನೂ ದೇಶ-ಬಾಂಧವರ ವಿಷಯದಲ್ಲಿರುವ ಪ್ರೇಮವನ್ನೂ ಕಂಡು ಜನರು ಅವರನ್ನು ಕೊಂಡಾಡಿದರು; 'ದೇಶಬಂಧು' ಎಂದು ಆದರದ ಬಿರುದಿನಿಂದ ಕರೆಯ ತೊಡಗಿದರು.

ಮುಂದೆ ದಾಸರು ಬಂಗಾಲಪ್ರಾಂತದ ರಾಜಕೀಯ ಪರಿಷತ್ತಿನ ಅಧ್ಯಕ್ಷ ರಾದರು. 'ಭಾರತದೇಶದ ಸುಧಾರಣೆಯಾಗಬೇಕಾದರೆ ಹಳ್ಳಿಗಳು ಸುಧಾರಿಸ ಬೇಕು' ಎಂದು ದಾಸರು, ಹಳ್ಳಿಗಳ ಸುಧಾರಣೆಗೆ ಕೈಹಾಕಿದರು. 'ದೇಶಬಂಧು ಪಲ್ಲೀ ಸಂಸ್ಕಾರ ಸಮಿತಿ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅದಕ್ಕೆ ತಮ್ಮ ಸ್ವಂತದ ಹಣವನ್ನೆಲ್ಲ ಸೂರೆಮಾಡಿದರಲ್ಲದೆ, ದೊಡ್ಡ ದೊಡ್ಡ ಶ್ರೀಮಂತರಿಂದಲೂ ಹಣ ಕೂಡಿಸಿದರು. ಸ್ವಚ್ಛತೆ, ಗ್ರಾಮಕೈಗಾರಿಕೆ, ಸಾಕ್ಷರತಾ ಪ್ರಸಾರ ಮುಂತಾದ ಕಾರ್ಯಗಳನ್ನು ಪ್ರಾರಂಭಿಸಿದರು.

ಸರಕಾರದವರು ಪಂಜಾಬದಲ್ಲಿ ಮಾಡಿದ ಅನ್ಯಾಯಗಳನ್ನು ಕಂಡು ದಾಸರು ಸರಕಾರದ ವಿರುದ್ಧ ಚಳವಳಿ ಹೂಡಿದರು. ಗಾಂಧೀಜಿಯವರು ಶಾಂತಸ್ವಭಾವದವರು. ದಾಸರು ಉಗ್ರ ಪ್ರತಿಭಟನೆ ಮಾಡುವವರು. ಹೀಗಾಗಿ ಗಾಂಧೀಜಿಯವರಿಗೂ ಇವರಿಗೂ ಕೆಲವು ದಿವಸ ಕೂಡಿ ನಡೆಯಲಿಲ್ಲ. ಗಾಂಧೀಜಿಯವರನ್ನು ರಾಜಕಾರಣದಲ್ಲಿ ಸೋಲಿಸಬೇಕೆಂದು ದಾಸರು ಪ್ರಯತ್ನಮಾಡಿದರು. ಆದರೆ ಮುಂದೆ ಗಾಂಧೀಜಿಯವರ ಪ್ರಭಾವಕ್ಕೆ ಒಳ-ಗಾಗಿ ತಾವೇ ಅವರ ಶಿಷ್ಯರಾದರು. ದೇಶದಲ್ಲಿ ಅಸಹಕಾರದ ಚಳವಳಿ ಹೆಚ್ಚು ಉಗ್ರವಾಯಿತು. ಆಗ ದಾಸರು ಸೆರೆಮನೆಯನ್ನು ಸೇರಬೇಕಾಯಿತು. ದಾಸ ರೊಡನೆ ಅವರ ಹೆಂಡತಿ, ಮಗ, ತಂಗಿ ಮುಂತಾದವರೆಲ್ಲರೂ ಸೆರೆಮನೆಗೆ ಹೋದರು.

ಸೆರೆಮನೆಯಿಂದ ತಿರುಗಿ ಬಂದಬಳಿಕ ದಾಸರ ಕೀರ್ತಿ ಮತ್ತಷ್ಟು ಬೆಳೆ ಯಿತು. ಆ ವರುಷ ಗಯಾಪಟ್ಟಣದಲ್ಲಿ ಕಾಂಗ್ರೆಸಿನ ಸಭೆ ಕೂಡಿತು. ಅದಕ್ಕೆ ಚಿತ್ತರಂಜನ ದಾಸರು ಅಧ್ಯಕ್ಷರಾಗಿ ಆರಿಸಿಬಂದರು; ಆಗಲೆ ಕಲಕತ್ತಾ ನಗರಸಭೆಯ ಅಧ್ಯಕ್ಷರೂ ಆದರು. ಮುಂದೆ ಕೆಲವು ದಿವಸಗಳಲ್ಲಿಯೇ ದಾಸರ ಪ್ರಕೃತಿಯು ಕೆಟ್ಟಿತು. ವಿಶ್ರಾಂತಿಗಾಗಿ ಅವರು ದಾರ್ಜಿಲಿಂಗಕ್ಕೆ ಹೋದರು. ಆದರೆ ಅವರಿಗೆ ಅಲ್ಲಿಯೂ ನೆಟ್ಟಗಾಗಲಿಲ್ಲ. ೧೯೨೫ರಲ್ಲಿ ದೇಶಬಂಧು ದಾಸರು ಇಹಲೋಕಯಾತ್ರೆಯನ್ನು ಮುಗಿಸಿದರು.

"ನಾವು ಆಚಾರ-ವಿಚಾರಗಳಲ್ಲಿ ಶುದ್ಧ ಭಾರತೀಯರಾಗಬೇಕು" ಎಂದು ದಾಸರು ಹೇಳುತ್ತಿದ್ದರು. ದಾಸರು ರಾಜಕಾರಣಿಗಳಲ್ಲದೆ ಉತ್ತಮ ಕವಿಗಳೂ

ಆಗಿದ್ದರು. ಅವರು ಬರೆದ ಲೇಖನಗಳು ಈಗಲೂ ಜನರಿಗೆ ಪ್ರಿಯವಾಗಿವೆ. ದೇಶಬಂಧು ದಾಸರು ಮಾಡಿದ ದೇಶಸೇವೆ-ತ್ಯಾಗಗಳ ಸ್ಮಾರಕವಾಗಿ 'ಚಿತ್ತ-ರಂಜನ ಸೇವಾಸದನ' ಎಂಬ ಸುಂದರವಾದ ಔಷಧಾಲಯವನ್ನು ಕಲಕತ್ತೆಯಲ್ಲಿ ಕಟ್ಟಿಸಿದ್ದಾರೆ. ಅಲ್ಲದೆ ಉಗಿಬಂಡಿಯ ಎಂಜಿನನ್ನು ತಯಾರಿಸುವ ಕಾರಖಾನೆಯಿದ್ದ ಊರಿಗೆ ಸರಕಾರದವರು 'ಚಿತ್ತರಂಜನ' ಎಂದು ಹೆಸರಿಟ್ಟು, ದೇಶಬಂಧು ದಾಸರ ಕಾರ್ಯಕ್ಕೆ ಮನ್ನಣೆ ಕೊಟ್ಟಿದ್ದಾರೆ.

### ಅಭ್ಯಾಸನಗಳು

೧. ಚಿತ್ತರಂಜನದಾಸರು ಹುಟ್ಟಿದ ಊರು ಯಾವುದು?
೨. ಇವರು ಆಯ್. ಸಿ. ಎಸ್. ಪರೀಕ್ಷೆಯಲ್ಲಿ ಏಕೆ ನಾಪಾಸಾದರು?
೩. ಚಿತ್ತರಂಜನರನ್ನು ಜನರು "ದೇಶಬಂಧು" ಎಂದು ಏಕೆ ಕರೆಯಹತ್ತಿದರು?
೪. ಭಾರತವನ್ನು ಸುಧಾರಿಸಲು ಇವರು ಯಾವ ಯಾವ ಸಾಮಾಜಿಕ ಕಾರ್ಯಗಳನ್ನು ಕೈಕೊಂಡರು?
೫. ಚಿತ್ತರಂಜನದಾಸರು ಗಾಂಧೀಜಿಯ ಶಿಷ್ಯರು ಹೇಗೆ ಆದರು?
೬. ಕಲಕತ್ತೆಯಲ್ಲಿ ದೇಶಬಂಧುಗಳ ಸ್ಮಾರಕವೆಂದು ಏನೇನು ಮಾಡಿದ್ದಾರೆ?
೭. ಚಿತ್ತರಂಜನದಾಸರಲ್ಲಿಯ ಮಹತ್ವದ ಗುಣಗಳಾವುವು?

## ೪೭. ಸಯಾಜಿರಾವ ಗಾಯಕವಾಡ

"ಅರಸರೆಲ್ಲ ಅನ್ಯರ ಬುದ್ಧಿವಂತಿಕೆಯ ಮೇಲೆಯೆ ಬದುಕುವವರು" ಎಂಬುದೊಂದು ಅನುಭವದ ವಚನವು ರೂಢಿಯಲ್ಲಿದೆ. ಶ್ರೀಮಂತ ಸಯಾಜಿರಾವ ಗಾಯಕವಾಡ ಇವರು ಆ ಅನುಭವವಚನವನ್ನು ಸುಳ್ಳುಮಾಡಿ ತೋರಿಸಿದರು. ಇವರು ಬಡೋದಾ ಸಂಸ್ಥಾನದ ಮಹಾರಾಜರು. ಬೇರೆಯವರ ಬುದ್ಧಿಯನ್ನು ಅವಲಂಬಿಸದೆ, ತಮ್ಮ ಬುದ್ಧಿಕೌಶಲ್ಯ-ಜಾಣ್ಮೆಗಳಿಂದಲೆ ಇವರು, ತಮ್ಮ ಹೆಸರನ್ನು ಎಲ್ಲ ದೇಶಗಳಲ್ಲಿಯೂ ಮೆರೆಸಿದರು. ಅಲ್ಲದೆ ಬಡೋದೆಯ ಸಂಸ್ಥಾನವನ್ನು ಎಲ್ಲ ರೀತಿಯಿಂದಲೂ ಉನ್ನತಿಗೆ ಏರುವಂತೆ ಮಾಡಿದರು.

ಸಯಾಜಿರಾವ ಅವರು ರಾಜರ ಕುಲದವರಾದರೂ, ರಾಜಪುತ್ರರಾಗಿಯೆ ಹುಟ್ಟಿದವರಲ್ಲ. ಅವರ ತಂದೆಯವರಾದ ಕಾಶೀರಾಯನು ನಾಸಿಕ ಜಿಲ್ಹೆಯ 'ಕವಳಾಣೆ' ಎಂಬ ಊರಲ್ಲಿ ಇರುತ್ತಿದ್ದನು. ಅವನು ಬಡೋದೆಯ ಗಾಯಕವಾಡ ಮನೆತನಕ್ಕೆ ಸಂಬಂಧಿಸಿದವನು. ಆದರೂ ಎರಡು-ಮೂರು ತಲೆ-

ಮಾರಿನಿಂದ ಅವನಿಗೆ ರಾಜಕೀಯ ಸಂಬಂಧ ತಪ್ಪಿಹೋಗಿದ್ದಿತು. ಆದುದರಿಂದ ಅವನು ಹಳ್ಳಿಗೆ ಹೋಗಿ ಅಲ್ಲಿ ನೆಲೆಸಿದ್ದನು.

ಬಡೋದೆಯ ರಾಜನಾಗಿದ್ದ ಮಲ್ಹಾರರಾಯ ಸೋಮಾರಿ. ಆಡಳಿತದ ಕಲ್ಪನೆಯೇ ಇಲ್ಲದವನು. ಅವನ ಆಳಿಕೆಯಿಂದ ಪ್ರಜರು ಬೇಸತ್ತಿದ್ದರು. ಕಾರಣ ಇಂಗ್ಲಿಷ್ ಸರಕಾರದವರು ಅವನನ್ನು ಪಟ್ಟದಿಂದ ತೆಗೆದುಹಾಕಿದರು. ಅವನ ಅಣ್ಣನಾದ ಖಂಡೇರಾಯನು ಮೊದಲೇ ತೀರಿಹೋಗಿದ್ದನು. ಆತನ ಹೆಂಡತಿಯಾದ ಜಮುನಾಬಾಯಿಗೆ ದತ್ತಕತೆಗೆದುಕೊಳ್ಳಲು ಇಂಗ್ಲಿಷ್ ಸರಕಾರದಿಂದ ಸಮ್ಮತಿ ಸಿಕ್ಕಿತು. ಅವಳು ಗಾಯಕವಾಡ ಮನೆತನದಲ್ಲಿ, ದತ್ತಕತೆಗೆದುಕೊಳ್ಳಲು ಯೋಗ್ಯನಾದ ಹುಡುಗನನ್ನು ತಾನೇ ಹುಡುಕಾಡಲು ಪ್ರಾರಂಭಿಸಿದಳು. ಕವಳಾಣೆಯಲ್ಲಿ ಇರುವ ಕಾಶೀರಾಯನು ತಮ್ಮ ಸಂಬಂಧಿಕನೆಂಬುದು ಅವಳಿಗೆ ತಿಳಿಯಿತು. ಕಾಶೀರಾಯನಿಗೆ ಮೂವರು ಗಂಡು-ಮಕ್ಕಳಿದ್ದರು. ಅವರನ್ನು ಕರೆದುಕೊಂಡು ಬರಬೇಕೆಂದು ಜಮುನಾಬಾಯಿ ಕಾಶೀರಾಯನಿಗೆ ಹೇಳಿಕಳುಹಿದಳು. ಅದರಂತೆ ಅವನು ಮಕ್ಕಳನ್ನು ಕರೆದುಕೊಂಡು ಬಡೋದೆಗೆ ಬಂದನು. ಆ ಮೂರು ಮಕ್ಕಳಲ್ಲಿ ನಡುವಿನವನಾದ ಗೋಪಾಳರಾಯನು ಬಲುಸುಂದರನೂ ಬುದ್ಧಿಶಾಲಿಯೂ ಆಗಿದ್ದನು. ರಾಣಿಯು ಅವನನ್ನೇ ದತ್ತಕತೆಗೆದುಕೊಂಡಳು. ಅವನಿಗೆ 'ಸಯಾಜಿರಾವ' ಎಂಬ ಹೊಸ ಹೆಸರನ್ನಿರಿಸಿದಳು.

ದತ್ತಕಮಾಡಿಕೊಂಡಾಗ ಸಯಾಜಿಯವರಿಗೆ ಹನ್ನೆರಡು ವರ್ಷಗಳಾಗಿದ್ದುವು. ಅವರಿಗೆ ಓದಲಿಕ್ಕೆ-ಬರೆಯಲಿಕ್ಕೆ ಏನೂ ಬರುತ್ತಿದ್ದಿಲ್ಲ. ಆದುದರಿಂದ, ಆಗ ಬಡೋದೆಯ ದಿವಾಣರಾಗಿದ್ದ ಸರ್. ಟಿ. ಮಾಧವರಾಯರು ಅವನ ಶಿಕ್ಷಣದ ಬಗೆಗೆ ಹೆಚ್ಚಿನ ವ್ಯವಸ್ಥೆಯನ್ನು ಮಾಡಿದರು. ಉತ್ತಮ ಶಿಕ್ಷಕರನ್ನು ನಿಯಮಿಸಿದರು; ರಾಜವಾಡೆಯಲ್ಲಿಯೇ ಪ್ರತ್ಯೇಕ ಸ್ಥಳವನ್ನು ಏರ್ಪಡಿಸಿಕೊಟ್ಟರು. ಇಲಿಯಟ್ ಎಂಬ ಇಂಗ್ಲಿಷ್ ಮನುಷ್ಯನನ್ನು ಅಲ್ಲಿ ಪ್ರಿನ್ಸಿಪಾಲನನ್ನಾಗಿ ನೇಮಿಸಿದರು. ಆ ಶಿಕ್ಷಕರ ಮೇಲೆ ಸಯಾಜಿರಾಜರ ಪ್ರೀತಿ ಅತಿಯಾಗಿ ಇತ್ತು. ಆರು ವರ್ಷಗಳ ವರೆಗೆ ಮಹಾರಾಜರಿಗೆ ಅಲ್ಲಿ ಉತ್ತಮರೀತಿಯ ಶಿಕ್ಷಣವು ಸಿಕ್ಕಿತು. ಅವರು ಇಂಗ್ಲಿಷ್, ಮರಾಠಿ ಮತ್ತು ಗುಜರಾತಿ ಭಾಷೆಗಳನ್ನು ಕಲಿತರು. ಅಲ್ಲದೆ ಕುದುರೆ ಹತ್ತಲು, ಬೇಟೆ ಆಡಲು ಹಾಗು ಕತ್ತಿ-ಬಂದೂಕುಗಳನ್ನು ಉಪಯೋಗಿಸಲು ಚೆನ್ನಾಗಿ ಕಲಿತುಕೊಂಡರು. ರಾಜ್ಯಕಾರಭಾರದ ವ್ಯವಸ್ಥೆಯಲ್ಲಿಯೂ ನಿಪುಣರಾದರು. ಬಳಿಕ ಸಯಾಜಿರಾಯರು ಅರಸರಾಗಿ ರಾಜ್ಯಕಾರಭಾರ ಮಾಡಹತ್ತಿದರು.

ಶ್ರೀಮಂತ ಸಯಾಜಿರಾವ ಮಹಾರಾಜರು ಆಡಳಿತವನ್ನು ಕೈಯಲ್ಲಿ

ತೆಗೆದುಕೊಂಡ ಬಳಿಕ, ಬಡೋದೆಯಲ್ಲಿಯ ಪ್ರತಿಯೊಂದು ಕಚೇರಿಗೂ ಭೆಟ್ಟಿಯನ್ನು ಕೊಟ್ಟರು; ಅಧಿಕಾರಿಗಳು ಸರಿಯಾಗಿ ಕೆಲಸ ನಡೆಸಿದ್ದಾರೋ ಇಲ್ಲವೋ ಎಂಬುದನ್ನು ಪ್ರತ್ಯಕ್ಷ ನೋಡಿಕೊಂಡರು. ಬಳಿಕ ತಮ್ಮ ರಾಜ್ಯದ ತುಂಬ ಸಂಚಾರ ಕೈಕೊಂಡರು. ಅಲ್ಲಲ್ಲಿ ಹೋಗಿ ಪ್ರಜರ ಸ್ಥಿತಿಗತಿಗಳನ್ನು ಕೇಳಿಕೊಂಡರು. ಅಧಿಕಾರಿಗಳು ಪ್ರಜರ ಸಂಗಡ ಹೇಗೆ ವರ್ತಿಸುವರೆಂಬುದನ್ನು ವಿಚಾರಿಸಿದರು. ಇದರಿಂದ ರಾಜ ಹಾಗು ಪ್ರಜೆಗಳಲ್ಲಿ ಹತ್ತಿರದ ಸಂಬಂಧವು ಬಂದಂತಾಯಿತು.

ಮುಂದೆ ಶ್ರೀಮಂತ ಸಯಾಜಿರಾವ ಮಹಾರಾಜರಿಗೆ ಲೋಕಸ್ಥಿತಿಯನ್ನು ಅರಿತುಕೊಳ್ಳಬೇಕೆಂದು ಮನಸ್ಸಾಯಿತು, ಆ ಕಾಲದಲ್ಲಿ ಪರದೇಶ ಸಂಚಾರವು ನಿಷಿದ್ಧವೆಂದು ನಮ್ಮ ಜನರಲ್ಲಿ ಭಾವನೆಯಿತ್ತು. ಆದುದರಿಂದ ಅವರಿಗೆ ಬಹಳ ಅಡಚಣೆಗಳು ಬಂದುವು. ಆದರೆ ಅವರು ಹೊಸ ವಿಚಾರದವರು. ಹಳೆಯ ಭಾವನೆಯ ಕಡೆಗೆ ಮನಸ್ಸುಕೊಡದೆ ತಮ್ಮ ಹೆಂಡತಿಯೊಂದಿಗೆ ಅವರು ಇಂಗ್ಲಂಡಿಗೆ ಹೋದರು. ಅದೊಂದೇ ಸಲವಲ್ಲ; ಎಷ್ಟೋ ಸಲ ಅವರು ಪರದೇಶಗಳ ಪ್ರವಾಸ ಮಾಡಿಬಂದರು. ಬರುಬರುತ್ತ ಅವರು ವರ್ಷದಲ್ಲಿ ಸುಮಾರು ೮ ತಿಂಗಳ ಕಾಲವನ್ನು ಯೂರೋಪಖಂಡದ ತಂಪು-ದೇಶಗಳಲ್ಲಿಯೆ ಕಳೆಯುತ್ತಿದ್ದರು. ಅಲ್ಲಿ ಇದ್ದರೂ ಅವರ ಲಕ್ಷ್ಯವೆಲ್ಲ ಸಂಸ್ಥಾನದ ಆಡಳಿತದ ಕಡೆಗೆ ಇರುತ್ತಿತ್ತು. ರಾಜ್ಯದಲ್ಲಿಯ ಪ್ರತಿಯೊಂದು ಮಹತ್ತ್ವದ ಮಾತೂ ಅವರಿಗೆ ಗೊತ್ತು ಇರುತ್ತಿತ್ತು.

ಸಯಾಜಿರಾಜರು ರಾಜ್ಯಕಾರಭಾರವನ್ನು ತೀರ ಹೊಸರೀತಿಯಲ್ಲಿ ನಡೆಸುತ್ತಿದ್ದರು. ಬೇರೆಬೇರೆ ವಿಭಾಗಗಳಿಗೆ ಬೇರೆಬೇರೆ ದಕ್ಷರಾದ ಅಧಿಕಾರಿಗಳನ್ನು ನೇಮಿಸಿದ್ದರು. ಅವರು ಜಾತಿ-ಮತ-ಪಂಥಗಳನ್ನು ಹಾಗು ಪ್ರಾಂತೀಯತೆಯನ್ನು ಲಕ್ಷ್ಯಕ್ಕೆ ತಾರದೆ, ಯೋಗ್ಯರಾದವರಿಗೆ ದೊಡ್ಡ ದೊಡ್ಡ ನೌಕರಿಗಳನ್ನು ಕೊಡುತ್ತಿದ್ದರು.

ತಮ್ಮ ರಾಜ್ಯದಲ್ಲಿ ಅವರು ಅನೇಕ ಸುಧಾರಣೆಗಳನ್ನು ಮಾಡಿದರು. ಪ್ರಜೆಗಳಿಗೆ ಯೋಗ್ಯ ನ್ಯಾಯ ದೊರೆಯಬೇಕೆಂದು ನ್ಯಾಯಖಾತೆಯನ್ನು ಪ್ರಾರಂಭಿಸಿದರು. ‘ಪ್ರಜೆಗಳು ಸುಶಿಕ್ಷಿತರಾದ ಹೊರತಾಗಿ ದೇಶದ ಏಳ್ಗೆಯಾಗುವದಿಲ್ಲ’ ಎಂಬುದನ್ನು ಮನಗಂಡು, ಕ್ರಿ. ಶ. ೧೮೯೩ರಿಂದ ತಮ್ಮ ರಾಜ್ಯದಲ್ಲಿ ಪುಕ್ಕಟೆಯಾದ ಒತ್ತಾಯದ ಪ್ರಾಥಮಿಕ ಶಿಕ್ಷಣವನ್ನು ಪ್ರಚಾರದಲ್ಲಿ ತಂದರು. ಪ್ರಾಥಮಿಕ ಶಿಕ್ಷಣ ಮುಗಿದ ಬಳಿಕ ಹಳ್ಳಿಯವರಿಗೆ ಹೆಚ್ಚಿನ ಜ್ಞಾನವು ದೊರೆಯಬೇಕೆಂಬ ಇಚ್ಛೆಯಿಂದ, ಪ್ರತಿಯೊಂದು ಊರಲ್ಲಿ ಒಂದೊಂದು ವಾಚನಾಲಯವನ್ನು ತೆರೆದರು. ಮತ್ತು ಆ ವಾಚನಾಲಯಗಳಿಗೆ

ಸರಕಾರದಿಂದ ಪ್ರತಿವರ್ಷ ಧನಸಹಾಯ ಸಿಗುವಂತೆ ವ್ಯವಸ್ಥೆ ಮಾಡಿದರು. ತಮ್ಮ ರಾಜ್ಯದಲ್ಲಿ ಬಾಲ್ಯವಿವಾಹಕ್ಕೆ ಕಾಯ್ದೆಯಿಂದ ತಡೆಹಾಕಿದರು. ಒಕ್ಕಲುತನದ ಸುಧಾರಣೆಗಾಗಿ ಬೇರೊಂದು ಸ್ವತಂತ್ರ ಖಾತೆಯನ್ನು ಪ್ರಾರಂಭಿಸಿದರು. ಬಡೋದೆ ಪಟ್ಟಣವನ್ನು ಹೊಸಪದ್ಧತಿಯಿಂದ ಕಟ್ಟಿಸಲು ಜನರಿಗೆ ಸಹಾಯ ಮಾಡಿದರು.

ಶ್ರೀಮಂತ ಸಯಾಜಿರಾವ ಮಹಾರಾಜರು ಮಹಾವಿದ್ವಾಂಸರಾಗಿದ್ದರು. ಅವರಿಗೆ ಎಲ್ಲ ಕಡೆಗೂ ಮರ್ಯಾದೆ ಸಿಗುತ್ತಿತ್ತು. ಅಮೇರಿಕೆಯ ಸರ್ವಧರ್ಮ ಪರಿಷತ್ತಿಗೆ ಅವರೊಮ್ಮೆ ಅಧ್ಯಕ್ಷರಾಗಿ ಹೋಗಿದ್ದರು. ಹೀಗೆ ಎಲ್ಲೆಡೆಯಲ್ಲಿ ಯೂ ಪ್ರಸಿದ್ಧಿ ಪಡೆದು, ಅವರು ಕ್ರಿ. ಶ. ೧೯೩೯ರಲ್ಲಿ ಕೈಲಾಸವಾಸಿಗಳಾದರು. ಆಗ ಅವರ ವಯಸ್ಸು ೭೬ ಇತ್ತು. ಬಡೋದಾ ಸಂಸ್ಥಾನವು ಈಗ ಮುಂಬಯಿ ರಾಜ್ಯದಲ್ಲಿ ಬೆರೆತುಬಿಟ್ಟಿದೆ.

## ಅಭ್ಯಸನಗಳು

೧. ಸಯಾಜಿರಾಜರ ತಂದೆಯು ಯಾವ ಊರಲ್ಲಿ ಇರುತ್ತಿದ್ದರು?
೨. ಇವರು ಮಹಾರಾಜರು ಹೇಗೆ ಆದರು?
೩. ಇವರು ದತ್ತಕವಾದಾಗ ಸಂಸ್ಥಾನದ ದಿವಾಣರು ಯಾರು ಇದ್ದರು?
೪. ದಿವಾಣರು ಸಯಾಜಿರಾಜರ ಶಿಕ್ಷಣದ ಒಗ್ಗೆ ಯಾವ ವ್ಯವಸ್ಥೆ ಮಾಡಿದರು?
೫. ಸಯಾಜಿರಾಜನು ಸಂಸ್ಥಾನದ ಆಡಳಿತವನ್ನು ತಮ್ಮ ಕೈಯಲ್ಲಿ ತಕ್ಕೊಂಡ ಬಳಿಕ ಯಾವ ಯಾವ ಸುಧಾರಣೆಗಳನ್ನು ಮಾಡಿದರು?
೬. ಬಡತನದಲ್ಲಿ ಬೆಳೆದ ಗೋಪಾಲನು ಮಹಾರಾಜರ ಸಯಾಜಿರಾವನಾದ ಕಥೆಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೪೮. ರವೀಂದ್ರನಾಥ ಠಾಕೂರ

'ಜನಗಣಮನ ಅಧಿನಾಯಕ ಜಯಹೇ ಭಾರತ ಭಾಗ್ಯವಿಧಾತಾ' ಎಂಬ ರಾಷ್ಟ್ರಗೀತವನ್ನು ನಾವೆಲ್ಲರೂ ಪ್ರೀತಿಯಿಂದ ಅನ್ನುತ್ತೇವೆ. ಅದನ್ನು ರಚಿಸಿದ ಮಹಾಕವಿಗಳೇ ರವೀಂದ್ರನಾಥ ಠಾಕೂರರು. ಇವರು ಬಂಗಾಲ ರಾಜ್ಯದವರು. ಇವರ ತಂದೆ ದೇವೇಂದ್ರನಾಥ ಠಾಕೂರರು ಕಲಕತ್ತೆಯಲ್ಲಿ ಇರುತ್ತಿದ್ದರು. ಅವರು ದೊಡ್ಡ ಶ್ರೀಮಂತರು; ಜಮೀನುದಾರರು. ಅವರಲ್ಲಿ ಗರ್ವ-ಡಂಭಾಚಾರಗಳು ಸ್ವಲ್ಪವೂ ಇರಲಿಲ್ಲ. ಸತ್ಯ-ಸದಾಚಾರಗಳು ಅವರಲ್ಲಿ ಮನೆಮಾಡಿಕೊಂಡಿದ್ದುವು. ಆದುದರಿಂದಲೆ ಜನರೆಲ್ಲ ಅವರನ್ನು 'ಮಹರ್ಷಿ ದೇವೇಂದ್ರನಾಥರು' ಎಂದು ಕರೆಯುತ್ತಿದ್ದರು. ದೇವೇಂದ್ರನಾಥರು ತಮ್ಮ ಮನಸ್ಸಿನ ಶಾಂತಿಗಾಗಿ, ಮೇಲಿಂದಮೇಲೆ ಹಿಮಾಲಯದ ಸುಂದರ ಪ್ರದೇಶಕ್ಕೆ ಹೋಗುತ್ತಿದ್ದರು; ಅಲ್ಲಿ ಕೆಲವು ಕಾಲ ಇದ್ದು ಮರಳಿಬರುತ್ತಿದ್ದರು. ಇಂತಹ ಮಹಾಪುರುಷರ ಹೊಟ್ಟೆಯಿಂದ ರವೀಂದ್ರನಾಥರು ಕ್ರಿ. ಶ. ೧೮೬೧ರಲ್ಲಿ ಜನ್ಮತಾಳಿದರು.



ಕವೀಂದ್ರ ರವೀಂದ್ರರು

ರವೀಂದ್ರನು ಇನ್ನೂ ಚಿಕ್ಕವನಿರುವಾಗಲೇ ಅವನ ತಾಯಿ ತೀರಿಕೊಂಡಳು. ತಾಯಿಯ ಸುಖವು ಅವನಿಗೆ ದೊರೆಯಲಿಲ್ಲ. ದೊಡ್ಡ ಜಮೀನುದಾರನ ಮನೆ. ಅಲ್ಲಿ ಆಳುಗಳಿಗೇನು ಕೊರತೆ? ಆ ಆಳುಗಳೇ ಬಾಲಕ ರವೀಂದ್ರನನ್ನು ಜೋಕೆ ಮಾಡುತ್ತಿದ್ದರು. ಆತನ ಆರು ಜನ ಅಣ್ಣಂದಿರೂ ಅವನನ್ನು ಪ್ರೀತಿಯಿಂದ ಎತ್ತಿ ಆಡಿಸುತ್ತಿದ್ದರು. ಚಿಕ್ಕಂದಿನಲ್ಲಿ ರವೀಂದ್ರ ಬಹಳ ಅಶಕ್ತನಿದ್ದುದರಿಂದ, ಅವನನ್ನು ಹೊರಗೆ ಆಡಲು ಬಿಡುತ್ತಿದ್ದಿಲ್ಲ. ಇದರಿಂದ ಅವನಿಗೆ ಬಹಳ ಬೇಸರವೆನಿಸುತ್ತಿತ್ತು. ಆಗ ಅವನು ಬೀದಿಯ ಕಡೆಗೆ ಇರುವ ಒಂದು ಕಿಡಕಿಯಲ್ಲಿ ಕುಳಿತುಕೊಳ್ಳುವನು, ಬೀದಿಯಲ್ಲಿ ಅಲೆದಾಡುವ ಜನರನ್ನು ನೋಡುವನು. ಓಡಾಡುವ ಪಶುಗಳನ್ನು ನಿಟ್ಟಿಸುವನು. ಹಾರಾಡುವ ಪಕ್ಷಿಗಳನ್ನೂ ತೇಲಾಡುವ ಮೋಡಗಳನ್ನೂ ನಿರೀಕ್ಷಿಸುವನು. ಇದರಿಂದಲೆ ಅವನು ತನ್ನ ಬೇಸರವನ್ನು ಕಳೆದುಕೊಳ್ಳುತ್ತಿದ್ದನು.

ತಂದೆಯವರು ರವೀಂದ್ರನನ್ನು ಸಾಲೆಗೆ ಹಾಕಿದರು. ಆಗ ಅವನು

ಸಾಲೆಯಲ್ಲಿ, ಒಂದು ಮೂಲೆಹಿಡಿದು ಹುಚ್ಚನಂತೆ ಕುಳಿತುಕೊಳ್ಳುತ್ತಿದ್ದನು. ಗುರುಗಳು ಹೇಳುವ ಯಾವ ವಿಷಯಗಳೂ ಅವನಿಗೆ ರುಚಿಸುತ್ತಿರಲಿಲ್ಲ. ಆದುದರಿಂದ ಅವನು ಆಗಾಗ ಸಾಲೆಯನ್ನು ತಪ್ಪಿಸತೊಡಗಿದನು. ಸಾಲೆಯಲ್ಲಿ ಗುರುಗಳು ವಿಷಯಗಳನ್ನು ಹೇಳುವಾಗ, ಹೊರಗೆ ಹೂದೋಟದಲ್ಲಿ ಅವನು ಹೂಗಳ ವಾಸನೆ-ಸೌಂದರ್ಯಗಳನ್ನು ನೋಡುತ್ತ ಅಲೆದಾಡುತ್ತಿದ್ದನು. ಸಾಲೆ ಬಿಟ್ಟಬಳಿಕ ಬಯಲಲ್ಲಿ ಅಡ್ಡಾಡುವುದು, ಎತ್ತರವಾದ ಸ್ಥಳದ ಮೇಲೆ ನಿಂತು ಸುತ್ತುಮುತ್ತಲೂ ನೋಡುವುದು ರವೀಂದ್ರನಿಗೆ ಬಹಳ ಸೇರುತ್ತಿದ್ದುವು. ಇದರಿಂದ ಸಾಲೆಯಲ್ಲಿ ಅವನ ಶಿಕ್ಷಣವು ಸರಿಯಾಗಿ ಸಾಗಲಾರದಾಯಿತು. ಅದಕ್ಕಾಗಿ ಅವನ ತಂದೆಯವರು ಮನೆಯಲ್ಲಿಯೆ ಅವನ ಶಿಕ್ಷಣದ ಏರ್ಪಾಡನ್ನು ಮಾಡಿದರು. ಒಬ್ಬ ನುರಿತ ಶಿಕ್ಷಕನನ್ನು ನೇಮಿಸಿ, ರವೀಂದ್ರನಿಗೆ ಶಿಕ್ಷಣ ಕೊಡಿಸಲು ಪ್ರಾರಂಭಿಸಿದರು.

ವಿದ್ಯಾರ್ಥಿ ರವೀಂದ್ರನು ನಿತ್ಯವೂ ಬೆಳಗಿನಲ್ಲಿ ಏಳುವನು, ವ್ಯಾಯಾಮ ಮಾಡುವನು; ಬಳಿಕ ಗಣಿತ-ಇತಿಹಾಸ-ಕಾವ್ಯಗಳನ್ನು ಓದಿಕೊಳ್ಳುವನು. ಗುರುಗಳು ಬಂದಮೇಲೆ ತನ್ನ ವಿಷಯಗಳನ್ನು ಒಪ್ಪಿಸಿ, ಮುಂದಿನ ವಿಷಯ ಹೇಳಿಸಿಕೊಳ್ಳುವನು. ಬರು-ಬರುತ್ತ ಚಿತ್ರಕಲೆಯನ್ನೂ ರೂಢಿಮಾಡಹತ್ತಿದನು. ರಾತ್ರಿಯಲ್ಲಿ ಇಂಗ್ಲಿಷ್ ಭಾಷೆಯನ್ನು ಕಲಿಯತೊಡಗಿದನು. ವಾರದಲ್ಲಿ ಒಂದೆರಡು ಸಲ ಗಾಯನವನ್ನು ಹೇಳಿಸಿಕೊಳ್ಳಹತ್ತಿದನು. ಹೀಗೆ ರವೀಂದ್ರ ಎಲ್ಲ ವಿಷಯಗಳನ್ನೂ ಮನಸ್ಸುಗೊಟ್ಟು ಕಲಿತನು. ತಂದೆಯವರ ಕೂಡ ಇವನೂ ಒಮ್ಮೊಮ್ಮೆ ಹಿಮಾಲಯಕ್ಕೆ ಹೋಗುತ್ತಿದ್ದನು. ಅಲ್ಲಿಯ ಶಾಂತವಾತಾವರಣ ಹಾಗೂ ಸೃಷ್ಟಿಯ ಸೌಂದರ್ಯಗಳು ರವೀಂದ್ರನ ಕಣ್ಮನಗಳನ್ನು ತಣಿಸಿದುವು. ಆ ಸುಂದರವಾದ ಸೃಷ್ಟಿಯನ್ನು ಹುಟ್ಟಿಸಿದ ದೇವರ ಬಗೆಗೆ ಅವನಲ್ಲಿ ಭಕ್ತಿಯು ಉಂಟಾಗತೊಡಗಿತು.

ಮನಸ್ಸಿಗೆ ಆನಂದ ಎನಿಸಿದಾಗಲೆಲ್ಲ ರವೀಂದ್ರನು ಕವಿತೆಗಳನ್ನು ಬರೆಯುತ್ತಿದ್ದನು; ನಾನು ನೋಡಿಬಂದ ಸುಂದರ ಸನ್ನಿವೇಶಗಳ ಚಿತ್ರಗಳನ್ನು ತೆಗೆಯುತ್ತಿದ್ದನು. ಇನ್ನೂ ಹದಿಮೂರು ವರುಷದವನಿದ್ದಾಗಲೆ ಅವನು ಕವಿತೆ ಬರೆಯಲು ಪ್ರಾರಂಭಿಸಿದನು; ಗುಪ್ತ ಹೆಸರಿನಿಂದ ಪತ್ರಿಕೆಗಳಲ್ಲಿ ಅವುಗಳನ್ನು ಪ್ರಸಿದ್ಧಮಾಡುತ್ತಿದ್ದನು. ಆ ಕವಿತೆಗಳನ್ನು ಓದಿ ಬಂಗಾಲದ ಜನರು ಕವಿಯನ್ನು ಕೊಂಡಾಡತೊಡಗಿದರು. ರವೀಂದ್ರನು ೧೬ ವರುಷದವನಾಗಲು ತನ್ನ ಅಣ್ಣನೊಡನೆ ಪತ್ರಿಕಾವ್ಯವಸಾಯಕ್ಕೆ ತೊಡಗಿದನು. ಇದರಿಂದ ಆತನ ಪದ್ಯಗಳು ಅವರ ಪತ್ರಿಕೆಯಲ್ಲಿ ಹೆಚ್ಚಾಗಿ ಪ್ರಕಟವಾಗತೊಡಗಿದುವು. ರವೀಂದ್ರನನ್ನು ವಿಲಾಯತಿಗೆ ಕಳುಹಬೇಕೆಂದು ಮನೆಯಲ್ಲಿ ವಿಚಾರ ನಡೆ

ಯಿತು. ಅದರಂತೆ ಅವನು ಇಂಗ್ಲಂಡಿಗೆ ಹೋದನು. ಅಲ್ಲಿ ಅವನು ಇಂಗ್ಲಿಷ್ ಭಾಷೆಯ ಹೆಚ್ಚಿನ ಅಭ್ಯಾಸವನ್ನು ಮಾಡಿ ಭಾರತಕ್ಕೆ ತಿರುಗಿ ಬಂದನು.

ಭಾರತಕ್ಕೆ ಬಂದಮೇಲೆ ರವೀಂದ್ರರು ಕಥೆ, ಕಾದಂಬರಿ, ಲೇಖನ, ನಾಟಕ, ಕವಿತೆ ಮೊದಲಾದುವನ್ನು ಬರೆಯತೊಡಗಿದರು. ಅವುಗಳನ್ನು ಬಂಗಾಲೀ ಭಾಷೆಯಲ್ಲಿ ಅಚ್ಚುಮಾಡಿಸಿ ಜನರ ಮುಂದೆ ಇಡಹತ್ತಿದರು. ಜನರು ಇವರ ಅಗಾಧ ಪಾಂಡಿತ್ಯವನ್ನು ಮೆಚ್ಚಿ, ಇವರನ್ನು ಹೊಗಳಹತ್ತಿದರು. ರವೀಂದ್ರರು ಬಂಗಾಲಿಯಲ್ಲಿ ಅಷ್ಟೇ ಅಲ್ಲದೆ ಇಂಗ್ಲಿಷಿನಲ್ಲಿಯೂ ಲೇಖನ-ಕವನಗಳನ್ನು ಬರೆಯಹತ್ತಿದರು. ಇದರಿಂದ ಇವರ ಕೀರ್ತಿಯು ಬೇರೆ ದೇಶಗಳಲ್ಲಿಯೂ ಹಬ್ಬಿತು.

ರವೀಂದ್ರರು ಎಷ್ಟೋ ಕಾವ್ಯಗಳನ್ನು ಬರೆದಿದ್ದಾರೆ. ಅವುಗಳಲ್ಲಿ 'ಗೀತಾಂಜಲಿ' ಎಂಬುದು ಜಗತ್ಪ್ರಸಿದ್ಧವಾಗಿದೆ. ಅವರ ಈ ಕಾವ್ಯಕ್ಕೆ 'ನೋಬೆಲ್ ಪ್ರೈಜ್' ಎಂಬ ದೊಡ್ಡ ಬಹುಮಾನವು ದೊರೆಯಿತು. ಅದರಿಂದ ರವೀಂದ್ರರ ಹೆಸರು ಜಗತ್ತಿನ ತುಂಬ ಪಸರಿಸಿತು; ಜನರೆಲ್ಲ ಅವರನ್ನು 'ಕವೀಂದ್ರ ರವೀಂದ್ರ' ಎಂದು ಕರೆಯಹತ್ತಿದರು.

ರವೀಂದ್ರರು ವಿದ್ಯಾವಂತರು; ಅದರಂತೆ ವಿದ್ಯಾಪ್ರೇಮಿಗಳೂ ಆಗಿದ್ದರು. ಎಳೆಯ ಬಾಲಕರಿಗೆ ಪಾಠ ಕಲಿಸುವುದು, ಅವರೊಡನೆ ಮಾತಾಡುವುದು, ಆಡುವುದು, ನಲಿಯುವುದು ಅವರಿಗೆ ಬಹಳ ಸೇರುತ್ತಿದ್ದುವು. ಆದುದರಿಂದ ಅವರು ಕ್ರಿ. ಶ. ೧೯೦೧ರಲ್ಲಿ ಶಾಂತಿನಿಕೇತನದಲ್ಲಿ ಒಂದು ಆಶ್ರಮವನ್ನು ಕಟ್ಟಿಸಿದರು. ಅಲ್ಲಿ ಚಿಕ್ಕಮಕ್ಕಳಿಗಾಗಿ ಒಂದು ಸಾಲೆಯನ್ನು ತೆರೆದರು. ಬಯಲಲ್ಲಿ ಮರದ ಕೆಳಗೆ ಬಾಲಕರನ್ನು ಕುಳ್ಳಿರಿಸಿಕೊಂಡು ಪಾಠಗಳನ್ನು ಹೇಳುತ್ತಿದ್ದರು. ಬಾಲಕರಿಗೆ ಹಿಡಿಸುವಂತೆ ವಿಷಯಗಳನ್ನು ಕಲಿಸುತ್ತಿದ್ದರು. ಇದರಿಂದ ಆ ಸಾಲೆಯ ಕೀರ್ತಿ ಹಬ್ಬಿತು. ಬಹಳಷ್ಟು ಬಾಲಕರು ಬರಹತ್ತಿದರು. ಆ ಚಿಕ್ಕ ಆಶ್ರಮವು ಬೆಳೆದು ದೊಡ್ಡದಾಯಿತು. ವಿಶ್ವಭಾರತಿ ಎಂಬ ಹೆಸರಿನಿಂದ ಮಹಾವಿದ್ಯಾಲಯವಾಗಿ ನಿಂತಿತು. ಇಂದು ಅದು ಜಗತ್ತಿನ ಶ್ರೇಷ್ಠ ವಿಶ್ವವಿದ್ಯಾಲಯಗಳಲ್ಲಿ ಒಂದಾಗಿದೆ. ಅಲ್ಲಿ ಚಿತ್ರಕಲೆ, ಗಾಯನ, ವಿಜ್ಞಾನ, ಕೃಷಿಶಾಸ್ತ್ರ, ಕೈಗಾರಿಕೆ ಮೊದಲಾದ ಎಲ್ಲತರದ ವಿದ್ಯೆಗಳನ್ನು ಕಲಿಸುತ್ತಾರೆ; ಅಲ್ಲಿಯ ವಿದ್ಯಾರ್ಥಿಗಳು ಓರಣ, ಶಿಸ್ತು, ಸಾಹಸ, ಆಟ, ನೋಟ, ಕಲೆ, ಕೈಗಾರಿಕೆ ಮುಂತಾದವುಗಳಲ್ಲಿ ಒಳ್ಳೆಯ ಹೆಸರನ್ನು ಪಡೆದಿದ್ದಾರೆ.

ರವೀಂದ್ರರಲ್ಲಿ ದೇಶಪ್ರೇಮವು ತುಂಬಿತುಳುಕುತ್ತಿತ್ತು. 'ವಿಶ್ವವೇ ನನ್ನ ಮನೆ, ಎಲ್ಲ ಮಾನವರೂ ನನ್ನ ಬಂಧುಗಳು' ಎಂದು ಅವರು ಹೇಳುತ್ತಿದ್ದರು.

ಇವರು ಮಹಾತ್ಮಾ ಗಾಂಧಿಯವರಿಗೆ ಹತ್ತಿರದ ಗೆಳೆಯರಾಗಿದ್ದರು. ರವೀಂದ್ರರು ತಮ್ಮ ಸಮಾಜಸೇವೆ ಸಾಹಿತ್ಯಸೇವೆಗಳಿಗಾಗಿ ಜಗತ್ತಿನಿಂದಲೆ ಹೊಗಳಿಸಿಕೊಂಡರು; ಇವರು ಕ್ರಿ. ಶ. ೧೯೪೧ರಲ್ಲಿ ದಿವಂಗತರಾದರು. ಈ ವಿಶ್ವಕವಿಗಳು ಭಾರತೀಯರು; ಭಾರತದ ಇತಿಹಾಸದಲ್ಲಿ ಬೆಳ್ಳಿಚುಕ್ಕೆಯಂತೆ ಮಿನುಗುವವರು.

## ಅಭ್ಯಸನಗಳು

೧. ದೇವೇಂದ್ರನಾಥರನ್ನು ಮಹರ್ಷಿಗಳೆಂದು ಏಕೆ ಕರೆಯುತ್ತಿದ್ದರು?

೨. ರವೀಂದ್ರನಾಥರಿಗೆ ಶಾಲೆಯ ಅಭ್ಯಾಸವು ಏಕೆ ರುಚಿಸಲಿಲ್ಲ? ಅವರು ಶಾಲೆ ಬಿಟ್ಟ ಬಳಿಕ ಏನು ಮಾಡುತ್ತಿದ್ದರು?

೩. ರವೀಂದ್ರರು ತಮ್ಮ ಮನಸ್ಸಿಗೆ ಆನಂದವೆನಿಸಿದಾಗ ಏನು ಮಾಡುತ್ತಿದ್ದರು?

೪. ಇವರು ಇಂಗ್ಲಂಡಿಗೆ ಹೋಗಿ ಏನು ಮಾಡಿದರು?

೫. ಜನರು ಇವರನ್ನು "ಕವೀಂದ್ರ" ಎಂದು ಏಕೆ ಕರೆಯುತ್ತಿದ್ದರು?

೬. ರವೀಂದ್ರರು ಸ್ಥಾಪಿಸಿದ ಶಿಕ್ಷಣದ ಸಂಸ್ಥೆಯು ಯಾವುದು?

೭. ವಿಶ್ವಭಾರತಿಯಲ್ಲಿ ಯಾವ ಯಾವ ವಿಷಯಗಳನ್ನು ಕಲಿಸುತ್ತಾರೆ?

# ೪೯. ಮಹಾತ್ಮಾ ಗಾಂಧಿ

ಭಾರತಕ್ಕೆ ಸ್ವಾತಂತ್ರ್ಯವನ್ನು ಗಳಿಸಿಕೊಟ್ಟ ಕೀರ್ತಿ ಮಹಾತ್ಮಾಗಾಂಧಿಯವರದು. ಇವರು ಸೌರಾಷ್ಟ್ರದಲ್ಲಿಯೆ ಪೋರಬಂದರವೆಂಬ ಊರಲ್ಲಿ, ಕ್ರಿ. ಶ. ೧೮೬೯ರಲ್ಲಿ ಹುಟ್ಟಿದರು. ಇವರ ತಂದೆಯ ಹೆಸರು ಕರಮಚಂದ; ತಾಯಿಯ ಹೆಸರು ಪುತಳಾಬಾಯಿ. 'ಗಾಂಧಿ' ಎಂಬುದು ಇವರ ಮನೆತದ ಹೆಸರು. ಇವರ ನಿಜವಾದ ಹೆಸರು ಮೋಹನದಾಸ. ತಂದೆ ಕರಮಚಂದರು ರಾಜ-



ಮಹಾತ್ಮಾ ಗಾಂಧಿಯವರು

ಕೋಟ ಸಂಸ್ಥಾನದಲ್ಲಿ ದಿವಾಣರಾಗಿದ್ದರು. ಗಂಡ-ಹೆಂಡತಿ ಇಬ್ಬರೂ ಸದಾಚಾರಿಗಳು, ತುಂಬ ಧರ್ಮಿಷ್ಠರು. ಮಗ ಮೋಹನದಾಸನು ತಮ್ಮಂತೆ ಆಚಾರಶೀಲನೂ ಸತ್ಯವಂತನೂ ಆಗಬೇಕೆಂದು ಅವರು ಇಚ್ಛಿಸುತ್ತಿದ್ದರು.

ಐದು ವರುಷದವನಾಗಲು ಮೋಹನದಾಸನು ಸಾಲೆಗೆ ಹೋಗಲಾರಂಭಿಸಿದನು. ಅವನು ಗುರುಗಳು ಹೇಳಿದ ಪಾಠಗಳನ್ನು ಬಹಳ ಪ್ರಾಮಾಣಿಕತನದಿಂದ ಕಲಿಯುತ್ತಿದ್ದನು. ಸುಳ್ಳು ಹೇಳುವುದು ಅವನಿಗೆ ಗೊತ್ತೇ ಇರಲಿಲ್ಲ. ಒಮ್ಮೆ ಗುರುಗಳು, ಮನೆಯಲ್ಲಿ ಬಿಡಿಸಿಕೊಂಡು ಬರಲು ಕೆಲವು ಲೆಕ್ಕಗಳನ್ನು

ಹೇಳಿದ್ದರು. ಅವು ಮೋಹನದಾಸನಿಗೆ ಬರಲಿಲ್ಲ. ಆದರೆ ಅವನು ಬೇರೆ ಹುಡುಗರು ಬಿಡಿಸಿದ ಲೆಕ್ಕಗಳನ್ನು ನೋಡಿ ಬರೆದುಕೊಂಡು ಹೋಗಲಿಲ್ಲ; ತನಗೆ ಲೆಕ್ಕಗಳು ತಿಳಿಯಲಿಲ್ಲವೆಂದು ನಿಜಸಂಗತಿಯನ್ನು ಗುರುಗಳ ಮುಂದೆ ಹೇಳಿದನು. ಅವನ ಸತ್ಯತನಕ್ಕೆ ಮೆಚ್ಚಿ ಗುರುಗಳು ಅವನನ್ನು ಕ್ಷಮಿಸಿದರು. ಇನ್ನೊಂದು ಸಲ ಸಾಲೆಗೆ ಸಾಹೇಬರು ಬಂದಿದ್ದರು. ಅವರು ಎಲ್ಲ ವಿದ್ಯಾರ್ಥಿಗಳಿಗೂ ಕೆಲವು ಶಬ್ದಗಳನ್ನು ಬರೆಯಲು ಹೇಳಿದರು. ಮೋಹನದಾಸನು ತಪ್ಪು ಬರೆದಿದ್ದನು. ಅದನ್ನು ಗುರುಗಳು ನೋಡಿದರು; ನೆರೆಯುವನು ಬರೆದಿರುವುದನ್ನು ನೋಡಿ ತಿದ್ದಿಕೊಳ್ಳಲು ಅವನಿಗೆ ಸನ್ನೆಮಾಡಿದರು. ಆದರೆ ಮೋಹನದಾಸನು ಹಾಗೆ ಮಾಡಲಿಲ್ಲ. ಸಾಹೇಬರು ಹೋದ ಮೇಲೆ ಗುರುಗಳು ಮೋಹನದಾಸನನ್ನು ಕೇಳಿದರು. ಆಗ ಅವನು 'ಬೇರೆಯವರು ಬರೆದುದನ್ನು ನೋಡಿ ಬರೆಯುವುದು ಮೋಸವೆಂದು ನಾನು ಭಾವಿಸುತ್ತೇನೆ' ಎಂದು ಸ್ಪಷ್ಟವಾಗಿ ಹೇಳಿದನು.

ಸಾಲೆಯ ಅಭ್ಯಾಸದ ಜೊತೆಗೆ ಮೋಹನದಾಸ ಧಾರ್ಮಿಕಕಥೆಗಳನ್ನೂ ಓದುತ್ತಿದ್ದನು. 'ಶ್ರವಣನ ಭಕ್ತಿ' 'ಸತ್ಯನಿಷ್ಠ ಹರಿಶ್ಚಂದ್ರ' ಮುಂತಾದ ಕಥೆಗಳನ್ನು ಓದಿ, ತಾನೂ ಅವರಂತೆ ಭಕ್ತಿವಂತನೂ ಸತ್ಯವಂತನೂ ಆಗಬೇಕೆಂದು ಯೋಚಿಸುತ್ತಿದ್ದನು. ಒಮ್ಮೆ ಮೋಹನದಾಸನು ದುಷ್ಟ ಗೆಳೆಯರ ಸಂಗತಿಗೆ ಬಿದ್ದು ಸಾಲಮಾಡಿದನು; ತಂದೆ-ತಾಯಿಗೆ ಗೊತ್ತಾಗದಂತೆ ಕೈಯೊಳಗಿನ ಉಂಗುರವನ್ನು ಮಾರಿ ಸಾಲ ತೀರಿಸಿದನು. ಇದು ಅವನ ಮನಸ್ಸಿನಲ್ಲಿ ಬಹಳ ಕಳವಳವನ್ನುಂಟುಮಾಡಿತು. 'ನಾನು ತಾಯಿ-ತಂದೆಗಳನ್ನು ಮೋಸಮಾಡಿದೆನಲ್ಲ' ಎಂದು ಹಳಹಳಿಸತೊಡಗಿದನು. ತಾನು ಮಾಡಿದ ತಪ್ಪನ್ನು ಒಂದು ಕಾಗದದಲ್ಲಿ ಬರೆದು ತಂದೆಗೆ ತಿಳುಹಿದನು. ತಂದೆಯು ಮಗನ ಸತ್ಯಪ್ರೀತಿಯನ್ನು ಕಂಡು ಒಳಗೊಳಗೆ ಸಮಾಧಾನಪಟ್ಟರು; ಮೋಹನದಾಸನನ್ನು ಕ್ಷಮಿಸಿದರು. ಹೀಗೆ ಗಾಂಧಿಯವರಲ್ಲಿ ಚಿಕ್ಕಂದಿನಿಂದಲೂ ಸದ್ಗುಣಗಳು ಮನೆಮಾಡಿಕೊಂಡಿದ್ದುವು.

ಗಾಂಧಿಯವರು ಹದಿಮೂರು ವರ್ಷದವರಾದರು. ಆಗಲೇ ಕಸ್ತೂರಬಾ ಎಂಬ ಕನ್ಯೆಯೊಡನೆ ಅವರ ಲಗ್ನವಾಯಿತು. ಅವರು ೧೮ ವರ್ಷಕ್ಕೆ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಪಾಸಾದರು. ಅಷ್ಟರಲ್ಲಿಯೆ ಅವರ ತಂದೆ ಕಾಲವಾಗಿದ್ದರು. ತಾಯಿ ಮೋಹನದಾಸರನ್ನು ಕಾಲೇಜಿನಲ್ಲಿ ಓದಲು ಕಳುಹಿದಳು. ಆದರೆ ಬ್ಯಾರಿಸ್ಟರ್ ಪರೀಕ್ಷೆಯ ಅಭ್ಯಾಸಕ್ಕಾಗಿ ಅವರನ್ನು ಇಂಗ್ಲಂಡಿಗೆ ಕಳುಹಬೇಕೆಂದು ಬಹಳ ಜನರು ಆಗ್ರಹ ಮಾಡಿದರು. ಅದರಂತೆ ಪುತಳಾಬಾಯಿಯು ಮಗನನ್ನು ಇಂಗ್ಲಂಡಿಗೆ ಕಳುಹಲು ಒಪ್ಪಿದಳು. ಆದರೆ ಆಕೆ ಧರ್ಮನಿಷ್ಠಳು; ಆದುದರಿಂದ ಮಗನಿಗೆ "ನಾನು ಮಾಂಸಾಹಾರ ಮಾಡುವುದಿಲ್ಲ, ಮದ್ಯವನ್ನು

ಕುಡಿಯುವುದಿಲ್ಲ” ಎಂದು ಆಣೆ ಮಾಡಿಸಿಕೊಂಡಳು. ಬಳಿಕ ಪ್ರಯಾಣಕ್ಕೆ ಅಪ್ಪಣೆಕೊಟ್ಟಳು.

ಗಾಂಧಿಯವರು ಬ್ಯಾರಿಸ್ಟರರಾಗಿ ಇಂಗ್ಲಂಡಿನಿಂದ ಮರಳಿ ದೇಶಕ್ಕೆ ಬಂದರು. ಮುಂಬಯಿಯಲ್ಲಿ ವಕೀಲಿಯನ್ನು ಪ್ರಾರಂಭಿಸಿದರು. ಆದರೆ ಬಹಳ ದಿವಸ ಮುಂಬಯಿಯಲ್ಲಿ ಅವರು ಉಳಿಯಲಿಲ್ಲ. ದಕ್ಷಿಣಆಫ್ರಿಕೆಯಲ್ಲಿ ಖಟ್ಲೆಯೊಂದನ್ನು ನಡೆಸಲು, ದಾದಾ ಅಬ್ದುಲ್ಲಾ ಎಂಬ ವ್ಯಾಪಾರಿಯು ಗಾಂಧಿಯವರನ್ನು ಕೇಳಿಕೊಂಡನು. ಅದಕ್ಕೆ ಸಮ್ಮತಿಸಿ ಅವರು ದಕ್ಷಿಣ ಆಫ್ರಿಕೆಗೆ ಹೋದರು. ಅಲ್ಲಿಯ ಇಂಗ್ಲಿಷ್ ಸರಕಾರದವರು ಭಾರತೀಯರ ಮೇಲೆ ಮಾಡುತ್ತಿದ್ದ ಅನ್ಯಾಯಗಳನ್ನು ಕಂಡು, ಗಾಂಧಿಯವರು ತುಂಬ ದುಃಖಪಟ್ಟರು. ನಾತಾಳ ಪ್ರದೇಶದಲ್ಲಿಯ ಭಾರತೀಯರನ್ನು ಒಂದುಗೂಡಿಸಿ 'ನಾತಾಳ ಇಂಡಿಯನ್ ಕಾಂಗ್ರೆಸ್' ಎಂದು ಒಂದು ಸಂಸ್ಥೆಯನ್ನು ಸ್ಥಾಪಿಸಿದರು. ತಾವೂ ಒಂದು ಆಶ್ರಮವನ್ನು ಸ್ಥಾಪಿಸಿ ಅಲ್ಲಿಯೇ ನಿಂತರು. ಇಂಗ್ಲಿಷರ ಅನ್ಯಾಯಗಳನ್ನು ತಡೆಯಲು ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಗಾಂಧಿಯವರೊಡನೆ ಕೈದಿಗಳಾಗಿ ಸಾವಿರಾರು ಜನರು ತುರಂಗಗಳನ್ನು ಸೇರಿದರು. ಅಲ್ಲಿ ಹೇಳಲಾಗದ ಕಷ್ಟಗಳನ್ನು ಅನುಭವಿಸಿದರು. ಆದರೂ ಗಾಂಧಿಯವರು ತಮ್ಮ ಸತ್ಯದ ಮಾರ್ಗವನ್ನು ಬಿಡಲಿಲ್ಲ. ಅಲ್ಲಿಯ ಸರಕಾರಕ್ಕೆ ತಲೆಬಾಗಿಸಲಿಲ್ಲ. ಕಡೆಗೆ ಸರಕಾರದವರೇ ತಮ್ಮ ತಪ್ಪನ್ನು ಒಪ್ಪಿಕೊಂಡರು. ಗಾಂಧಿಯವರು ಜಯಶೀಲರಾದರು. ಆ ಮೇಲೆ ಅವರು ಸ್ವದೇಶಕ್ಕೆ ಮರಳಿ ಬಂದರು.

ಅಷ್ಟರಲ್ಲಿಯೆ ಜಗತ್ತಿನ ೧ನೆಯ ಮಹಾಯುದ್ಧ ಪ್ರಾರಂಭವಾಯಿತು. ಆಗ ಆ ಪ್ರಸಂಗದಲ್ಲಿ ಗಾಂಧಿಯವರು ಇಂಗ್ಲಿಷ್ ಸರಕಾರದವರಿಗೆ ಸಹಾಯ ಮಾಡಿದರು. 'ಯುದ್ಧವು ಮುಗಿದ ಮೇಲೆ ಸರಕಾರದವರು ಜನರ ಉಪಕಾರವನ್ನು ಸ್ಮರಿಸುವರು; ಜನರ ಬೇಡಿಕೆಯನ್ನು ಪೂರಯಿಸುವರು' ಎಂದು ಗಾಂಧಿಯವರು ನಂಬಿದರು. ಆದರಂತೆ ಪೂರ್ಣಮನಸ್ಸಿನಿಂದ ಸರಕಾರಕ್ಕೆ ಸಹಾಯ ಮಾಡಿದರು. ಆದರೂ ಸರಕಾರದವರು ಭಾರತೀಯರನ್ನು ಸರಿಯಾಗಿ ನೋಡಲಿಲ್ಲ. ಪಂಜಾಬದಲ್ಲಂತೂ ಸಾವಿರಾರು ಜನರನ್ನು ಗುಂಡುಹಾಕಿ ಕೊಂದರು. ಅದನ್ನು ನೋಡಿ ಗಾಂಧಿಯವರು ಬಹಳ ನೊಂದುಕೊಂಡರು. ಮುಂದೆ ಸ್ವಲ್ಪ ದಿನಗಳಲ್ಲಿಯೆ ಸರಕಾರದ ವಿರುದ್ಧ ಅಸಹಕಾರದ ಚಳವಳಿಯನ್ನು ಪ್ರಾರಂಭಿಸಿದರು. ಪರದೇಶೀ ವಸ್ತುಗಳ ಮೇಲೆ ಬಹಿಷ್ಕಾರ ಹಾಕಿದರು. 'ಸ್ವದೇಶೀ' ಚಳವಳವೂ ಆರಂಭವಾಯಿತು. ಎಲ್ಲೆಲ್ಲಿಯೂ ಪರದೇಶೀ ಬಟ್ಟೆಗಳ ಹೋಳಿ ನಡೆಯಿತು. ಭಾರತದ ತುಂಬ ಸ್ವದೇಶೀ ಮತ್ತು ಅಸಹಕಾರದ ಚಳವಳಗಳು ಹಬ್ಬಿದುವು. ಸರಕಾರದವರು ಎಷ್ಟೋ ಜನರನ್ನು ಹಿಡಿದು

ತುರಂಗಗಳಲ್ಲಿ ಹಾಕಿದರು. ಗುಂಡು ಹಾರಿಸಿ ಕೊಂದರು. ಆದರೂ ಚಳವಳವು ನಿಧಾನವಾಗಿ ಮುಂದೆ ಸಾಗಿತು.

ಕ್ರಿ. ಶ. ೧೯೩೦ರಲ್ಲಿ ಗಾಂಧಿಯವರು ಉಪ್ಪಿನ ಸತ್ಯಾಗ್ರಹವನ್ನು ಕೈಕೊಂಡರು. ಆಗಂತೂ ದೇಶವೇ ಗಾಂಧಿಯವರನ್ನು ಹಿಂಬಾಲಿಸಿ ಚಳವಳಿಯಲ್ಲಿ ಭಾಗವಹಿಸಿತು. ಭಾರತೀಯರನ್ನು ಸಮಾಧಾನಪಡಿಸದೆ ಸರಕಾರಕ್ಕೆ ಬೇರೆ ಮಾರ್ಗವಿಲ್ಲದಾಯಿತು. ಜನರ ಬೇಡಿಕೆಗಳನ್ನು ತಿಳಿದುಕೊಳ್ಳಲು ಬ್ರಿಟಿಷ್ ಸರಕಾರದವರು ದುಂಡುಮೇಜಿನ ಪರಿಷತ್ತನ್ನು ಕರೆದರು. ಒಂದು ಪಂಚೆ ಉಟ್ಟುಕೊಂಡು ಒಂದು ಪಂಚೆ ಹೊದ್ದುಕೊಂಡೇ ಗಾಂಧಿಯವರು ಇಂಗ್ಲಂಡಿಗೆ ಹೋದರು. 'ಭಾರತೀಯರ ಪರಿಸ್ಥಿತಿ ನನ್ನಂತೆಯೇ ಇದೆ. ಅದು ಸುಧಾರಿಸಬೇಕಾದರೆ ನಮಗೆ ಸ್ವಾತಂತ್ರ್ಯ ಬೇಕು' ಎಂದು ಎಲ್ಲರಿಗೂ ತೋರಿಸಿಕೊಟ್ಟರು. ಆದರೂ ಏನೂ ಉಪಯೋಗವಾಗಲಿಲ್ಲ. ಆದುದರಿಂದ ತಿರುಗಿ ಬಂದಮೇಲೆ ಗಾಂಧಿಯವರು ಮತ್ತೆ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಅವರನ್ನು ಸರಕಾರದವರು ಮತ್ತೆ ತುರಂಗದಲ್ಲಿ ಹಾಕಿದರು. ಅಲ್ಲಿ ಹರಿಜನರ ಸಲುವಾಗಿ ೨೧ ದಿನಗಳ ವರೆಗೆ ಉಪವಾಸ ಮಾಡಿದರು. ಮುಂದೆ ಸರಕಾರದವರು ಗಾಂಧಿಯವರ ಕೂಡ ಒಪ್ಪಂದದ ಮಾತು ನಡೆಸಿ, ಉಪ್ಪಿನ ಮೇಲಿನ ಕರವನ್ನು ತೆಗೆದುಹಾಕಲು ಸಮ್ಮತಿಸಿದರು. ಕೆಲವು ಹೊಸ ಸುಧಾರಣೆಗಳನ್ನೂ ಜಾರಿಯಲ್ಲಿ ತರಲು ಒಪ್ಪಿಕೊಂಡರು.

೧೯೪೨ರಲ್ಲಿ ಗಾಂಧಿಯವರು 'ಚಲೇಜಾವ್' ಚಳವಳಿಯನ್ನು ಪ್ರಾರಂಭಿಸಿದರು. ಇದರಿಂದ ಇಂಗ್ಲಿಷರಿಗೆ ತುಂಬ ಜಳ ತಗುಲಿತು. ಭಾರತವನ್ನು ಬಿಡಬೇಕಾಗಿ ಬಂದಿತು. ೧೯೪೭ನೆಯ ಆಗಸ್ಟ್ ೧೫ನೆಯ ತಾರೀಖಿನ ದಿವಸ, ಭಾರತಕ್ಕೆ ಸ್ವಾತಂತ್ರ್ಯ ಕೊಟ್ಟು ಅವರು ತಮ್ಮ ದೇಶಕ್ಕೆ ಹೋದರು. ಗಾಂಧಿಯವರಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ೨೦೦ ವರ್ಷಗಳಿಂದ ಬ್ರಿಟಿಷರ ದಾಸ್ಯದಲ್ಲಿ ಕೊಳೆಯುತ್ತಿದ್ದ ಭಾರತೀಯರು ಅಂದು ಸ್ವತಂತ್ರರಾದರು. ದೇಶಕ್ಕೆ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟ ತಂದೆ 'ರಾಷ್ಟ್ರಪಿತ' ಎಂದು ಗಾಂಧಿಯವರನ್ನು ಜನರೆಲ್ಲ ಕರೆಯತೊಡಗಿದರು. ಮುಂದೆ ಐದಾರು ತಿಂಗಳಲ್ಲಿಯೇ ಗಾಂಧಿಯವರು ದಿಲ್ಲಿಯಲ್ಲಿ, ಒಬ್ಬ ತಲೆತಿರುಕನ ಗುಂಡಿಗೆ ಆಹುತಿಯಾಗಿ ಮರಣಹೊಂದಿದರು. ಅಂದು ಜಗತ್ತಿನ ಮೂಲೆ-ಮೂಲೆಯಲ್ಲಿಯೂ ಜನರು ಗಾಂಧಿಯವರನ್ನು ನೆನೆದು ಕಂಬನಿ ಸುರಿಸಿದರು.

ತಮ್ಮ ಇಡಿ ಜೀವನವನ್ನು ಗಾಂಧಿಯವರು ಜನಸೇವೆಯಲ್ಲಿಯೆ ಕಳೆದರು. ಆದುದರಿಂದ ಜನರು ಅವರನ್ನು 'ಮಹಾತ್ಮಾ' ಎಂದು ಪೂಜ್ಯಭಾವನೆಯಿಂದ ಕರೆಯತೊಡಗಿದರು. ಸತ್ಯ-ಅಹಿಂಸೆಗಳು ಗಾಂಧಿಯವರ ಮೂಲ

ಮಂತ್ರಗಳು. ಹಿಂದು-ಮುಸಲ್ಮಾನರಲ್ಲಿ ಐಕ್ಯ-ಪ್ರೇಮಗಳನ್ನು ಹುಟ್ಟಿಸಲು ಅವರು ಕಡೆತನಕ ಪ್ರಯತ್ನಮಾಡಿದರು. ಹರಿಜನರ ಉದ್ಧಾರಕ್ಕಾಗಿ ಅವರು ತುಂಬ ಕಾರ್ಯ ಮಾಡಿದರು. ಸ್ತ್ರೀಶಿಕ್ಷಣ, ಸಮಾಜಸುಧಾರಣೆಗಳ ಕಡೆಗೂ ಅವರು ಲಕ್ಷ್ಯಹಾಕಿದರು. ಸ್ವಾರ್ಥವೆಂಬುದು ಅವರಿಗೆ ಗೊತ್ತೇ ಇದ್ದಿಲ್ಲ. ಅಧಿಕಾರವನ್ನು ಅವರು ಎಂದೂ ಬಯಸಲಿಲ್ಲ.

ಗಾಂಧಿಯವರ ಹೃದಯ ಮಕ್ಕಳಂತೆಯೆ ಇದ್ದಿತು. ಅವರಿಗೆ ಮರೆ ಮೋಸಗಳು ಸೇರುತ್ತಿರಲಿಲ್ಲ. ಅವರಿಗೆ ದೇವರಲ್ಲಿ ಬಹಳ ನಂಬಿಗೆ. ಸೋಮ ವಾರಕ್ಕೊಮ್ಮೆ ಅವರು ಮೌನವ್ರತ ಮಾಡುತ್ತಿದ್ದರು. ಆತ್ಮಶುದ್ಧಿಗಾಗಿ ಎಷ್ಟೋ ಸಲ ಅವರು ಉಪವಾಸ ಮಾಡಿದರು. ಅವರು ನಿತ್ಯವೂ ಮುಂಜಾವಿನಲ್ಲಿ ಹಾಗು ಸಾಯಂಕಾಲ ಪ್ರಾರ್ಥನೆ ಮಾಡುತ್ತಿದ್ದರು. ರಾಟಿಯು ಅವರ ಪ್ರೀತಿಯ ವಸ್ತು. ಪ್ರತಿನಿತ್ಯವೂ ರಾಟಿಯ ಮೇಲೆ ನೂಲು ತೆಗೆಯುತ್ತಿದ್ದರು. ಅದೇ ನೂಲಿನಿಂದ ಬಟ್ಟೆಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಅವರ ಸರಳ ಮತ್ತು ಸಾದಾಜೀವನವನ್ನು ನಾವು ಕಲಿತುಕೊಳ್ಳಬೇಕು. ನಮ್ಮ ನಡೆ-ನುಡಿಗಳ ಲ್ಲಿಯೂ ನಾವು ಅವರನ್ನು ಅನುಕರಿಸಬೇಕು.

### ಅಭ್ಯಸನಗಳು

೧. ಗಾಂಧೀಜಿಯ ತಂದೆ-ತಾಯಿಗಳಾರು?
೨. ಚಿಕ್ಕಂದಿನಲ್ಲಿ ಗಾಂಧೀಜಿಯ ಸ್ವಭಾವವು ಹೇಗಿತ್ತು?
೩. ಗಾಂಧೀಜಿಯವರಿಗೆ ಪ್ರೀತಿಯ ಕಥೆಗಳು ಯಾವುವು?
೪. ಗಾಂಧೀಜಿಯ ತಾಯಿಯು ಇವರಿಂದ ಇಂಗ್ಲಂಡಿಗೆ ಹೋಗುವ ಮುಂದೆ ಯಾವ ಆಣೆಯನ್ನು ಮಾಡಿಸಿಕೊಂಡರು?
೫. ಇವರು ದಕ್ಷಿಣ ಆಫ್ರಿಕೆಗೆ ಏಕೆ ಹೋದರು?
೬. ಇವರು ಅಲ್ಲಿ ಮಾಡಿದ ಮಹತ್ತ್ವದ ಕಾರ್ಯಗಳಾವುವು?
೭. ಆಫ್ರಿಕೆಯಿಂದ ಬಂದ ಮೇಲೆ ಭಾರತದಲ್ಲಿ ಯಾವ ಯಾವ ಕೆಲಸಗಳನ್ನು ಮಾಡಿದರು?
೮. "ಚಲೇಜಾವ್" ಚಳವಳಿಯ ಪರಿಣಾಮವೇನಾಯಿತು?
೯. ಗಾಂಧೀಜಿಗೆ ಮಹಾತ್ಮರೆಂದು ಜನರು ಏಕೆ ಕರೆಯಹತ್ತಿದರು?
೧೦. ಗಾಂಧೀಜಿಯ ಗುಣಗಳನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

# ೫೦. ವಲ್ಲಭಭಾಯಿ ಪಟೇಲರು

ವಲ್ಲಭಭಾಯಿ ಪಟೇಲರು ಗುಜರಾತ ಪ್ರಾಂತದವರು. ಖೇಡಾಜಿಲ್ಲೆಯಲ್ಲಿಯ "ಕರಮಸದ" ಎಂಬ ಹಳ್ಳಿ ಅವರ ಹುಟ್ಟೂರು. ಅವರ ತಂದೆ ಜವ್ಹೇರ-ಭಾಯಿಯು ಆ ಊರ ಪಟೇಲನಾಗಿದ್ದನು. ಅವರ ಮನೆಯ ಮುಖ್ಯ ಉದ್ಯೋಗವು ಒಕ್ಕಲುತನ. ಜವ್ಹೇರಭಾಯಿಯ ತಮ್ಮನೊಬ್ಬನು ನಡಿಯಾದದಲ್ಲಿ ನವಕರಿ ಮಾಡುತ್ತಿದ್ದನು. ಆದುದರಿಂದ ವಲ್ಲಭಭಾಯಿ ಹಾಗು ಅವರ ಅಣ್ಣ ವಿಟ್ಠಲಭಾಯಿ ಇವರ ಅಭ್ಯಾಸವೆಲ್ಲ ನಡಿಯಾದದಲ್ಲಿಯೇ ಮುಂದುವರಿಯಿತು.



ಭಾರತದ 'ಉಕ್ಕಿನ ಮನುಷ್ಯ' ಪಟೇಲರು

ವಲ್ಲಭಭಾಯಿಯವರು ಚಿಕ್ಕವರಿರುವಾಗ ಅಷ್ಟು ಬುದ್ಧಿವಂತರೆನಿಸಿಕೊಂಡಿರಲಿಲ್ಲ. ಅಲ್ಲದೆ ಮೇಲಿಂದ ಮೇಲೆ ಸಾಲೆಯಲ್ಲಿ ಗೊಂದಲವನ್ನು ಹಾಕುತ್ತಿದ್ದರು. ಗುರುಗಳ ಜೊತೆಯಲ್ಲಿ ನಿಷ್ಠುರರಾಗಿ ಮಾತಾಡುತ್ತಿದ್ದರು. ಜಗಳವಾಡಲು ಕೂಡ ಹಿಂದೆ-ಮುಂದೆ ನೋಡುತ್ತಿದ್ದಿಲ್ಲ. ಒಮ್ಮೆ ಗುರುಗಳ

ಕೂಡ ವಾದ ಹೂಡಿ ಇವರು ಮೊದಲಿನ ಸಾಲೆಯನ್ನು ಬಿಟ್ಟು ಬೇರೊಂದು ಸಾಲೆಗೆ ಹೋಗಬೇಕಾಯಿತು. ಸುಮ್ಮನೆ ಹರಟೆ ಹೊಡೆಯುವುದು ಬಾಲ್ಯ-ದಲ್ಲಿಯೂ ಇವರಿಗೆ ಸೇರುತ್ತಿರಲಿಲ್ಲ.

ಸಾಲೆಯ ವಿದ್ಯಾಭ್ಯಾಸವನ್ನು ಮುಗಿಸಿ ಮುಂದೆ ಇವರು ಕಾಯ್ದೆಯ ಅಭ್ಯಾಸಮಾಡಿದರು. ವಕೀಲಿ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ಇವರು ಗೋದ್ರಾದಲ್ಲಿ ವಕೀಲಿಯನ್ನು ಪ್ರಾರಂಭಿಸಿದರು. ಕೆಲವೇ ದಿವಸಗಳಲ್ಲಿ ವಲ್ಲಭಭಾಯಿಯವರು ಜಾಣ ವಕೀಲರೆಂದು ಹೆಸರನ್ನು ಪಡೆದರು. ಇವರ ಕೀರ್ತಿ ಸುತ್ತೆಲ್ಲ ಹಬ್ಬಿತು. ಫೌಜದಾರೀ ಖಟ್ಲೆಗಳನ್ನು ನಡೆಸುವುದರಲ್ಲಿ ಇವರು ಬಲು ಚತುರರು. ಒಳ್ಳೆ ಗಂಭೀರ ಸ್ವಭಾವ ಇವರದು. ನ್ಯಾಯಾ-ಧೀಶರು ಕೂಡ ಇವರಿಗೆ ಹೆದರುತ್ತಿದ್ದರು. ಕೆಲವು ದಿನಗಳ ವರೆಗೆ ಒಳ್ಳೆಯ ರೀತಿಯಿಂದ ವಕೀಲಿಯನ್ನು ಮಾಡಿ ಸಾಕಷ್ಟು ಹಣಗಳಿಸಿದರು. ಮುಂದೆ ಬ್ಯಾರಿಷ್ಟರರಾಗಿ ಬರಬೇಕೆಂಬ ಹಟದಿಂದ ಇಂಗ್ಲಂಡಿಗೆ ಹೋದರು.

ಇಂಗ್ಲಂಡಿನಲ್ಲಿ ಇವರು ಮನಸ್ಸುಗೊಟ್ಟು ಅಭ್ಯಾಸಮಾಡಿದರು. ಬ್ಯಾರಿ-ಸ್ಟರ್ ಪರೀಕ್ಷೆಯನ್ನು ೧ನೆಯ ತರಗತಿಯಲ್ಲಿ ೧ನೆಯ ನಂಬರು ಪಡೆದು ಪಾಸಾದರು. ಅದರಿಂದ ಇವರಿಗೆ ಒಂದು ದೊಡ್ಡ ಬಹುಮಾನ ಸಿಕ್ಕಿತು. ಅಲ್ಲದೆ ಇವರ ಬುದ್ಧಿವಂತಿಕೆಯನ್ನು ಇಂಗ್ಲಂಡಿನ ಜನರು ಸಹ ಹೊಗಳಿದರು. ಒಳಿಕ ವಲ್ಲಭಭಾಯಿಯವರು ಭಾರತಕ್ಕೆ ಬಂದರು. ಅಹಮದಾಬಾದಿನಲ್ಲಿ ತಮ್ಮ ವಕೀಲಿಯನ್ನು ಪ್ರಾರಂಭಿಸಿದರು. ಆ ಕಾಲದಲ್ಲಿ ವಲ್ಲಭಭಾಯಿಯವರು ತಮ್ಮ ಮುಂದೆ ಖಟ್ಲೆ ನಡೆಸಲು ಬರುವರೆಂದು ತಿಳಿದರೆ, ಎಷ್ಟೋ ನ್ಯಾಯಾ ಧೀಶರು ಭಯಡುತ್ತಿದ್ದರಂತೆ. ಅಷ್ಟು ದರ್ಪದ ವ್ಯಕ್ತಿ ವಲ್ಲಭಭಾಯಿ. ಮೊದ-ಮೊದಲು ಗಾಂಧಿಯವರನ್ನು ಸಹ ಅವರು ಲಕ್ಷಿಸುತ್ತಿರಲಿಲ್ಲ. ಆದರೆ ಒಮ್ಮೆ ಗಾಂಧಿಯವರ ಪೂರ್ಣ ಪರಿಚಯವಾದ ಮೇಲೆ, ವಲ್ಲಭಭಾಯಿ-ಯವರು ಅವರ ನಚ್ಚಿನ ಶಿಷ್ಯರಾದರು.

ಕ್ರಿ. ಶ. ೧೯೧೭ರಲ್ಲಿ ವಲ್ಲಭಭಾಯಿಯವರು ಸಾಮಾಜಿಕ ಕಾರ್ಯದಲ್ಲಿ ಬಿದ್ದರು. ಅಹಮದಾಬಾದ ನಗರಸಭೆಯ ಅಧ್ಯಕ್ಷರಾಗಿ ಇವರು ೮ ವರ್ಷ ಕೆಲಸಮಾಡಿದರು. ಒಮ್ಮೆ ಖೇಡಾ ಜಿಲ್ಲೆಯಲ್ಲಿ ಬರವು ಬಿದ್ದಿತು. ಆಗ ಇವರು ಅತ್ತಿತ್ತ ತಿರುಗಾಡಿ ದುಡ್ಡು ಕೂಡಿಸಿ ಬಡಬಗ್ಗರಿಗೆ ಸಹಾಯ ಮಾಡಿದರು. ರೈತರ ತೆರಿಗೆಯನ್ನು ಸೂಟುಬಿಡಲು ಸರಕಾರಕ್ಕೆ ವಿನಂತಿ ಮಾಡಿಕೊಂಡರು. ಇದರಿಂದ ಎಲ್ಲ ಜನರೂ ವಲ್ಲಭಭಾಯಿಯವರನ್ನು ಪ್ರೀತಿಸಹತ್ತಿದರು. ಮುಂದೆ ಬಾರ್ಡೋಲಿಯ ಕರನಿರಾಕರಣದ ಚಳವಳಿಯಲ್ಲಂತೂ ಇವರೇ ಮುಂದಾಳಾಗಿ ನಿಂತರು. ಚಳವಳಿಯು ಭರದಿಂದ ಸಾಗಿತು. ಆಗ ಸರಕಾರ

ದವರೂ ಬೆದರಿದರು. ಕೊನೆಗೆ ರೈತರ ಕೂಡ ಸರಕಾರದವರು ಸಂಧಾನ ಮಾಡಿಕೊಂಡರು. ಇದೆಲ್ಲಕ್ಕೆ ವಲ್ಲಭಭಾಯಿಯವರೇ ಕಾರಣರಾದರು. ಆದುದರಿಂದ ಗುಜರಾತದ ಜನರು ಅವರನ್ನು "ಸರದಾರ" ಎಂದು ಕರೆಯ ತೊಡಗಿದರು.

ಗಾಂಧಿಯವರ "ಉಪ್ಪಿನ ಸತ್ಯಾಗ್ರಹ"ದಲ್ಲಿ ಸರದಾರರು ಮುಂದಾಳಾದರು. ಮುಂದೆ ಅಖಿಲಭಾರತ ಕಾಂಗ್ರೆಸಿನ ಅಧ್ಯಕ್ಷರೂ ಆದರು. ಅಂದಿನಿಂದ ಕೊನೆಯ ವರೆಗೂ ಕಾಂಗ್ರೆಸಿನ ಮುಖ್ಯ ಕಾರ್ಯಕರ್ತರಲ್ಲಿ ಅವರು ಒಬ್ಬರಾಗಿ ಇದ್ದರು. ಮೊದಲು ಗುಜರಾತದ ಮಟ್ಟಿಗೆ ಸರದಾರರಾದವರು, ಮುಂದೆ ಭಾರತಕ್ಕೇ ಸರದಾರರಾದರು.

ಗಾಂಧಿಯವರು ಪ್ರಾರಂಭಿಸಿದ ಪ್ರತಿಯೊಂದು ಸತ್ಯಾಗ್ರಹದಲ್ಲಿಯೂ ಸರದಾರರು ಇದ್ದವರೇ. "ಚಲೇಜಾವ" ಚಳವಳಿಯಲ್ಲಿ ಇವರು ಗಾಂಧೀಜಿಯವರನ್ನು ಹಿಂಬಾಲಿಸಿಯೆ ಇದ್ದರು. ಭಾರತವು ಸ್ವಾತಂತ್ರ್ಯವನ್ನು ಗಳಿಸಿದ ಮೇಲೆ, ವಲ್ಲಭಭಾಯಿಯವರು ಭಾರತದ ಉಪಪ್ರಧಾನ ಮಂತ್ರಿಗಳಾಗಿ ಮೂರು ವರ್ಷಗಳ ವರೆಗೆ ಕೆಲಸಮಾಡಿದರು. ಆಗ ಭಾರತದಲ್ಲಿ ಇದ್ದ ಸುಮಾರು ೬೦೦ ದೇಶೀಯ ಸಂಸ್ಥಾನಗಳನ್ನು ವಿಲೀನಗೊಳಿಸಿ, ಅವೆಲ್ಲ ಒಂದೇ ಆಡಳಿತದ ಕೆಳಗೆ ಬರುವಂತೆ ಮಾಡಿದ ಕೀರ್ತಿ ವಲ್ಲಭಭಾಯಿಯವರದು. ಸರದಾರರು ನಾನಾರೀತಿಯಿಂದ ದೇಶಕ್ಕೆ ಸೇವೆಸಲ್ಲಿಸಿ, ಕ್ರಿ. ಶ. ೧೯೫೦ರಲ್ಲಿ ಮರಣಹೊಂದಿದರು. ಮರಣಕಾಲದಲ್ಲಿ ಅವರಿಗೆ ೭೫ ವರ್ಷಗಳಾಗಿದ್ದುವು.

ಸರದಾರರ ಮನಸ್ಸು ಬಹಳ ಗಟ್ಟಿಯಾದುದು. ಅವರ ಹೆಂಡತಿಯು ತೀರಿಕೊಂಡ ತಂತಿಬಂದಾಗ, ಅವರು ಕೋರ್ಟಿನಲ್ಲಿ ಒಂದು ಖಟ್ಲೆಯನ್ನು ನಡೆಸುತ್ತಿದ್ದರಂತೆ. ಪೋಸ್ಟ್ಮನನು ಕೊಟ್ಟ ತಂತಿಯ ಕಾಗದವನ್ನು ಓದಿ ನೋಡಿ, ಕಿಸೆಯಲ್ಲಿ ಹಾಕಿಕೊಂಡು ಹಾಗೆಯೇ ಅವರು ಖಟ್ಲೆ ನಡೆಸಿದರಂತೆ.

ವಲ್ಲಭಭಾಯಿಯವರ ಮುಖವು ಉಗ್ರವಾದುದು. ಮಾತು ಕಡಿಮೆ; ಕೃತಿಗೇ ಅವರು ಹೆಚ್ಚು ಮಹತ್ತ್ವವನ್ನು ಕೊಡುವವರು. ಅವರು ಆಡಿದುದನ್ನು ಮಾಡಿಯೇಬಿಡುತ್ತಿದ್ದರು. ಮುಯ್ಯಕ್ಕೆ ಮುಯ್ಯನ್ನು ತೀರಿಸಿಕೊಂಡೇ ಬಿಡಬೇಕೆಂದು ಅವರು ಹೇಳುತ್ತಿದ್ದರು. ಅವರ ಮನಸ್ಸು ವಜ್ರದಂತೆ ಕಠೋರವಾದುದು; ಆದರೆ ಭಾರತದ ಜನರ ಕಷ್ಟನಷ್ಟಗಳನ್ನು ಕಂಡಾಗ ಅವರು ತಾಯಿಯಂತೆ ದುಃಖಿಸುತ್ತಿದ್ದರು ಆದರೂ ಧೈರ್ಯವನ್ನು ಅವರು ಎಂದೂ ಬಿಡಲಿಲ್ಲ. ಆದುದರಿಂದಲೇ ಜನರು ಅವರನ್ನು "ಉಕ್ಕಿನ ಮನುಷ್ಯ" ಎಂದು ಕರೆಯುತ್ತಿದ್ದರು.

## ಅಭ್ಯಸನಗಳು

೧. ವಲ್ಲಭಭಾಯಿಯವರು ಜನಿಸಿದ ಊರು ಯಾವುದು?

೨. ಚಿಕ್ಕಂದಿನಲ್ಲಿ ಇವರ ಸ್ವಭಾವವು ಎಂಥದು?

೩. ಇವರು ಯಾವ ಪರೀಕ್ಷೆಯಲ್ಲಿ ಬಹುಮಾನವನ್ನು ಸಂಪಾದಿಸಿದರು?

೪. ಜನರು ಇವರನ್ನು ಸರದಾರರೆಂದು ಏಕೆ ಕರೆಯಹತ್ತಿದರು?

೫. ವಲ್ಲಭಭಾಯಿಯವರು ಬ್ರಿಟಿಶರಿಗೆ ಹೇಳಿದ ಮಹತ್ತ್ವದ ಮಾತು ಯಾವುದು?

೬. ಸ್ವತಂತ್ರಭಾರತದಲ್ಲಿ ಉಪಮುಖ್ಯಮಂತ್ರಿಗಳಾಗಿ ಇವರು ಮಾಡಿದ ಮಹತ್ತ್ವದ ಕಾರ್ಯಗಳಾವುವು?

೭. ವಲ್ಲಭಭಾಯಿಯವರ ಕಾರ್ಯತತ್ಪರತೆಯನ್ನು ತೋರಿಸುವ ಪ್ರಸಂಗವನ್ನು ವರ್ಣಿಸಿರಿ.

೮. ಜನರು ಇವರನ್ನು "ಉಕ್ಕಿನ ಮನುಷ್ಯರು" ಎಂದು ಏಕೆ ಕರೆಯುತ್ತಿದ್ದರು?